


( ಸಚಿತ್ರ ಮಾಸ ಪುಸ್ತಕಾವಳಿ )

# ೧೫

**ಸುಬೋಧ ಪ್ರಕಟನಾಲಯ,**

ಬೆಂಗಳೂರು ನಗರ

# ವಿಷಯಾನುಕ್ರಮಣಿಕೆ

ಶ್ರೀರಾಮಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ : —**

**"ಧಿಗ್ಬಲಂ ಕ್ಷತ್ರಿಯ ಬಲಂ - ಬ್ರಹ್ಮತೇಜೋಬಲಂ ಬಲಂ"** ಎಂಬ ಉಜ್ವಲ ವಾಕ್ಯರತ್ನವನ್ನು ನುಡಿದು, ಬ್ರಹ್ಮತೇಜಸ್ಸಿನ ಬಲವೆಷ್ಟು - ದೆಂಥದು, ಎಂಬುದನ್ನು ಲೋಕಕ್ಕೆ ತೋರ್ಪಡಿಸಿದ ಮಹಾಮಹಿಮರು ನಮ್ಮ ಕಥಾನಾಯಕರಾದ ಶ್ರೀ ವಿಶ್ವಾಮಿತ್ರ ಮಹರ್ಷಿಗಳು. ವಿಶ್ವಾಮಿತ್ರರು ಜನ್ಮತಃ ಮಹರ್ಷಿಗಳಲ್ಲ; ಕ್ಷತ್ರಿಯರು! ಮಹರ್ಷಿ ಪದವು ಋಷಿ ಕುಲದಲ್ಲಿ ಜನ್ಮಿಸುವುದರಿಂದಲಾಗಲೀ, ದಾನ ಧರ್ಮ ಕಾರ್ಯಾಚರಣೆಗಳಿಂದಲಾಗಲೀ, ವೇದಶಾಸ್ತ್ರಾದಿಗಳ ಅಭ್ಯಾಸದಿಂದ ಗಳಿಸಿದ ಪಾಂಡಿತ್ಯದಿಂದಾಗಲೀ ಪ್ರಾಪ್ತವಾಗದು. ಅಗಾಧ, ಅತ್ಯಗಾಧ ತಪಸ್ಸಿಗೆ ಮಾತ್ರವೇ ಲಭ್ಯವಾಗುವ ಈ ಮಹರ್ಷಿ ಪದವನ್ನೂ, ಅದಕ್ಕಿಂತಲೂ ಉತ್ಕೃಷ್ಟವಾದ ಬ್ರಹ್ಮರ್ಷಿ ಪದವನ್ನೂ ನಮ್ಮ ಕಥಾನಾಯಕರು, ಲೋಕಕ್ಕೇ ಅದ್ಭುತವೆನ್ನಿಸುವಂತಹ ತಮ್ಮ ಅಲೌಕಿಕ ತಪಸ್ಸಾಮರ್ಥ್ಯದಿಂದ ಗಳಿಸಿದರು. ಅಪೂರ್ವವಾದ - ಅಗಾಧವಾದ ಫಲವನ್ನು ಬಯಸುವವನು ಅಗಾಧ ಕಷ್ಟಗಳಿಗೆ ಬೆದರದೆ ಅಲೌಕಿಕ ತ್ಯಾಗಮಾಡಲೂ ಸಿದ್ಧನಿರಬೇಕು. ಬ್ರಹ್ಮರ್ಷಿ ಪದವಿಯೆಂಬುದೇನು ಮಕ್ಕಳಾಟಿಕೆಯೇ? ಸಾಮಾನ್ಯ ಕ್ಷತ್ರಿಯನಾಗಿದ್ದ ಒಬ್ಬನು ಮಹತ್ವದ ಬ್ರಹ್ಮರ್ಷಿ ಸ್ಥಾನವನ್ನು ಪಡೆಯಬೇಕೆಂದರೆ ಅದೇನು ಸುಲಭಕ್ಕೆ ಸಾಧ್ಯವಾದೀತೆ? ಜಿತೇಂದ್ರಿಯರೂ ಪರ್ವತದಂತೆ ಅಚಲ ಚಿತ್ತವೃತ್ತಿಯುಳ್ಳವರೂ ಆದ ವಿಶ್ವಾಮಿತ್ರರು, ಊಹಿಸಲಾಗದ ಅನಂತ ವಿಪತ್ಪರಂಪರೆಗಳನ್ನು ದಾಟಿ, ಕೊನೆಗೂ ಬ್ರಹ್ಮರ್ಷಿ ಪದವಿಯನ್ನು ಸಂಪಾದಿಸಿ ಧನ್ಯತೆಯನ್ನು ಹೊಂದಿದರು. ಲೋಕದಲ್ಲಿ 'ದೈವಸಹಾಯ - ಅದೃಷ್ಟಬಲ ಮುಂತಾದುವುಗಳನ್ನು ಲಕ್ಷ್ಯಮಾಡದೆ, ಕೇವಲ ಪುರುಷಪ್ರಯತ್ನದಿಂದಲೇ ಸಮಸ್ತ ಕಾರ್ಯಗಳನ್ನೂ ಸಾಧಿಸಬಹುದು' ಎಂಬ ಅಭಿಪ್ರಾಯ

ವುಳ್ಳವರ ಸಂಗಡವೊಂದು ಉಂಟಲ್ಲವೆ? ಈ ಅಭಿಪ್ರಾಯವನ್ನುಂಟಾಗಿರುವ ಸಂಗಡಕ್ಕೆ ನಮ್ಮ ವಿಶ್ವಾಮಿತ್ರ ಮಹರ್ಷಿಗಳೇ ಆಚಾರ್ಯಪುರುಷರೆನ್ನ ಬಹುದು. ಅವರು ತಮ್ಮ ಕಾರ್ಯಸಾಧನೆಗೆ ಯಾವ ದೈವದ ಸಹಾಯ ವನ್ನೂ ಯಾಚಿಸಿದವರಲ್ಲ.—ಅದೃಷ್ಟವಶದಿಂದ ಫಲ ಉದುರುವುದೆಂದು ಅಂತರಿಕ್ಷದಕಡೆ ಮೋರೆಮಾಡಿ ಕುಳಿತಿದ್ದವರಲ್ಲ. ಕೇವಲ ತಮ್ಮ ಪುರುಷ ಪ್ರಯತ್ನದಿಂದಲೇ ಅಗಾಧ ತಪಸ್ಸನ್ನಾಚರಿಸಿ, ಬ್ರಹ್ಮಾದಿ ದೇವತೆಗಳನ್ನೂ ಮೆಚ್ಚಿಸಿ, ಅವರು ತಮ್ಮ ಮನೋರಥ ಸಿದ್ಧಿಯನ್ನು ಹೊಂದಿದರು. 'ಅಸಾಧ್ಯ' ವೆಂಬ ಪದವನ್ನು ಶಬ್ದಭಾಂಡಾರದಿಂದ ಕಿತ್ತೊಗೆಯಬೇಕೆಂದವರು ಪಾ ಶ್ಚಾತ್ಯರು ಎಂಬ ಭಾವನೆಯು ನಮ್ಮಲ್ಲಿ ಉಂಟಾಗಿದೆಯಲ್ಲವೆ! ಭಗೀರಥ ಭೀಮಸೇನ ವಿಶ್ವಾಮಿತ್ರರಂತಹ ಧೀರೋತ್ತಮರು ಜನಿಸಿದ ಈ ದೇಶೀ ಯರು ಇನ್ನೂ ಆ ಭಾವನೆಯನ್ನುಂಟಾಗಿರುವುದು ಕೇವಲ ಭಾವದಾಸ್ಯದ ಪರಿಣಾಮವಲ್ಲದೆ ಬೇರೇನು? ಆ ಪಾಶ್ಚಾತ್ಯರ ಪಿತೃಪಿತಾಮಹರು ಹುಟ್ಟು ವುದಕ್ಕೆ ಸಹಸ್ರಾರು ವರ್ಷಗಳ ಹಿಂದೆಯೇ ನಮ್ಮ ಕಥಾನಾಯಕರೂ ಇತರ ಅನೇಕಮಂದಿ ಮಹನೀಯರೂ ಆ ಮಾತನ್ನು ಭಾಷಾ ಭಾಂಡಾರ ದಿಂದ ಕಿತ್ತೊಗೆಯುವಂತಹ ಅದ್ಭುತ ಪ್ರಯತ್ನಗಳನ್ನು ನಡೆಸಿ ಸಿದ್ಧಿ ಹೊಂದಿದ್ದರು. ಸಾಗರಕ್ಕೆ ಸಾಗರವೇ ಹೇಗೆ ತಕ್ಕ ಉಪಮೆಯೋ, ಆಕಾ ಶಕ್ಕೆ ಆಕಾಶವನ್ನು ಮಾತ್ರನೇ ಹೇಗೆ ಹೋಲಿಸಿ ಹೇಳಲು ಸಾಧ್ಯವೋ ಹಾಗೆಯೇ, ಬ್ರಹ್ಮರ್ಷಿ ಶ್ರೇಷ್ಠರಾದ ವಿಶ್ವಾಮಿತ್ರರಿಗೆ ಸಮಾನರು ವಿಶ್ವಾ ಮಿತ್ರರೇ ಎಂದು ಹೇಳಬೇಕಾಗಿದೆ. ಮಹಾಮಹಿಮರವರು; ಮಹಾನು ಭಾವರವರು.

ಮನುಷ್ಯನಾಗಿ ಹುಟ್ಟಿದವನಿಗೆ ಜೀವಿತಕ್ಕೊಂದು ಧ್ಯೇಯವಿರಬೇಕು. ಒಂದು ಮಹೋನ್ನತ ಧ್ಯೇಯವಿದ್ದರಲ್ಲದೆ, ಮನಸ್ಸಿನಲ್ಲಿ ಮಹತ್ವದ ಯೋ ಚನೆಯೂ, ಅದನ್ನನುಸರಿಸಿದ ಕಾರ್ಯ ಪ್ರವೃತ್ತಿಯೂ ಉಂಟಾಗದು. ಎರಡು ಕಾಸು-ಕಡ್ಡಿಗಳನ್ನಾರ್ಜಿಸಿ, ನಾಲ್ಕಾರು ಮಕ್ಕಳನ್ನು ಹೆತ್ತು, ಹೊಟ್ಟೆಯ ಪಾಡಿಗಾಗಿ-ಮನಸ್ಸಾಕ್ಷಿಗೆ ವಿರೋಧವಾದ ಎಂಥದೋ ಒಂದು ಉದ್ಯೋಗ ಮಾಡಿಕೊಂಡು, ಕಾಲವನ್ನು ತಳ್ಳುತ್ತ, ಧ್ಯೇಯರಹಿತವಾಗಿ ಜೀವಿಸುವ ಜೀವನವು ವ್ಯರ್ಥ ಜೀವನವು! 'ದಶೇಂದ್ರಿಯ ಸಂಪತ್ತಿಯನ್ನು

ಗಳಿಸಿ, ಶ್ರೇಷ್ಠಜೀವಿ - ಮನುಷ್ಯನಾಗಿ ಜನಿಸಿದ ನಾನು ಯಾರು, ಎಲ್ಲಿಂದ ಬಂದೆನು, ಎಲ್ಲಿಗೆ ಹೋಗತಕ್ಕವನು, ಇಲ್ಲಿದ್ದು ಮಾಡಬೇಕಾದ ನನ್ನ ಕರ್ತವ್ಯವೇನು, ನಾನೀಗ ಮಾಡುತ್ತಿರುವ ಕಾರ್ಯವು ನನ್ನನ್ನು ಎಲ್ಲಿಗೆ ಕರೆದೊಯ್ಯುತ್ತಿದೆ?' ಎಂಬ ವಿಷಯಗಳಲ್ಲಿ ತೀವ್ರ ವಿಚಾರವುಂಟಾಗಿ ಮನಸ್ಸು ತಳಮಳಿಸದಿದ್ದರೆ, ಜೀವಿತಕ್ಕೆ ಒಂದು ಧ್ಯೇಯವು ಗೋಚರವಾಗಲಾರದು. ಜನ್ಮ ಮತ್ತು ಜೀವಿತ ಕ್ರಿಯೆಯ ವಿಚಾರದಲ್ಲಿ ಉಂಟಾಗುವ ಈ ಬಗೆಯ ತಳಮಳವೇ ಪ್ರಪಂಚದಲ್ಲಿ ಸುಪ್ರಸಿದ್ಧ ವ್ಯಕ್ತಿಗಳೆಂದು ವಿಖ್ಯಾತರಾಗಿರುವ ಮಹಾ ಪುರುಷರೆಲ್ಲರಿಗೂ ಮಾರ್ಗದರ್ಶಕವಾಗಿ ಧ್ಯೇಯವನ್ನು ತೋರಿಸಿದುದು. ಒಬ್ಬನನ್ನು ಪಶುಸ್ಥಿತಿಯಿಂದ ಮಾನುಷತ್ವಕ್ಕೆ ತರುವ ಅಂತಹ ಧ್ಯೇಯಸಾಧನೆಯಲ್ಲಿ ತೊಡಗಿದಾಗ, ಕಷ್ಟ ನಷ್ಟಗಳು ತಪ್ಪದೆ ಪ್ರಾಪ್ತವಾಗಿಯೇ ಆಗುವುವು. ಹಾಗೆ ಪ್ರಾಪ್ತವಾಗುವ ಕಷ್ಟಗಳನ್ನು ಮೀರಿ ನಡೆದು ಜಯವನ್ನು ಹೊಂದತಕ್ಕುದೇ ಪೌರುಷದ ಚಿಹ್ನೆಯು.

ಪ್ರಕೃತ ನಮ್ಮ ದೇಶಸ್ಥಿತಿಯಲ್ಲಿ ಬೇಕಾಗಿರುವುದು, ಎರಡು ಕಾಲು-ಎರಡು ಕಣ್ಣುಗಳನ್ನುಂಟಾಗಿ, ಜನಗಣತಿ (*Census*) ಯ ಲೆಕ್ಕದಲ್ಲಿ 'ಗಂಡಸು' ಎಂದು ಹೇಳಿಸಿಕೊಳ್ಳುವ ವ್ಯಕ್ತಿಗಳ ಕೋಟ್ಯಾವಧಿ ಸಂಖ್ಯೆಯಲ್ಲ: 'ಮುಖದ ಮೇಲೆ ಮೀಸೆ ಗಡ್ಡಗಳಿವೆ - ಆದುದರಿಂದ ಹೆಂಗಸಲ್ಲ - ಗಂಡಸು' ಎಂದು ಹೇಳಿಸಿಕೊಳ್ಳುವ ವ್ಯಕ್ತಿಗಳ ಕೋಟ್ಯಾವಧಿ ಸಂಖ್ಯೆಯೂ ಅಲ್ಲ: ತಲೆಗಳನ್ನೆಣಿಸಿ ನಮ್ಮ ಪಕ್ಷದಲ್ಲಿ ಇಷ್ಟು ಸಂಖ್ಯೆಯಿದೆ, ಇಷ್ಟು ಜನಬಲವಿದೆ ಎಂದು ತೃಪ್ತಿಗೊಳ್ಳುವ ಕಾಲವು ಕಳೆದುಹೋಯಿತು. ಈಗ ಬೇಕಾಗಿರುವವರು ಗಂಡಸುತನವುಳ್ಳ ಗಂಡಸರು. ಗಂಡಸುತನವುಳ್ಳ ಗಂಡಸರು ಹೇಗಿರುವರೆಂಬ ಬಗ್ಗೆ ನಮ್ಮ ಕಥಾನಾಯಕನನ್ನು ನೋಡಿ, ಭಗೀರಥನನ್ನು ನೋಡಿ, ಭೀಷ್ಮನನ್ನು ನೋಡಿ, ಭೀಮನನ್ನು ನೋಡಿ, ಅರ್ಜುನನನ್ನು ನೋಡಿ, ಅಭಿಮನ್ಯುವನ್ನು ನೋಡಿ, ಪರಶುರಾಮನನ್ನು ನೋಡಿ, ಪ್ರತಾಪಸಿಂಹನನ್ನು ನೋಡಿ, ಕೊನೆಯದಾಗಿ ಛತ್ರಪತಿ ಶಿವಾಜಿಯನ್ನು ನೋಡಿ, ರಣಧೀರ ಕಂಠೀರವನನ್ನು ನೋಡಿರಿ; ಅಂಥವರ ಆದರ್ಶಕ್ಕಾಗಿ ಭಾರತೀಯರು ಪರದೇಶಗಳ ಕಡೆಗೆ ತಿರುಗಬೇಕಾಗಿಲ್ಲ. ಕ್ಷುದ್ರತನ ಮೋಸ ಕಾಪಟ್ಯಾದಿಗಳಿಂದ-ಈ ಲೋಕದ ನಾಲ್ಕುಮಂದಿ ರಾಜರನ್ನು ದಿಗ್ಬಂಧನದಲ್ಲಿ ಸಿಕ್ಕಿಸಿಕೊಂಡು,

ಅಷ್ಟು ಮಾತ್ರದಿಂದಲೇ ಚಕ್ರವರ್ತಿ ಸಾರ್ವಭೌಮರೆಂದು ಹೊಗಳಿಸಿಕೊಂಡ ಗಂಡುಗಲಿಗಳನ್ನಲ್ಲ - ಇಂದ್ರಾದಿ ದಿಕ್ಪಾಲಕರಿಗೆ ಸರಿಸಮನೆನ್ನಿಸಿಕೊಂಡು, ಸಪ್ತಖಂಡ ಭೂಮಂಡಲವನ್ನು ಜಯಿಸಿ, 'ಮೂರು ಲೋಕದ ಗಂಡ' ಎಂಬ ಕೀರ್ತಿಗೆ ಪಾತ್ರರಾದ ಪ್ರಚಂಡ ರಣಪಂಡಿತರನ್ನು ಹೆತ್ತ ದೇಶ ಇದು. ಭಾರತದೇಶದ ಪೌರುಷ ಪ್ರಕಾಶದ ಧ್ಯೇಯವು, ನಾಲ್ಕೆಂಟು ಕಟಿಗೆಗಳನ್ನೂ, ಒಂದೆರಡು ಯಾನಸಾಧನಗಳನ್ನೂ ಮಾಡುವುದರಲ್ಲಿ ಪರ್ಯವಸಾನಗೊಂಡುದಲ್ಲ: ಚತುರ್ಮುಖ ಬ್ರಹ್ಮನ ಸೃಷ್ಟಿ ಕಾರ್ಯಕ್ಕೆ-ಪ್ರತಿಯಾಗಿ ಸೃಷ್ಟಿ ಮಾಡುವವರೆಗೂ ನಡೆದಿದ್ದಿತು. ನಮ್ಮ ಕಥಾನಾಯಕರು, ಅಗಾಧ ತಪಸ್ಸಂಪನ್ನರಾದ ಬ್ರಹ್ಮರ್ಷಿ ಶ್ರೇಷ್ಠರು ಮಾತ್ರವಲ್ಲ. ಅಭಿನವ ಸೃಷ್ಟಿಕರ್ತರೆಂದು ಪ್ರಖ್ಯಾತರಾದ ಮಹಾ ಪೌರುಷ ಪ್ರತಾಪ ನಿಧಿಗಳು. ತೀವ್ರ ವೈರಾಗ್ಯಶಾಲಿಯು. ಅಪ್ರತೀಯ ತೇಜಸ್ಸಂಪನ್ನತೆಯನ್ನು ಗಳಿಸಿದ್ದ ಮಹಾಮುನಿವರರು.

ಇಂತಹ ವ್ಯಕ್ತಿಶ್ರೇಷ್ಠರ ಉದಾಹರಣೆಗಳಿದ್ದೂ, ನಾವು ಉನ್ನತ ಮಾರ್ಗಗಳನ್ನು ಕೈಕೊಂಡು, ಉತ್ತಮ ಧ್ಯೇಯ ಸಾಧನೆಗಾಗಿ ಜೀವಿಸಿ, ನಮ್ಮ ಜೀವಿತಗಳನ್ನು ಸಾರ್ಥಕಗೊಳಿಸಿಕೊಳ್ಳದಿದ್ದರೆ, ನಮಗಿಂತಲೂ ಹತಭಾಗ್ಯರಿನ್ನಾರು? ನಮ್ಮ ಕಥಾನಾಯಕರು ನಮಗಲ್ಲದಿದ್ದರೂ ಇಂದಿನ ಪಾಶ್ಚಾತ್ಯರಿಗೆ ಹೇಗೆ ಧ್ಯೇಯಮೂರ್ತಿಯಾಗಿ, ಅವರ ಅಗಾಧ ಪರಿಶ್ರಮಗಳಿಗೆ ಉತ್ತೇಜಕರಾಗಿದ್ದಾರೆಂಬುದನ್ನು ಕಥಾನುಸರಣೆಯಲ್ಲಿ ವಿವರಿಸಲಾಗುವುದು. ವಾಚಕಮಹಾಶಯರು, ಗ್ರಂಥಮಾಲಾ ವಿಷಯದಲ್ಲಿ ತಮಗಿರುವ ಸ್ವಾಭಾವಿಕ ಅಭಿಮಾನವನ್ನು ಮುಂದರಿಸಿ, ಈ ಅಷ್ಟಮ ಸಂಪುಟಕ್ಕೂ ಸ್ವಹಸ್ತಪರಹಸ್ತ ಪ್ರೋತ್ಸಾಹವನ್ನುಂಟುಮಾಡುವವರಾಗಲೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ,<br>ತಾ|| ೩-೨-೧೯೩೦.

ಇತಿ ಸುಜನ ವಿಧೇಯ,<br>**ಯಂ. ರಾಮರಾವ್,**

---

ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.--೧೯೩೦.---೩೦೦೦ ಪ್ರತಿಗಳು.

॥ ಶ್ರೀರಾಮಸಹಾಯಂ ॥

## ಅಭಿನವ ಸೃಷ್ಟಿಕರ್ತ - ಬ್ರಹ್ಮರ್ಷಿ

# ವಿಶ್ವಾಮಿತ್ರರು

ಅಧ್ಯಾಯ ೧ "ವಂಶಪರಿಚಯ"

ನಮ್ಮ ಮಾತೃಭೂಮಿಯಾದ ಈ ಭಾರತದೇಶದಲ್ಲಿ ಮಾತ್ರವಲ್ಲ; -ಆದ್ಯಂತ ಪೃಥ್ವೀಮಂಡಲದಲ್ಲೇ, ನಮ್ಮ ಕಥಾನಾಯಕರಾದ ವಿಶ್ವಾಮಿತ್ರ ಮಹರ್ಷಿಗಳಿಗೆ ಸಮಾನನಾದ ಪುರುಷ ಶ್ರೇಷ್ಠನೊಬ್ಬನು, ಹಿಂದೆ ಜನಿಸ ಲಿಲ್ಲ, ಈಗ ಜನಿಸಿಲ್ಲ, ಮುಂದೆ ಜನಿಸಲಾರನು ಎಂದರೆ, ಅದು ಅತಿಶಯೋಕ್ತಿಯಲ್ಲ! ವಿಶ್ವಾಮಿತ್ರರ ದೃಢನಿಶ್ಚಯವೂ ತಪಶ್ಚರ್ಯವೂ, ಅವರು ಸಾಧಿಸಿದ ಕಾರ್ಯವೂ ಅಷ್ಟು ಅಗಾಧವಾದುವು, ಅಮಾನುಷವಾದುವು, ಅದ್ವಿತೀಯವಾದುವು! ತಮ್ಮ ಮನೋರಥ ಸಿದ್ಧಿಗಾಗಿ ಅವರು ಯಾವನೊಬ್ಬ ದೇವತೆಯ ಅನುಗ್ರಹ ಸಂಪಾದನೆಯನ್ನು ಅಪೇಕ್ಷಿಸಿ ಕುಳಿತು ಕೊಳ್ಳಲಿಲ್ಲ. ವರವನ್ನು ದಯಪಾಲಿಸೆಂದು - ಕೈ ಜೋಡಿಸಿ, ಕಂಬನಿಗರೆದು ಬೇಡಲಿಲ್ಲ. ಹಲ್ಗಿರಿದು ಯಾಚಿಸಲಿಲ್ಲ. ಅಗಾಧ ಪರಿಶ್ರಮ ಮಾಡಿದರು. ಪುರುಷ ಪ್ರಯತ್ನ ನಡೆಸಿದರು. ದೈವವನ್ನು ನಿರಾಕರಿಸಿ - ತಮ್ಮ ಅದೃಷ್ಟ ಕಲ್ಪತರುವೇನು ಪ್ರಸಾದಿಸಲಿರುವುದೋ ನೋಡಬೇಕೆಂದು ಆಶಾಬದ್ಧರಾಗಿ ಕುಳ್ಳಿರದೆ, ತಮ್ಮ ದೇಹದಲ್ಲಿ ಲಭ್ಯವಾಗಿದ್ದ ಶಕ್ತಿಸಾಮರ್ಥ್ಯಗಳ ಯೋಗ್ಯತೆಯೆಷ್ಟು ಎಂಬುದರ ಪರಮಾವಧಿ ಪರೀಕ್ಷೆ ಮಾಡಿ, ಕೊನೆಗೂ ಕೃತಕೃತ್ಯರಾದರು. ಅವರ ಅಗಾಧ ಪರಿಶ್ರಮಗಳ ಚರಿತ್ರೆಯನ್ನು ಸಾವಧಾನವಾಗಿ ನೋಡುವುದಾದರೆ, ಅದೃಷ್ಟದಿಂದಲೇ ಫಲಸಿದ್ಧಿಯಾಗುವುದು

ಎಂಬ ವಿಚಾರವು ಕೇವಲ ನಿರುದ್ಯೋಗಿಗಳಿಂದ ಬರುವ ನಿರುತ್ಸಾಹಜನಕವಾದ ಉದ್ಗಾರವೆಂದು ಮಾತ್ರ ಹೇಳಬೇಕಾಗುತ್ತದೆ.

ಈ ಮಾತನ್ನು ಕೇಳಿ ಅದೃಷ್ಟವಾದಿಗಳು ನಮ್ಮ ಮೇಲೆ ಕೋಪಿಸಿಕೊಳ್ಳಬಹುದು. 'ಒಬ್ಬನು ಈ ಜನ್ಮದಲ್ಲಿ ಪುರುಷ ಪ್ರಯತ್ನದಿಂದಲೇ ಆ ಫಲವನ್ನು ಹೊಂದಬೇಕೆಂಬುದೂ ಅವನ ಅದೃಷ್ಟದಲ್ಲ ಏಕೆ ಇರಬಾರದು'? ಎಂದೂ ಅವರು ವಾದಿಸಲು ಸಿದ್ಧರಾಗುವರೆಂದು ಬಲ್ಲೆವು. 'ಅವನು ಈಗ ಮಾಡಬೇಕಾದ ಪ್ರಯತ್ನಕ್ಕೆ ತಕ್ಕ ಯೋಜನೆಯೂ ಅದಕ್ಕೆ ಆವಶ್ಯಕವಾದ ಇತರ ಅನುಕೂಲತೆಗಳೂ ಅವನಿಗೆ ಅದೃಷ್ಟ ಯೋಗದಿಂದಲೇ ಲಭ್ಯವಾಗುವುವು ಎಂದಾದರೂ ಏಕೆ ಹೇಳಬಾರದು' ಎಂಬವರೆಗೂ ಅವರ ವಾದವು ಸಾಗುವುದು. ಹೀಗೆಯೇ ವಿಚಾರ ಸರಣಿಯನ್ನು ಎಲ್ಲಿಯವರೆಗೆ ಬೇಕಾದರೂ ಬೆಳೆಸಿ ಕೊಂಡೊಯ್ದು, ಒಬ್ಬನು ಏಳುವುದಕ್ಕೂ, ಕೂಡುವುದಕ್ಕೂ, ಉಣ್ಣುವುದಕ್ಕೂ, ಉಸಿರಾಡುವುದಕ್ಕೂ, ಅತ್ತಿತ್ತ ಚಲಿಸುವುದಕ್ಕೂ ದೈವಸಹಾಯವು-ಅರ್ಥಾತ್ ಅವರು ಹೇಳುವಂತೆ ಅದೃಷ್ಟ ಶಕ್ತಿಯೇ ಕಾರಣವೆಂಬುದನ್ನು ಸಿದ್ಧಮಾಡಲೂ ಸಾಧ್ಯವುಂಟು. ಆದರೆ, ನಿಶ್ಚಯವನ್ನು ಹೇಳುವುದಾದರೆ, ಅದೃಷ್ಟವೆಂಬುದೊಂದು ಇದ್ದಲ್ಲಿ ಅದು ಯಾವುದೊಂದು ಕಾರ್ಯಕ್ಕೂ ಪ್ರೇರಕವಾಗಬಹುದು ಮಾತ್ರ! ತರುವಾಯ ಕಾರ್ಯ ಪ್ರಾರಂಭವಾಗತಕ್ಕುದೂ, ಫಲೋದಯ ಪರ್ಯಂತ ನಡೆಯತಕ್ಕುದೂ ಪುರುಷ ಪ್ರಯತ್ನವನ್ನು ಅನುಸರಿಸಿಯೇ ಸಾಗಬೇಕಾಗುವುದು. ಅದೃಷ್ಟಯೋಗವನ್ನು ಮಾತ್ರ ನಂಬಿ, ಪುರುಷ ಪ್ರಯತ್ನ ಶೂನ್ಯವಾಗಿ ಕುಳಿತಿದ್ದರೆ, ಲೋಕವು ಇಂದು ಯಾವ ಸ್ಥಿತಿಯಲ್ಲಿ ಇರುತ್ತಿದ್ದಿತೆಂದು ಹೇಳಲು ಸಾಧ್ಯವಿಲ್ಲ. ಲೋಕದಲ್ಲಿ ನಿತ್ಯವೂ ಅಗಾಧ ಪರಿಶ್ರಮವು ನಡೆಯುತ್ತಿದೆ. ಅದೃಷ್ಟವಶವಾಗಿಯೇ ಸಕಲ ಕಾರ್ಯಗಳೂ ನಡೆದು, ತಮಗೆ ತಾವೇ ಫಲಪ್ರದವಾಗುವುವೆಂದು ಜಗದ ಜನರು ನಂಬಿ, ಪ್ರಯತ್ನಶೂನ್ಯರಾಗಿ ಕುಳ್ಳಿರುವರಾದರೆ ಜಗತ್ತು ಇಂದೇ ಸ್ತಬ್ಧವಾಗಿ, ಶೂನ್ಯ ಸ್ಥಿತಿಯನ್ನು ಹೊಂದುವುದು ತಪ್ಪದು! —

ಈ ಅದೃಷ್ಟ ಮತ್ತು ಪುರುಷ ಪ್ರಯತ್ನ ಇವುಗಳ ಬಲಾಬಲಗಳನ್ನು ಕುರಿತು ವಾದ ನಡೆಸುವವರಲ್ಲಿ, ಅದೃಷ್ಟವೆಂಬುದಕ್ಕೆ ಅವರು ದೈವಬಲ

ಅಥವ ಅದೃಶ್ಯ ಶಕ್ತಿಸಹಾಯ ಎಂಬ ಅರ್ಥವನ್ನು ಮಾಡುವರಾದರೆ, ಅದಕ್ಕೂ ಪುರುಷ ಪ್ರಯತ್ನವೇ ಮೂಲಕಾರಣವೆಂಬುದು ಸಿದ್ಧವಾಗುವುದು. ಏಕೆಂದರೆ, ಲೋಕದಲ್ಲಿ ಸಕಲರಿಗೂ ಇಷ್ಟಾನಿಷ್ಟಗಳು ಕೇವಲ ದೈವಬಲದಿಂದಲೇ ಲಭ್ಯವಾಗುತ್ತಲಿದ್ದರೆ, ಅಂತಹ ದೈವಬಲವು ಎಲ್ಲರಿಗೂ ಏಕೆ ಸಮಾನವಾಗಿ ದೊರೆಯಬಾರದು? ದೇವರಲ್ಲಿ ಪಕ್ಷಪಾತವಿಲ್ಲವಷ್ಟೆ! ಪ್ರಪಂಚದಲ್ಲಿರುವ ಸಮಸ್ತರೂ ದೇವರಿಗೆ ಪುತ್ರಸ್ವರೂಪರೂ - ಸಮಾನರೂ ಆದುದರಿಂದ ಅವರಲ್ಲೊಬ್ಬನು ರಾಜನಾಗಿಯೂ, ಮತ್ತೊಬ್ಬನು ಸೇವಕನಾಗಿಯೂ, ಒಬ್ಬನು ಲಕ್ಷಾಧೀಶನಾಗಿಯೂ ಮತ್ತೊಬ್ಬನು ಭಿಕ್ಷುಕನಾಗಿಯೂ, ಒಬ್ಬನು ಸರ್ವಾಂಗ ಸಂಪೂರ್ಣತೆಯಿಂದ ನವಮೋಹನಾಂಗನಾಗಿಯೂ ಮತ್ತೊಬ್ಬನು ವಿಕೃತಾಂಗನೂ ಕುರೂಪಿಯೂ ಆಗಿಯೂ ಜನಿಸಲು ಕಾರಣವೇನು? ಒಬ್ಬನನ್ನು ಸುಖಸಂತೋಷಗಳಲ್ಲಿ ಓಲಾಡುವಂತೆಯೂ ಮತ್ತೊಬ್ಬನನ್ನು ಹೊತ್ತಿಗೆ ತುತ್ತುಕೂಳು ಕಾಣದಂತೆ ಮನೆಮನೆಯ ಬಾಗಿಲಿಗೆ ಅಂಡಲೆಯುವಂತೆಯೂ, ಆ ದಯಾನಿಧಿಯಾದ ದೈವವು ಮಾಡಿತೇಕೆ? ಅದಕ್ಕೆ ಜಗದ ಜೀವಿಗಳಲ್ಲಿ ಪಕ್ಷಪಾತವುಂಟೆ? ಹಾಗೆಣಿಸುವುದು ತಪ್ಪು! 'ಸುಖಪಡುವುದು ಅವನ ಅದೃಷ್ಟ - ದುಃಖಾನುಭವ ಮಾಡುವುದು ಇವನ ಅದೃಷ್ಟ' ಎಂಬಿರಲ್ಲವೆ? ಆಗ 'ಅದೃಷ್ಟ' ಎಂದರೇನು? ಅವನವನ ಸುಕೃತ ಅಥವ ದುಷ್ಕೃತಗಳ ಫಲ ಎಂದಾಯಿತು; ಅಲ್ಲವೆ? ಯಾವನು ಪೂರ್ವದಲ್ಲಿ ದಾನ ಧರ್ಮ ಪರೋಪಕಾರಾದಿ ಸತ್ಕಾರ್ಯಗಳನ್ನು ಮಾಡಿರುವನೋ, ಅವನು ಈ ಜನ್ಮದಲ್ಲಿ ಅವುಗಳ ಫಲವಾಗಿ ಸುಖಸಂತೋಷಗಳನ್ನು ಅನುಭವಿಸುವನು. ಎಲ್ಲರೂ ಅವನನ್ನು ಪ್ರೀತಿಸುವರು. ಅವನ ಕಾರ್ಯಕ್ಕೆ ಎಲ್ಲರೂ ಸಹಾಯಕರಾಗುವರು. ಅವನ ಪ್ರಯತ್ನವು ಸುಲಲಿತವಾಗಿ ನಡೆಯುವುದು. ಅದು ಅವನ **ಅದೃಷ್ಟ.** ಮತ್ತೊಬ್ಬನಿಗೆ ಹಾಗಿಲ್ಲ. ಅವನನ್ನು ಯಾರೂ ಹತ್ತಿರ ಸೇರಿಸರು. ಅವನಿಗೊಂದು ಒಳ್ಳೆಯ ಮಾತನ್ನಾಡರು. ಒಂದು ಹಿಡಿ ಅನ್ನ ಹಾಕರು. ಎಲ್ಲಿ ಹೋದರೂ ಹೊಡೆದು ಅಟ್ಟುವರು. ಏಕೆ? ಅದು ಅವನ **ಅದೃಷ್ಟ!** ಎಂದು ಪ್ರತ್ಯುತ್ತರ ಬರುವುದು. ಇಲ್ಲಿ ಅದೃಷ್ಟ ಎಂದರೇನು? ಕರ್ಮಫಲ ತಾನೆ! ಹಾಗೆ ಅದು ಅವನವನು ಮಾಡಿದ ಕರ್ಮಕ್ಕೆ ದೊರೆತ ಫಲವಲ್ಲ

ವಿದ್ದರೆ, ಒಬ್ಬೊಬ್ಬನಿಗೆ ಒಂದೊಂದು ಸ್ಥಿತಿಯು ಪ್ರಾಪ್ತವಾಗಲು ಕಾರಣವಿರುತ್ತಿರಲಿಲ್ಲ. ಆದುದರಿಂದ ಅದೃಷ್ಟವಾದಿಗಳು, ಯಾವುದನ್ನು 'ಅದೃಷ್ಟಯೋಗ' ವೆನ್ನುವರೋ ಅದು ಕೂಡ ಒಬ್ಬನು ಹಿಂದೆ ಪುರುಷ ಪ್ರಯತ್ನದಿಂದ ಮಾಡಿದ ಕರ್ಮಫಲವೇ ಅಲ್ಲದೆ ಬೇರೇನೂ ಅಲ್ಲವೆಂಬುದು ಸಿದ್ಧವಾದಂತಾಯಿತು. ಇಷ್ಟಾದಮೇಲೆ ಇನ್ನು ಅದೃಷ್ಟ ಎಂಬ ಶಬ್ದದ ಸ್ಪಷ್ಟಾರ್ಥವೇನೆಂದು ನೋಡಬೇಕಾಗುವುದು. ಅ-ದೃಷ್ಟ ! ದೃಷ್ಟವಲ್ಲದುದು ! ದೃಷ್ಟಿಗೋಚರವಾಗದುದು ಯಾವುದೋ ಅದು ಅದೃಷ್ಟ ! ಮನುಷ್ಯನ ಜನ್ಮಾಂತರದ ಪುರುಷ ಪ್ರಯತ್ನದ ಫಲವಾಗಿ ಈಗ ದೊರೆಯತಕ್ಕುದು ಸತ್ಫಲವೋ ದುಷ್ಫಲವೋ ಎಂಬುದು ದೃಷ್ಟಿಗೋಚರವಾಗದುದರಿಂದ ಅದು ಅದೃಷ್ಟ ! ಅಷ್ಟೆ ! ಈ ಅ-ದೃಷ್ಟದ-ದೃಷ್ಟಿಗೋಚರವಾಗದ - ಪ್ರತ್ಯಕ್ಷ ಕಣ್ಣಿಗೆ ಕಾಣಿಸದ ಯೋಗದಿಂದಲೇ ಒಬ್ಬನಿಗೆ ಸತ್ಫಲವುಂಟಾಗಬಹುದು, ಮತ್ತೊಬ್ಬನಿಗೆ ದುಷ್ಫಲವುಂಟಾಗಬಹುದು. ಅಷ್ಟೇ ಅಲ್ಲದೆ ಇಲ್ಲದುದೇನೂ ಪ್ರಾಪ್ತವಾಗಲರಿಯದು. ಹಿಂದೆ ಅವನು ಗಳಿಸಿಟ್ಟುದೇನಿರುವುದೋ ಅದು ಮಾತ್ರವೇ ಈಗ ಲಭ್ಯವಾಗತಕ್ಕುದು. ಒಳ್ಳೆಯುದಿದ್ದರೆ ಒಳ್ಳೆಯುದು, ಕೆಟ್ಟದಿದ್ದರೆ ಕೆಟ್ಟುದು. ಹಿಂದೆ ಮಾವಿನ ಫಲವನ್ನು ಕೊಟ್ಟಿದ್ದರೆ, ಅದೇ ಇಂದು ಇಷ್ಟು ಕಾಲಗಳ ಚಕ್ರಬಡ್ಡಿಯೊಂದಿಗೆ ಉತ್ತಮ ರಸಾಲಫಲವಾಗಿಯೇ ದೊರೆಯುವುದು. ಅಂದು ಒಬ್ಬನಿಗೆ ಬೇವಿನ ಫಲವನ್ನು ಉಣ್ಣಿಸಿದ್ದರೆ, ಅದೂ ಸಹ ಇಂದು ಚಕ್ರಬಡ್ಡಿಯೊಂದಿಗೆ ಅಗಾಧವಾಗಿ ಬೆಳೆದು, ಬಹು ಕಟುವಾದ ಬೇವಿನ ಫಲವಾಗಿಯೇ ದೊರೆಯುವುದು ತಪ್ಪದು. ಅದನ್ನು ಅನುಭವಿಸದಿದ್ದರೂ ತೀರದು ! —

ಅದೃಷ್ಟ - ಪುರುಷ ಪ್ರಯತ್ನಗಳ ಪ್ರಶ್ನೆಯನ್ನು ಹೀಗೆ ಪರಿಷ್ಕರಿಸಿದ ಮೇಲೆ, ಇನ್ನು - ಅದೃಷ್ಟವನ್ನು ನಂಬಿ ಪ್ರಯತ್ನಶೂನ್ಯರಾಗಿ ಕುಳಿತರೂ, ಹಿಂದಿನ ಅದರ ಬಲದಿಂದಲೇ ಕೆಲಸ ನಡೆಯಲಾರದೇ - ಎಂದೂ ಚರ್ಚಿಸಬೇಕಾಗಿದೆ. ಈ ವಿಚಾರದಲ್ಲಿ ಹಿಂದೆ ಹಲವುವೇಳೆ ಹೇಳಿದ್ದಾಗಿದೆ. ಈ ಸಂದರ್ಭದಲ್ಲಿ ಬಹು ಸ್ಪಷ್ಟವಾಗಿ ಒಂದು ಮಾತನ್ನು ಹೇಳದಿದ್ದರೆ ತೀರದು. ಹಿಂದೆ ಮಾಡಿದ ಸತ್ಕಾರ್ಯಗಳ ಫಲವಾಗಿಯೇ ಇಂದು ಸಕಲ ಸುಖಾನುಭವಗಳಿಗೆ ಆಕರವಾದ, ಸಕಲ ಕಾರ್ಯನಿರ್ವಾಹಕ್ಕೆ ಸಾಧನವಾದ

ದಶೇಂದ್ರಿಯ ಸಂಪತ್ತಿಯೂ ದೊರೆತಿರುವುದೆಂಬುದನ್ನು ಮರೆಯಬಾರದು. ಅಂತೆಯೇ ಲೋಕದಲ್ಲಿ ಸಕಲ ಸುಖಪ್ರದ ವಸ್ತುಗಳೂ ತುಂಬಿವೆ. ಆದರೆ ಅವುಗಳನ್ನು ಹೊಂದಿಸಿಕೊಂಡು ಸುಖಪಡುವುದು ಇಂದು ಅವನ ಪ್ರಯತ್ನದಿಂದ ಪ್ರಾಪ್ತವಾಗತಕ್ಕ ಫಲವಲ್ಲವೆ? ಅವನಿಗೆ 'ಅದೃಷ್ಟ'ದ ಯೋಗವಿರದಿದ್ದರೆ ಆ ಇಂದ್ರಿಯ ಸಂಪತ್ತಿಯೇ ದೊರೆಯುತ್ತಿರಲಿಲ್ಲ. ಆದುದರಿಂದ ಅದೃಷ್ಟದಿಂದ ಲಭ್ಯವಾದ ಫಲವು ಅಷ್ಟುಮಾತ್ರವೆನ್ನಬಹುದು. ಲೋಕದಲ್ಲಿ ಅವೇ ವಸ್ತುಗಳೇ ತುಂಬಿವೆ; ಆದರೆ ಈ ದೇಹೇಂದ್ರಿಯ ಸಂಪತ್ತಿಯಿಲ್ಲದುದರಿಂದ ಪಶುಪ್ರಾಣಿಗಳಿಗೆ ಅವನ್ನು ಪಡೆದು ಸುಖಿಸಲು ಸಾಧ್ಯವಿಲ್ಲ, ಅಲ್ಲವೆ ? ಮನುಷ್ಯರಲ್ಲೇ ಈಗ ಸ್ವಪ್ರಯತ್ನದ ಫಲವಾಗಿ ಅವುಗಳನ್ನು ಗಳಿಸಿ ಸುಖಪಡತಕ್ಕವರೂ, ಪ್ರಯತ್ನ ಶೂನ್ಯರಾಗಿ ಏನನ್ನೂ ಪಡೆಯದೆ ಇರತಕ್ಕವರೂ ಇದ್ದಾರೆಯಷ್ಟೆ ! ಮುಖ್ಯವಾಗಿ ಹೇಳಬೇಕಾದುದೆಂದರೆ, ಜಗನ್ನಿಯಾಮಕನು, ಯಾವನೊಬ್ಬನ ಸತ್ಕರ್ಮ ಫಲವನ್ನೂ ದುಷ್ಕರ್ಮ ಫಲವನ್ನೂ ತೆಗೆದುಕೊಳ್ಳದೆ, ಮೋಸವಿಲ್ಲದೆ, ಪಕ್ಷಪಾತಮಾಡದೆ, ಅವನವನ ಕರ್ಮಾನುಸಾರವಾಗಿ ಫಲಾನುಭವಮಾಡಲು ಯೋಗ್ಯಸ್ಥಿತಿಯಲ್ಲಿ ಆಯಾ ಜೀವನನ್ನು ರೂಪಿಸಿ, ಯೋಗ್ಯ ಪರಿಸ್ಥಿತಿಯಲ್ಲಿಟ್ಟಿರುವನು. ಅಲ್ಲಿ ಪ್ರಯತ್ನದಿಂದ ಅವುಗಳನ್ನು ತನ್ನ ಕಾರ್ಯಕ್ಕೆ ಅನುಕೂಲಪಡಿಸಿಕೊಂಡು, ಫಲಹೊಂದತಕ್ಕುದು ಅವನ ಕರ್ತವ್ಯವು ! ಹಾಗಲ್ಲದೆ, ಹಲ್ಲುಗಳಿದ್ದೂ, ನಾಲಿಗೆಯಿದ್ದೂ, ಬಾಯಿಯಲ್ಲಿ ಬಂದು ಬಿದ್ದ ತುತ್ತನ್ನು ಅಗಿದು ನುಂಗುವಷ್ಟು ಪರಿಶ್ರಮಮಾಡಲೇಕೆ, ಅದೂ ಅದೃಷ್ಟ ಫಲವಿದ್ದರೆ ನಡೆಯಲಿ, ಎಂಬಂತಹ ಅಮಾನುಷ ವ್ಯಕ್ತಿಗಳಿದ್ದರೆ, ಅವರನ್ನು ಬ್ರಹ್ಮ ಸೃಷ್ಟಿಯಲ್ಲೇ ವಿಚಿತ್ರ ಪ್ರಾಣಿಗಳೆನ್ನಬೇಕಾಗುವುದು.

ದೇವರು ಮನುಷ್ಯನನ್ನು ಕೇವಲ ಅಸ್ವಾತಂತ್ರ್ಯ ಪ್ರಾಣಿಯನ್ನಾಗಿ ಸೃಷ್ಟಿಸಿಲ್ಲ. ಸೃಷ್ಟಿಶ್ರೇಷ್ಠ ವ್ಯಕ್ತಿಯಾದ ಮನುಷ್ಯನು, ಕೇವಲ ಕ್ಷುದ್ರ ಕ್ರಿಮಿಯಂತೆ ಶಕ್ತಿಹೀನನಾಗಿ ನಿರ್ಮಿಸಲ್ಪಟ್ಟವನಲ್ಲ. ದಯಾನಿಧಿಯಾದ ಭಗವಾನನು ಅವನಲ್ಲಿ ಅಗಾಧ ಶಕ್ತಿ ಸಾಮರ್ಥ್ಯಗಳನ್ನು ಅನುಗ್ರಹಿಸಿ ಇಟ್ಟಿದ್ದಾನೆ. ಅನಂತಕೋಟಿ ಜೀವರಾಶಿಗಳಲ್ಲಿ ಸರ್ವೇಂದ್ರಿಯ ಸಂಪೂರ್ಣತೆಯನ್ನು ಹೊಂದಿರುವ ಈ ಮಾನುಷ ಜನ್ಮವನ್ನು ಪಡೆದಿರುವಿಕೆಯೇ

ಒಂದು ಅಗಾಧ ಅದೃಷ್ಟ ಫಲವು. ತಲೆಯೆತ್ತಿ ಅಂತರಿಕ್ಷವನ್ನು ನೋಡುವ-ಜಗಚ್ಚಕ್ಷುವಾದ ಸೂರ್ಯ ಭಗವಾನನನ್ನು ದರ್ಶಿಸುವ, ದಯಾಮಯನಾದ ಭಗವಂತನಿಂದ ಸೃಷ್ಟವಾದ ಅನಂತಫಲ ಪುಷ್ಪಗಳ ಅಮೌಲ್ಯ ಸೌಂದರ್ಯವನ್ನು ಕಣ್ತುಂಬ ನೋಡಿ, ಮೂಸಿಸಿ, ಭಕ್ಷಿಸಿ ರಸಾನುಭವಮಾಡುವ ಪಂಚೇಂದ್ರಿಯ ಸಂಪತ್ತಿಯನ್ನು ಪಡೆದಿರುವುದು ಆ ಅದೃಷ್ಟಯೋಗದ ಫಲವಲ್ಲವೆ? ಈ ಸೌಭಾಗ್ಯವು ಲೋಕದ ಮತ್ತಾವ ಪ್ರಾಣಿವರ್ಗಕ್ಕೆ ಇದೆ! ದೇವರು ಕೊಟ್ಟ ಕೈಕಾಲುಗಳಿವೆ, ಕಣ್ಣು ಮೂಗು ಬಾಯಿಗಳಿವೆ, ಅವುಗಳಿಂದ ಏನು ಕಾರ್ಯ ಮಾಡಬಹುದೆಂದು ಯೋಚಿಸಲು ಯುಕ್ತಾಯುಕ್ತ ವಿಮರ್ಶಕ ಬುದ್ಧಿಯಿದೆ. ತನಗೆ ಕೊಡಲ್ಪಟ್ಟಿರುವಷ್ಟು ಸ್ವಾತಂತ್ರ್ಯದಲ್ಲಿ ನಿರ್ವಾದವಾಗಿ ಪ್ರವರ್ತಿಸಿ ಮನುಷ್ಯನು ಪ್ರಯತ್ನಶೀಲನಾಗಲಿ ಎಂಬುದು ಭಗವಾನನ ಇಷ್ಟವಲ್ಲದಿದ್ದರೆ, ಇಷ್ಟು ಸೌಲಭ್ಯಗಳನ್ನೂ ಏಕೆ ಒದಗಿಸಿಕೊಡುತ್ತಿದ್ದನು. 'ಮನುಷ್ಯನಿಗೆ ಶುದ್ಧ ಅಸ್ವಾತಂತ್ರ್ಯವಿದೆ; ಅವನು ಏನು ಮಾಡಲೂ ಸಾಧ್ಯವಿಲ್ಲ' ಎಂಬುದು ತಪ್ಪು. ಅವನಿಗೆ ಭಗವಾನನು ಕೆಲವು ಸ್ವಾತಂತ್ರ್ಯಗಳನ್ನು ಕರುಣಿಸಿದ್ದಾನೆ. ಭಗವದ್ದತ್ತವಾದ ಈ ಸ್ವಾತಂತ್ರ್ಯದ ಮೇರೆಯನ್ನು ಮೀರದಂತೆ-ಆ ಲೋಕಪಿತನು ತನಗೆ ಕರುಣಿಸಿಕೊಟ್ಟ ಸ್ವಾತಂತ್ರ್ಯ ಶಕ್ತಿಯನ್ನು ಅಪವ್ಯಯಗೊಳಿಸದಂತೆ ತನ್ನ ಬುದ್ಧಿಶಕ್ತಿಯನ್ನು ಉಪಯೋಗಿಸಿ, ಪುರುಷ ಪ್ರಯತ್ನವನ್ನು ಸಾಗಿಸಿ ಅಭಿವೃದ್ಧಿ ಹೊಂದತಕ್ಕುದು ಮನುಷ್ಯನ ಕರ್ತವ್ಯವು. ಹಾಗೆ ಪ್ರಯತ್ನಶೀಲನಾಗದೆ, ಕಾಸುವೀಸಗಳ ಲಾಭ ನಷ್ಟಕ್ಕೂ ದೈವವನ್ನು ದೂಷಿಸುತ್ತ, ಕಡ್ಡಿಯನ್ನು ಇತ್ತಲಿಂದತ್ತ ಎತ್ತಿಡುವುದಕ್ಕೂ ಅದೃಷ್ಟ ಸಹಾಯವನ್ನು ಅಪೇಕ್ಷಿಸುತ್ತ 'ಇವನಿನ್ನೆಂತಹ ದೈವನ್ಯಸ್ತಭರನೋ' ಎಂಬಂತೆ ವೇಷಹಾಕಿಕೊಂಡು, ನಾನು ಯಾವುದಕ್ಕೂ ಶಕ್ತನಲ್ಲ, ಯಾವುದಕ್ಕೂ ಸ್ವತಂತ್ರನಲ್ಲ, ಕೇವಲ ಅಲ್ಪನು, ಎಂದು ಮುಂತಾಗಿ ಹೇಳಿಕೊಂಡು ನಿರ್ವಿಣ್ಣನಾಗಿ ಕುಳಿತುಕೊಳ್ಳುವುದು ಶುದ್ಧ ಹೇಡಿತನವು. ಇಂತಹ ಹೇಡಿತನವು ಮಾನುಷತ್ವಕ್ಕೇ ಅಪಚಾರಮಾಡಿದಂತೆ ಶಿಕ್ಷಾರ್ಹವು. ಮನುಷ್ಯನು ಯೋಗ್ಯಮಾರ್ಗದಲ್ಲಿ ಶಕ್ತಿ ಮೀರಿ ಪುರುಷ ಪ್ರಯತ್ನಮಾಡದೆ, ನಿಷ್ಕ್ರಿಯನಾಗಿ ಕುಳಿತುಕೊಳ್ಳುವುದೂ, ಭಗವದೃಷ್ಟಿಯಲ್ಲಿ ಮಹಾಪರಾಧವಾಗುವುದು; ಇದೂ ಅಕ್ಷಮ್ಯ

ಪಾಪಸಾಧನೆಯಾಗುವುದೆಂಬುದನ್ನು ಯಾರೂ ಮರೆಯಬಾರದು. ಇಂದು ಪ್ರಪಂಚವು 'ದೈವಂನಿಹತ್ಯ ಕುರುಪೌರುಷಂ ಆತ್ಮಶಕ್ತ್ಯಾ' ಎಂಬ ಧ್ಯೇಯಸಾಧನೆಯಲ್ಲೇ ಅತಿ ತ್ವರೆಯಿಂದ ಮುಂದರಿಸುತ್ತಿದೆ. ಪುರುಷಕಾರವು ಮಾನವ ಪ್ರಯತ್ನಕ್ಕೆ ಅಸಾಧ್ಯವಾದುದು ಯಾವುದೂ ಇಲ್ಲವೆಂಬುದನ್ನು ದಿನದಿನಕ್ಕೆ ಸ್ಪಷ್ಟಗೊಳಿಸಲು ಯತ್ನಿಸುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ, ನಾವಿನ್ನೂ ಮೀನ-ಮೇಷಗಳನ್ನೆಣಿಸುತ್ತಾ 'ಘೃತಂವಾ-ಪಾತ್ರಂವಾ' ಎಂಬ ಚರ್ಚಾಮಗ್ನರಾಗಿ, ಪ್ರಯತ್ನ ಶೂನ್ಯರಾಗಿ ಕುಳಿತುಕೊಳ್ಳುವುದು ಯುಕ್ತವಲ್ಲ-ಅಲ್ಲ, ಧರ್ಮವಲ್ಲ: ಆಲಸ್ಯಭಾವವನ್ನು ಕಳೆದು ಕೊಡಹಿಕೊಂಡು ಮೇಲಕ್ಕೇಳಬೇಕು. ನಮ್ಮ ಕೈಕಾಲು ಕಣ್ಣು ಮೂಗುಗಳಿಗೇ ಎಷ್ಟು ಶಕ್ತಿಯಿದೆ ಎಂಬುದನ್ನು ತಿಳಿದು, ಅವುಗಳನ್ನು ಕೆಲಸಕ್ಕೆ ಹಚ್ಚಿ ಪ್ರಯತ್ನ ನಡೆಸಬೇಕು. 'ಕಾರ್ಯಸಾಧನೆಯಲ್ಲಿ ಮುಂದರಿಸುವಾಗ, ಪ್ರಾಪ್ತವಾಗುವ ಸಕಲ ಕಷ್ಟಗಳಿಗೂ ಎದೆಯೊಡ್ಡಿ, ಧೈರ್ಯದಿಂದ ಎದುರಿಸಿ ನಿಲ್ಲಬೇಕು. ಈ ಕಾರ್ಯಸಾಧನೆಯಲ್ಲಿ ಪ್ರಾಪ್ತವಾಗುವ ಕಷ್ಟಗಳನ್ನೆಲ್ಲಾ ತುಳಿದು, ಧ್ವಂಸಗೊಳಿಸಿ, ಕಾರ್ಯಜಯವನ್ನು ಕಂಡೇ ಕಾಣುವೆನು-ಹಾಗೂ ಜಯಲಭ್ಯವಾಗದಿದ್ದರೆ, ಈ ಪ್ರಯತ್ನದಲ್ಲೇ ದೇಹವನ್ನಾದರೂ ತ್ಯಜಿಸುವೆನಲ್ಲದೆ ಹಿಂಜರಿದು ನಿಲ್ಲೆನು' ಎಂಬ ದೃಢನಿಶ್ಚಯದಿಂದ ಮುಂದರಿಸಬೇಕು. 'ಎಂತಹ ಮಹಾ ಕಷ್ಟಗಳು ಪ್ರಾಪ್ತವಾದರೂ ಮುಂದಿಟ್ಟ ಹೆಜ್ಜೆಯನ್ನು ಹಿಂದಿಡೆನು' ಎಂದು ಹಟತೊಟ್ಟು ಕೊನೆಗೂ ಕಾರ್ಯಸಾಧನೆಮಾಡಿ, ತಮ್ಮ ಮನೋರಥ ಸಿದ್ಧಿಯನ್ನು ಗಳಿಸಿಕೊಂಡ ಬ್ರಹ್ಮರ್ಷಿ ಶ್ರೇಷ್ಠರಾದ ಶ್ರೀ ವಿಶ್ವಾಮಿತ್ರರ ಅದ್ಭುತ ಚರಿತ್ರೆಯನ್ನು ಪಠಿಸಲು, ಪ್ರಿಯ ವಾಚಕ ಮಹಾಶಯರೇ ಮುಂದರಿಸಿರಿ.

ಪೂರ್ವಯುಗದಲ್ಲಿ, ಬ್ರಹ್ಮದೇವನು ಲೋಕಸಂಗ್ರಹಣ ಮಾಡಬೇಕೆಂಬ ಭಗವದಿಚ್ಛೆಯಿಂದ ಪ್ರೇರಿತನಾಗಿ ಅನೇಕಮಂದಿ ಮಕ್ಕಳನ್ನು ಪಡೆದನು. ಅವರಲ್ಲಿ ಕುಶನೆಂಬ ಒಬ್ಬಾತನು, ಮಹಾ ತಪಸ್ವಿಯೆಂದು ಪ್ರಖ್ಯಾತನಾದನು. ಈತನು ಬಹುಕಾಲಗಳವರೆಗೂ ಪಿತೃಸಮೀಪದಲ್ಲಿ, ಬ್ರಹ್ಮಲೋಕದಲ್ಲೇ ವಾಸವಾಗಿದ್ದು, ತರುವಾಯ ಪ್ರಜಾಪಾಲನೆ ಮಾಡಬೇಕೆಂದು ಅಪೇಕ್ಷಿಸಿ, ಭೂಲೋಕವನ್ನು ಕುರಿತು ಪ್ರಯಾಣಮಾಡಿದನು. ಭೂ

ಲೋಕಕ್ಕೆ ಬಂದ ತರುವಾಯು, ಈತನು ಮಾನುಷ ಧರ್ಮವನ್ನನುಸರಿಸಿ ಸತ್ಕುಲ ಪ್ರಸೂತಳೂ, ತನಗೆ ಅನುರೂಪಳೂ ಆಗಿದ್ದ ವೈದರ್ಭಿಯೆಂಬ ಕನ್ಯಾಶಿರೋಮಣಿಯನ್ನು ವರಿಸಿ, ಆಕೆಯಲ್ಲಿ ಕುಶಾಂಬ, ಕುಶನಾಭ, ಅಧೂರ್ತರಜಸ್ಸು, ವಸು ಎಂಬ ನಾಲ್ಕುಮಂದಿ ಮಕ್ಕಳನ್ನು ಪಡೆದನು.

ಈ ನಾಲ್ಕುಮಂದಿ ಪುತ್ರರಲ್ಲಿ ಕುಶನಾಭನು ಘೃತಾಚಿ ಎಂಬ ಅಪ್ಸರಸ್ತ್ರೀಯಲ್ಲಿ ನೂರುಮಂದಿ ಹೆಣ್ಣುಮಕ್ಕಳನ್ನು ಪಡೆದು, ಅವರನ್ನೆಲ್ಲಾ ಬ್ರಹ್ಮದತ್ತನೆಂಬೊಬ್ಬ ಯೋಗ್ಯ ಬ್ರಹ್ಮಚಾರಿಗೆ ಕೊಟ್ಟು ಲಗ್ನಮಾಡಿ, ಪತಿಗೃಹಕ್ಕೆ ಕಳುಹಿಸಿದನು. ಹೀಗೆ ಸಂತಾನವಂತನಾದರೂ, ರಾಜ್ಯಕ್ಕೆ ಉತ್ತರಾಧಿಕಾರಿಯೊಬ್ಬನು ಇಲ್ಲದಂತಾಯಿತಲ್ಲಾ ಎಂಬ ಚಿಂತೆಯು ಆತನಿಗೆ ತಪ್ಪಲಿಲ್ಲ. ಆದುದರಿಂದ ತನ್ನ ತರುವಾಯ ಸಿಂಹಾಸನವೇರಿ, ರಾಜ್ಯಾಧಿಕಾರಮಾಡಲು ಯೋಗ್ಯನಾದ ಪುತ್ರನೊಬ್ಬನು ಲಭ್ಯವಾಗಬೇಕೆಂದು ಪುತ್ರಕಾಮೇಷ್ಟಿ ಯಾಗವನ್ನು ಮಾಡಿದನು. ಆತನು ಹಾಗೆ ಇನ್ನೂ ಯಾಗದೀಕ್ಷಿತನಾಗಿದ್ದ ವೇಳೆಯುಲ್ಲೇ, ಬ್ರಹ್ಮಲೋಕವಾಸಿಯಾಗಿದ್ದ ಆತನ ತಂದೆಯಾದ ಕುಶನು ಪ್ರತ್ಯಕ್ಷನಾಗಿ-'ಪುತ್ರನೇ ನಿನ್ನೀಯಾಗದಿಂದ ದೇವತೆಗಳು ಸಂತುಷ್ಟರಾಗಿದ್ದಾರೆ. ನಿನಗೆ ಮಹಾ ಧಾರ್ಮಿಕನಾದ ಪುತ್ರನೊಬ್ಬನು ಜನಿಸುವನು. ಅವನಿಂದ ನಿನಗೆ ಶಾಶ್ವತವಾದ ಕೀರ್ತಿಯುಂಟಾಗುವುದು'' ಎಂದು ಹೇಳಿ ವಿಮಾನಾರೂಢನಾಗಿ, ಆಕಾಶಕ್ಕೇರಿ ಬ್ರಹ್ಮಲೋಕವನ್ನು ಕುರಿತು ಹೊರಟುಹೋದನು.

ಪಿತೃ ವಾಕ್ಯವನ್ನು ಕೇಳಿ ಪರಮಾನಂದ ಭರಿತನಾದ ಕುಶನಾಭನು ತರುವಾಯ ಯಜ್ಞವನ್ನು ಸಾಂಗವಾಗಿ ಪೂರ್ತಿಗೊಳಿಸಿ, ಅವಭೃತಸ್ನಾನವಾಡಿ ಎಂದಿನಂತೆ ರಾಜ್ಯಭಾರ ನಿರತನಾಗಿದ್ದನು. ಹೀಗಿರಲು ಯಜ್ಞಮುಖದಿಂದ ಸುಪ್ರೀತರಾದ ದೇವತೆಗಳ ಅನುಗ್ರಹದಿಂದಲೋ ಎಂಬಂತೆ, ಆತನ ಧರ್ಮಪತ್ನಿಯು ಗರ್ಭಧಾರಣಮಾಡಿ, ಒಂದು ಪುರುಷ ಶಿಶುವನ್ನು ಪ್ರಸವಿಸಿದಳು. ಕುಶನಾಭನು ಆ ಶಿಶುವಿಗೆ ಗಾಧಿ ಎಂದು ನಾಮಕರಣಮಾಡಿದನು. ಈ ಗಾಧಿ ಮಹಾರಾಜನೇ ನಮ್ಮ ಕಥಾನಾಯಕರ ತಂದೆಯು. ಈತನು ಪರಮ ಧಾರ್ಮಿಕನೆಂದು ಪ್ರಖ್ಯಾತನಾಗಿ ಬಹುಕಾಲ ರಾಜ್ಯವಾಳಿದಮೇಲೆ, ಈತನ ಉದರದಲ್ಲಿ ಸತ್ಯವತಿಯೆಂಬೊಬ್ಬ ಕನ್ಯಾಶಿರೋಮಣಿಯು

ಜನಿಸಿದಳು. ಗಾಧಿರಾಜನು ಆ ತನ್ನ ಪುತ್ರಿಯನ್ನು ಅಗಾಧ ಪ್ರೇಮದಿಂದ ಪೋಷಿಸಿ, ಯೋಗ್ಯ ಕುಲಗೋತ್ರ ಪ್ರತಿಷ್ಠಿತನಾದ ಒಬ್ಬ ರಾಜಪುತ್ರನಿಗೆ ಕೊಟ್ಟು ವಿವಾಹಮಾಡಬೇಕೆಂದು ಸಂಕಲ್ಪಿಸಿಕೊಂಡಿರುತ್ತಿರುವಲ್ಲಿ, ಮಹಾ ತಪಸ್ವಿಯಾದ ಋಚೀಕನೆಂಬ ಬ್ರಾಹ್ಮಣೋತ್ತಮನು, ಗೃಹಸ್ಥ ಧರ್ಮಾವಲಂಬನಮಾಡಬೇಕೆಂದು ಇಚ್ಛಿಸಿ, ಗಾಧಿರಾಜನ ಬಳಿಗೆ ಬಂದು ಕನ್ಯಾರ್ಥಿಯಾಗಿ ಯಾಚಿಸಿದನು. ರಾಜನು ಸುಕುಮಾರಿಯಾದ ತನ್ನ ಪುತ್ರಿಯನ್ನು ವನವಾಸಿಯಾದ ಆ ಮುನಿಗೆ ಕೊಟ್ಟು ಕಷ್ಟಕ್ಕೀಡುಮಾಡಲು ಇಷ್ಟವಿಲ್ಲದೆ - 'ಮಹರ್ಷಿಯರೇ, ಒಂದು ಕಿವಿಯು ಕಪ್ಪಾಗಿರುವ ಸಹಸ್ರ ಶ್ವೇತಾಶ್ವಗಳನ್ನು ಕನ್ಯಾಶುಲ್ಕವಾಗಿ ತಂದು ಒಪ್ಪಿಸಬಲ್ಲ ಸಮರ್ಥನಾದ ವರನಿಗೆ ಈಕೆಯನ್ನು ಕೊಡಬೇಕೆಂದು ನನ್ನ ಸಂಕಲ್ಪವಿದೆ' ಎಂದು ತಿಳಿಸಿದನು. ಆ ಅಸಾಧ್ಯಪಣವನ್ನು ಕೇಳಿದರೂ, ಋಚೀಕನು ಹತಾಶನಾಗದೆ, ವರುಣನನ್ನು ಕುರಿತು ತಪಸ್ಸುಮಾಡಿ, ಅಷ್ಟು ದಿವ್ಯಾಶ್ವಗಳನ್ನೂ ತಂದು ಒಪ್ಪಿಸಿ, ಸರ್ವಾಂಗ ಸುಂದರಿಯಾದ ಸತ್ಯವತಿಯನ್ನು ವಿವಾಹಮಾಡಿಕೊಂಡು, ತನ್ನ ಆಶ್ರಮಕ್ಕೆ ಪ್ರಯಾಣಮಾಡಿ, ಅಲ್ಲಿ ಪತ್ನಿಯೊಂದಿಗೆ ಗೃಹಸ್ಥಾಶ್ರಮ ಧರ್ಮಪಾಲನೆ ಮಾಡುತ್ತಾ ಸುಖವಾಗಿದ್ದನು.

ಸತ್ಯವತಿಯನ್ನು ಪತಿಗೃಹಕ್ಕೆ ಕಳುಹಿಸಿಕೊಟ್ಟಮೇಲೆ, ಇತ್ತ ಗಾಧಿರಾಜನ ಅರಮನೆಯು ಪುನಃ ಬರಿದಾಯಿತು. ರಾಜಪತ್ನಿಯೂ, ರಾಜನೂ, ರಾಜ್ಯಕ್ಕೊಂದು ದಿಕ್ಕಿಲ್ಲದಂತಾಯಿತಲ್ಲಾ ಎಂದು ಮಹದ್ವ್ಯೋಚನಾಪರರಾದರು. ಕೆಲವು ದಿನಗಳು ಹೀಗೆಯೇ ನಡೆದ ತರುವಾಯ, ರಾಜಪತ್ನಿಯು ತನ್ನ ಮಗಳನ್ನು ನೋಡಿಕೊಂಡು ಬರಲಿಚ್ಛಿಸಿ, ಋಚೀಕ ಮಹರ್ಷಿಯ ಆಶ್ರಮಕ್ಕೆ ಹೋದಳು. ಅಲ್ಲಿ ಮಹಾ ತಪಸ್ವಿಯಾದ ಆತನ ಅನುಗ್ರಹ ಬಲದಿಂದಲಾದರೂ ತನ್ನಲ್ಲಿ ಪುತ್ರಸಂತಾನವಾಗಬಹುದೋ ಎಂಬ ಆಶೋತ್ತರವು ಆಕೆಯನ್ನು ಬಾಧಿಸಲು, ತನಗಾಗಿ ಸಂತಾನ ಯಾಚನೆಮಾಡಲು ತನ್ನ ಪುತ್ರಿಯಾದ ಸತ್ಯವತಿಗೆ ಪ್ರೇರಿಸಿದಳು. ಮಾತೃ ವಾಕ್ಯವನ್ನು ಮಾನ್ಯಮಾಡಿ ತನ್ನನ್ನು ಯಾಚಿಸಿದ ಪತ್ನಿಯ ಮಾತನ್ನು ಕೇಳಿ ಆತನು ಬಹು ಸಂತೋಷದಿಂದ ಆ ರೀತಿ ಮಾಡಲು ಸಮ್ಮತಿಸಿದನು. ತರುವಾಯ ತಂತ್ರ ನಿಪುಣನಾದ ಆತನು, ಕ್ಷತ್ರಿಯ ಸಂತಾನ ಪ್ರದವಾದ ಮಂತ್ರದಿಂದ

ಒಂದು ಚರುವನ್ನೂ, ಬ್ರಾಹ್ಮಣ ಸಂತಾನಪ್ರದವಾದ ಮಂತ್ರದಿಂದ ಒಂದು ಚರುವನ್ನೂ ಅಭಿಮಂತ್ರಿಸಿ ಸಿದ್ಧಪಡಿಸಿಟ್ಟು, ತನ್ನ ಅತ್ತೆಯಲ್ಲಿ ವೀರಕ್ಷತ್ರಿಯ ಸಂತಾನವೂ, ತನ್ನ ಪತ್ನಿಯಲ್ಲಿ ಉತ್ಕೃಷ್ಟ ಬ್ರಾಹ್ಮಣ ಸಂತಾನವೂ ಉತ್ಪನ್ನವಾಗಲೆಂದು ಸಂಕಲ್ಪಿಸಿ, ಸ್ನಾನಕ್ಕೆ ಹೋಗಿದ್ದನು. ಆತನು ಸ್ನಾನಮಾಡಿ ಬರುವುದರೊಳಗಾಗಿ ಆಶ್ರಮದಲ್ಲಿದ್ದ ಆ ಸ್ತ್ರೀಯರು ಆ ಮಂತ್ರಸಿದ್ಧ ಚರುಗಳನ್ನು ಭಕ್ಷಿಸಿಬಿಟ್ಟರು. ಹಾಗೆ ಭಕ್ಷಿಸಿದ್ದರಲ್ಲಿ ಕ್ಷತ್ರಿಯ ಸಂತಾನಪ್ರದವಾದ ಚರುವು ಬ್ರಾಹ್ಮಣ ಪತ್ನಿಯಾದ ಸತ್ಯವತಿಯ ಪಾಲಿಗೂ, ಬ್ರಾಹ್ಮಣ ಸಂತಾನ ಪ್ರದವಾದ ಚರುವು ರಾಜಪತ್ನಿಯ ಪಾಲಿಗೂ ಬಂದುಬಿಟ್ಟಿದ್ದಿತು. ಈ ವ್ಯತ್ಯಾಸವನ್ನು ತಿಳಿದ ಋಚೀಕನು, ತನ್ನ ಪತ್ನಿಯ ಅವಿವೇಕಕ್ಕಾಗಿ ಆಕೆಯನ್ನು ಆಕ್ಷೇಪಿಸಿ, ನೀನು ಆತುರಪಟ್ಟು ಮಾಡಿದ ತಪ್ಪಿತದಿಂದ, ನಿನ್ನ ಉದರದಲ್ಲಿ ಮಹಾಕ್ರೂರನೂ ಶಸ್ತ್ರೋಪಜೀವಿಯೂ ಆಗಲುಳ್ಳ ಮಗನು ಜನಿಸುವನು. ನಿನ್ನ ತಪ್ಪಿತಕ್ಕೆ ತಕ್ಕ ಫಲವನ್ನು ಅನುಭವಿಸು'' ಎಂದು ನುಡಿದನು. ಸತ್ಯವತಿಯು ತನ್ನ ಪ್ರಾರ್ಥನೆಗಾಗಿ ವ್ಯಸನಪಟ್ಟು ಕರುಣಿಸಬೇಕೆಂದು ಬೇಡಿಕೊಳ್ಳಲು, ಋಚೀಕನು ಪ್ರಸನ್ನನಾಗಿ- 'ನಿನ್ನ ಮಗನು ಉತ್ತಮ ಬ್ರಾಹ್ಮಣನಾಗಿಯೇ ಹುಟ್ಟುವನು. ಆದರೆ ಈ ಮಂತ್ರಫಲವು ಆತನ ಪುತ್ರನಲ್ಲಿ ಫಲಕಾರಿಯಾಗುವುದು ತಪ್ಪದು' ಎಂದು ಅನುಗ್ರಹಿಸಿದನು. ಅಂತೆಯೇ ಆಕೆಯ ಗರ್ಭದಲ್ಲಿ ಜಮದಗ್ನಿ ಮಹರ್ಷಿಯು ಜನಿಸಿದನು. ಆತನ ಉದರ ಸಂಭೂತನಾದ *ಪರಶುರಾಮನಲ್ಲಿ ಆ ಮಂತ್ರಫಲವು ಗೋಚರವಾಗಿ, ಆತನು ಶಪಥ ಪೂರ್ವಕವಾಗಿ ಕ್ಷತ್ರಿಯ ವಂಶವನ್ನೇ ನಿರ್ಮೂಲಗೊಳಿಸಿ, ರಕ್ತದ ಮಡುಗಳನ್ನೇ ಸೃಷ್ಟಿಸಿ, ವೀರಕ್ಷತ್ರಿಯನಂತೆ ಶಸ್ತ್ರ ವಿದ್ಯಾಪಾರಂಗತನಾಗಿಯೇ ಜೀವಿಸಿದನು.

ಇತ್ತ, ಸಂತಾನಪ್ರದವಾದ ಚರುಭಕ್ಷಣದಿಂದ ಸಂತುಷ್ಟಳಾದ ಗಾಧಿರಾಜನ ಪತ್ನಿಯು, ರಾಜಧಾನಿಗೆ ಬಂದಳು. ರಾಜನು ತನ್ನ ಪತ್ನಿಯು ಸಂತಾನಪ್ರಾಪ್ತಿಗಾಗಿ ಮಾಡಿದ ಪ್ರಯತ್ನವನ್ನು ತಿಳಿದು ಪರಮ ಸಂತೋಷಪಟ್ಟನು. ಯೋಗ್ಯಕಾಲದಲ್ಲಿ ಆಕೆಯೂ ಗರ್ಭಧಾರಣಮಾಡಿ, ನವಮಾಸ

---

*ಗ್ರಂಥಮಾಲಾ ಕುಸುಮ ೬೩ನೆಯ 'ಪರಶುರಾಮ' ನ ಜೀವಿತ ಚರಿತ್ರೆಯಲ್ಲಿ ಈ ವಿಚಾರವು ವಿಸ್ತಾರವಾಗಿ ವರ್ಣಿತವಾಗಿದೆ.

ಗರ್ಭಭಾರವನ್ನು ಹೊತ್ತು, ಮುಂದೊಂದು ಶುಭದಿನದ ಶುಭನಕ್ಷತ್ರದಲ್ಲಿ
ಒಂದು ಪುರುಷ ಶಿಶುವನ್ನು ಹೆತ್ತಳು. ಕುಶಿಕವಂಶೋತ್ಪನ್ನನಾದುದರಿಂದ
ಆ ಕುವರನು ಕೌಶಿಕನೆಂದೂ, ಗಾಧಿರಾಜನ ಮಗನಾದುದರಿಂದ ಗಾಧೇಯ
ನೆಂದೂ, ಕರೆಯಲ್ಪಟ್ಟನು. ಮುಂದೆ 'ಬ್ರಹ್ಮರ್ಷಿ ವಿಶ್ವಾಮಿತ್ರ'ರೆಂದು
ಪ್ರಸಿದ್ಧನಾದವನಾದರೂ ಈ ಕುವರನೇ! ಹೀಗೆ ಮಹಾ ಪ್ರಸಿದ್ಧವಾದ
ಬ್ರಹ್ಮವಂಶ ಸಂಭೂತನಾದ ಈ ಕೌಶಿಕನ ಚರಿತ್ರೆಯು ಅದ್ಭುತವಾದುದು,
ಅಗಾಧವಾದುದು, ಮಹಾಮಹಿಮೋಪೇತವಾದುದು.



## ಅಧ್ಯಾಯ ೨ "ವಸಿಷ್ಠಾಶ್ರಮ"

ಮಹರ್ಷಿಯ ವರಪ್ರಸಾದ ಲಬ್ಧವಾಗಿ ಜನಿಸಿದ ವಂಶೋದ್ಧಾರಕ
ಪುತ್ರಸಂತಾನದಿಂದ ಗಾಧಿರಾಜನು ಪರಮಾನಂದ ಭರಿತನಾದನು. ತನ್ನ
ಏಕಮಾತ್ರ ಪುತ್ರನಿಗೆ, ಜಾತಕರ್ಮ ನಾಮಕರಣ ಚೌಲ ಉಪನಯನಾದಿ
ವಿಧ್ಯುಕ್ತ ಕರ್ಮಗಳನ್ನು ಮಹಾ ಸಂಭ್ರಮದಿಂದ ನೆರವೇರಿಸಿ, ಯೋಗ್ಯ
ಗುರುಗಳನ್ನು ನಿಯಮಿಸಿ ವಿದ್ಯಾಭ್ಯಾಸ ಮಾಡಿಸಿದನು. ಕೌಶಿಕನು ದಿನ
ದಿನಕ್ಕೆ ವಿದ್ಯಾಬುದ್ಧಿಗಳಲ್ಲೂ, ಶೌರ್ಯ ಸಾಹಸಗಳಲ್ಲೂ ಅದ್ವಿತೀಯನೆನ್ನಿಸಿ,
ವಂಶ ಗೌರವವನ್ನು ಕಾಪಾಡುವ ಸತ್ಪುತ್ರನೆಂಬ ನಂಬಿಕೆಯನ್ನು ತಂದೆ
ತಾಯಿಗಳಿಗೂ, ಬಂಧು ಬಾಂಧವರಿಗೂ ಉಂಟುಮಾಡಿದನು. ಗಾಧಿರಾ
ಜನು ತನ್ನ ಪುತ್ರನಿಗೆ ಯುಕ್ತಕಾಲದಲ್ಲಿ ಅನುರೂಪ ರಾಜಪುತ್ರಿಯೊಂದಿ
ಗೆ ವಿವಾಹ ಮಹೋತ್ಸವವನ್ನು ನೆರವೇರಿಸಿದನು. ಕೌಶಿಕನೂ ಕಾಲಕ್ರ
ಮದಲ್ಲಿ ಸಂತಾನ ಸೌಭಾಗ್ಯವನ್ನು ಪಡೆದು, ಪ್ರಜಾಪರಿವಾರಗಳಿಗೆ ಹಿತಚಿಂ
ತಕನಾಗಿ, ರಾಜ್ಯಭಾರಮಾಡುತ್ತ ಸುಖವಾಗಿದ್ದನು. ಇತ್ತ ಗಾಧಿರಾಜನ
ಪುತ್ರ ಸಂತಾನವು ಹೀಗೆ ಅಭಿವೃದ್ಧಿಯಾಗುತ್ತಿರಲು, ಅತ್ತ ಜಮದಗ್ನಿ
ಮಹರ್ಷಿಯ ಮೂಲಕ ಆತನ ದೌಹಿತ್ರ ಸಂತಾನವೂ ವೃದ್ಧಿಗೊಂಡಿತು.
ಗಾಧಿ ಪುತ್ರಿಯಾದ ಕೌಶಿಕಿ ಅಥವ ಸತ್ಯವತಿಯು ತನ್ನ ಪತಿವ್ರತಾಧರ್ಮದ
ಮಾಹಾತ್ಮ್ಯದಿಂದ ಮನುಷ್ಯ ಶರೀರದೊಂದಿಗೇ ಸ್ವರ್ಗಪದವಿಗೇರಿದಳು.

ಅಷ್ಟುಮಾತ್ರವಲ್ಲ-ಕೌಶಿಕಿಯೆಂಬ ಮಹಾಪುಣ್ಯನದಿಯು ಸ್ವರೂಪವನ್ನು ಹೊಂದಿ ಭೂಲೋಕದ ಜನರಿಗೆ ಐಹಿಕಾಮುಷ್ಮಿಕ ಫಲಗಳನ್ನು ಕೊಡುವ ಮಹೋದ್ದೇಶದಿಂದ ಹಿಮವತ್ಪರ್ವತದಿಂದಿಳಿದು ಅಲ್ಲಿಯ ಸಾನು ಪ್ರದೇಶ ದಲ್ಲಿ ಪ್ರವಹಿಸಲಾಗಿದಳು. ಗಾಧಿರಾಜನು ತನ್ನ ಪುತ್ರಿ ಮತ್ತು ಪುತ್ರರ ಸದ್ಗುಣ ಸದಾಚರಣೆಗಳಿಂದಲೂ, ವಂಶಗೌರವವನ್ನು ಕಾಪಾಡುವುದಕ್ಕಾಗಿ ಅವರು ಮಾಡಿದ ಸತ್ಕರ್ಮಗಳಿಂದಲೂ ಪರಮಾನಂದವನ್ನು ಹೊಂದಿದನು. ಕೆಲವು ಕಾಲದಮೇಲೆ ಗಾಧಿರಾಜನು ಪತ್ನೀ ಸಮೇತನಾಗಿ ವನವಸ್ಥಾಶ್ರ ಯಿಸಿ ತಪೋನಿರತನಾಗಿ ಸದ್ಗತಿಯನ್ನು ಹೊಂದಿದನು.

ತಂದೆಯು ತಪೋವನವನ್ನು ಕುರಿತು ನಡೆದ ತರುವಾಯ, ಗಾಧೇಯ ನು ಕೆಲವುಕಾಲ ರಾಜಧಾನಿಯಲ್ಲಿದ್ದು, ಬಹು ವಿಚಕ್ಷಣೆಯಿಂದ ರಾಜ್ಯಭಾರ ಮಾಡಿದನು. ಅಗಾಧ ಭುಜಬಲ ಧನಬಲ ಜನಬಲಗಳನ್ನು ಪಡೆದಿದ್ದೂ ನಿಷ್ಕ್ರಿಯನಾಗಿ ರಾಜಧಾನಿಯಲ್ಲೇ ಕುಳಿತಿರುವುದು ಅತನಿಗೆ ಬಹು ಬೇಸರ ವನ್ನುಂಟುಮಾಡಿತು. ಆ ಬೇಸರ ನಿವಾರಣೆಮಾಡಿಕೊಳ್ಳಲು, ಒಂದಾ ನೊಂದು ಸಾರಿ, ಅತನು ಒಂದು ಅಕ್ಷೋಹಿಣೀ ಸೈನ್ಯವನ್ನು ಜೊತೆಗೆ ತೆಗೆ ದುಕೊಂಡು ಭೂಮಿಯನ್ನೆಲ್ಲ ಸಂಚರಿಸತೊಡಗಿದನು. ಅನೇಕಾನೇಕ ದೇ ಶಗಳನ್ನು ಹೊಕ್ಕು. ಅಲ್ಲಿಯ ವಿಶೇಷಗಳನ್ನು ಪ್ರತ್ಯಕ್ಷ ನೋಡಿ ಆನಂದಿಸಿದ ನು. ಆಯಾ ದೇಶಗಳ ಮುಖ್ಯ ನಗರಗಳನ್ನು ಪ್ರವೇಶಿಸಿ, ಅವುಗಳ ಅಂದ ವನ್ನು ನೋಡಿ ಸಂತೋಷಗೊಂಡನು. ತನ್ನ ಕೀರ್ತಿಯನ್ನು ಕೇಳಿ-ತನ್ನ ಭುಜಬಲ ಪರಾಕ್ರಮಗಳ ಪರಿಚಯಗೊಂಡು, ನಮ್ರತೆಯಿಂದ ಶರಣಾಗತ ರಾಗಿ ಕಪ್ಪ ಕಾಣಿಕೆಗಳನ್ನೊಪ್ಪಿಸಿದ ರಾಜರನ್ನು ಮನ್ನಿಸಿದನು. ಪ್ರತಿಷ್ಠಾ ವಂತರಾಗಿ ಮಾರ್ಮಲೆತ ಇತರ ಕೆಲವರಿಂದಿಯನ್ನು ಯುದ್ಧ ಮುಖದಲ್ಲಿ ಎದುರುಗೊಂಡು, ನಿಶಿತ ಬಾಣಪರಂಪರೆಗಳಿಂದ ಘಾತಿಸಿ, ಪಾದಾಕ್ರಾಂತ ರನ್ನಾಗಿಸಿಕೊಂಡನು. ತುಂಬಿ ಹರಿವ ಅನೇಕ ನದಿಗಳನ್ನು ದಾಟಿ, ಹಲವು ಪರ್ವತಾರಣ್ಯಗಳನ್ನು ಸುತ್ತಿ, ಅಲ್ಲಲ್ಲಿ ಕಂಡ ವಿವಿಧ ಪ್ರಾಂತಗಳ ವಿಚಿ ತ್ರತರವಾದ ಪ್ರಕೃತಿಯ ಶೋಭೆಯನ್ನು ನೋಡಿ ಪರಮಾನಂದಗೊಂಡ ನು. ಮಾರ್ಗ ಮಧ್ಯದಲ್ಲಿ ದೊರೆತ ಮಹಾ ಕಾನನಗಳಲ್ಲಿ ಮೃಗಯಾ ವಿನೋ ದದಿಂದಲೂ ಕಾಲಯಾಪನೆಮಾಡಿದನು. ಮಾರ್ಗದಲ್ಲಿ ದೊರೆತ ಹಲವು

ಋಷ್ಯಾಶ್ರಮಗಳನ್ನು ಹೊಕ್ಕು ಅವರ ಪಾದಗಳಿಗೆ ನಮಿಸಿ ಆಶೀರ್ವಾದಗೊಂಡನು. ಹೀಗೆ ರಾಜಧಾನಿಯನ್ನು ಬಿಟ್ಟು ಬಹುದಿನಗಳವರೆಗೆ ಪ್ರಯಾಣಮಾಡುತ್ತಾ ಇರಲು, ಮುಂದೆ ಅತಿ ಮನೋಹರವಾದ ಒಂದು ಋಷ್ಯಾಶ್ರಮವು ದೃಷ್ಟಿಗೋಚರವಾಯಿತು. ಗಾಧೇಯನು ಆವರೆಗೆ ಎಂದೂ ಕಾಣದಿದ್ದ ಆ ಆಶ್ರಮದ ಸೌಂದರ್ಯವು ಆತನನ್ನು ಆ ಕಡೆಗೆ ಆಕರ್ಷಿಸಿತು.

ಆ ಆಶ್ರಮದಲ್ಲಿ ತೇಗು ಸಾಲ ಶ್ರೀಗಂಧಾದಿ ಶ್ರೇಷ್ಠ ಜಾತಿಯ ವೃಕ್ಷಗಳೂ, ಹಲಸು ಮಾವು ನೇರಳೆ ತೆಂಗು ಮುಂತಾದ ಫಲವೃಕ್ಷಗಳೂ ನಿಬಿಡವಾಗಿ ಬೆಳೆದು ಆಗಂತುಕರಿಗೆ ಮಧುರವಾದ ಫಲಗಳನ್ನು ಮಾತ್ರವಲ್ಲ - ತಂಪಾದ ನೆರಳನ್ನೂ ಕೊಟ್ಟು ಆದರಿಸುತ್ತಿದ್ದುವು. ಎಲ್ಲೆಲ್ಲೂ ಜಾಜಿ, ಮಲ್ಲಿಗೆ, ಸಂಪಿಗೆ, ಪಾದರಿ, ಪಾರಿಜಾತ ಮುಂತಾದ ಪುಷ್ಪಗಳನ್ನು ಪ್ರಸಾದಿಸುವ ಲತೆಗಳೂ ವೃಕ್ಷಗಳೂ ಬೆಳೆದು ದಿವ್ಯ ಪರಿಮಳ ಯುಕ್ತವಾದ ಪುಷ್ಪಗಳಿಂದ ಸರ್ವರ ಮನಸ್ಸಿಗೂ ಉಲ್ಲಾಸವನ್ನುಂಟುಮಾಡುತ್ತಿರುವುವು. ಮರಗಿಡಗಳಲ್ಲಿ ಕುಳಿತು ಶುಕಪಿಕಾದಿ ಪಕ್ಷಿವರ್ಗಗಳು ತಮ್ಮ ಸ್ವಾಭಾವಿಕ ಸ್ವರಗಳಿಂದ ಗಾನಮಾಡುತ್ತ-ನರ್ತನಮಾಡುತ್ತ ಕರ್ಣಾನಂದ-ನೇತ್ರಾನಂದಗೊಳಿಸುತ್ತಿರುವುವು. ಆಶ್ರಮಪ್ರಾಂತವು ಎಲ್ಲೆಲ್ಲೂ ಶುಭ್ರವಾಗಿ, ಸುಮನೋಹರವಾಗಿ ಕಂಗೊಳಿಸುತ್ತಿರುವುದು. ಮುನಿವಟುಗಳು ಚಿಂತನೆಮಾಡುತ್ತಿದ್ದ ವೇದಘೋಷವು ಘನ ಗಂಭೀರ ಧ್ವನಿಯಿಂದ ದೂರಕ್ಕೂ ಕೇಳಿಸುತ್ತಿರುವುದು. ಅಲ್ಲಲ್ಲೆ ಒಣಗಲು ಕಟ್ಟಿದ್ದ ಬಿಳಿಯ ನಾರುವಸ್ತ್ರಗಳು ಶಾಂತಿಸಾಮ್ರಾಜ್ಯ ಸ್ಥಾಪಕರಾದ ಮಹರ್ಷಿಗಳ ವಿಜಯಧ್ವಜಪಟಗಳೋ ಎಂಬಂತೆ ಹಾರಾಡುತ್ತಿರುವುವು. ಸರ್ವತ್ರ ವ್ಯಾಪಿಸಿದ್ದ ಹೋಮಧೂಮವು ಆ ತಪೋವನ ಪ್ರಾಂತವನ್ನೆಲ್ಲ ಪಾವನಗೊಳಿಸುತ್ತಿರುವುದು. ಆ ವನದ ಸಮೀಪದಲ್ಲಿ ಮಹಾರಾಜಾ ಗಾಧೇಯನು ಕೆಲವು ಆಶ್ಚರ್ಯಗಳನ್ನೂ ನೋಡಿದನು. ಹುಲಿ ಹುಲ್ಲೆಗಳೂ, ಗಿಡಗ ಪಾರಿವಾಳಗಳೂ, ಗರುಡ ಸರ್ಪಗಳೂ ತಮ್ಮ ಜನ್ಮಸಿದ್ಧ ವೈರವನ್ನು ಮರೆತು ಏಕತ್ರ ಕೂಡಿಯಾಡುವುವು. ಆ ಅದ್ಭುತ ದೃಶ್ಯವು ಆತನಿಗೆ ಅತಿಶಯ ಕೌತುಕವನ್ನುಂಟುಮಾಡಿತು. ಅಂತಹ ಮಹಿಮೋಪೇತವಾದ ಪುಣ್ಯಾಶ್ರಮವು ಯಾರದಿರಬಹುದೆಂದು ಯೋಚಿಸುತ್ತಾ, ಆಶ್ರಮದ ಒಂದೊಂದು ನೋಟವನ್ನೂ

ನೋಡಿಕೊಳ್ಳುತ್ತಾ ನಿದಾನವಾಗಿ ನಡೆಯುತ್ತಿದ್ದ ಕಾಲದಲ್ಲೇ, ಆಶ್ರಮದ ಒಳಭಾಗದಿಂದ ಇಬ್ಬರು ಮುನಿವಟುಗಳು ಬಂದು-"ಗಾಧಿವಂಶ ವಿಭೂಷಿತ ನಾದ ಮಹಾರಾಜನಿಗೆ ಸುಸ್ವಾಗತವಾಗಲಿ' ಎಂದುಚ್ಚರಿಸಿ,-'ಮಹಾರಾಜನೇ, ಅಕಸ್ಮಾತ್ತಾಗಿ ನಮ್ಮ ಪುಣ್ಯೋದಯದಿಂದಲೇ ಈ ಪ್ರಾಂತಕ್ಕೆ ದಯೆಮಾಡಿಸಿರುವ ನೀನು, ಆಶ್ರಮಕ್ಕೆ ಬಂದು ಈ ದಿನ ಇಲ್ಲಿ ವಿಶ್ರಾಂತಿಗೊಂಡು ಮುಂದೆ ಪ್ರಯಾಣ ಬೆಳೆಸಬೇಕೆಂದು ಬ್ರಹ್ಮರ್ಷಿ ಶ್ರೇಷ್ಠರಾದ ವಸಿಷ್ಠರು ಅಪೇಕ್ಷಿಸುತ್ತಾರೆ' ಎಂದು ವಿಜ್ಞಾಪಿಸಿದರು.

ತಾನು ಬಂದುದು ವಸಿಷ್ಠಾಶ್ರಮಕ್ಕೆಂಬುದು ಗಾಧೇಯನಿಗೆ ಆಗ ಗೊತ್ತಾಯಿತು. ಮಹಾಮಹಿಮರಾದ ವಸಿಷ್ಠರ ಆಹ್ವಾನವು ಬಂದಮೇಲೆ ಅದನ್ನು ಮಾನಸಿಕಮಾಡಿ ಹೋಗುವುದು ಯೋಗ್ಯವೆನ್ನಿಸಲಿಲ್ಲ. ಆದುದರಿಂದ ಕೌಶಿಕನು ತನ್ನ ಅಪಾರಸೈನ್ಯಕ್ಕೆ ಆಶ್ರಮದ ಹೊರಭಾಗದಲ್ಲೇ ಬೀಡುಬಿಟ್ಟು ಇಲ್ಲಿರೆಂದು ಆಜ್ಞಾಪಿಸಿ, ಕವಚ ಕುಂಡಲಾದಿಗಳನ್ನೂ ಧನುರ್ಬಾಣಗಳನ್ನೂ ತೆಗೆದಿಟ್ಟು, ಆಶ್ರಮ ಯೋಗ್ಯವಾದ ಸೌಮ್ಯ ವಸ್ತ್ರ ಭೂಷಣಾದಿಗಳನ್ನು ಧರಿಸಿ, ಏಕಾಂಗಿಯಾಗಿ ಮಹರ್ಷಿ ದರ್ಶನಕ್ಕೆ ಹೊರಟನು. ದೂರದಲ್ಲಿ ಸುಖಾಸನಾಸೀನರಾಗಿದ್ದ ಮಹಾ ತೇಜಸ್ಸಂಪನ್ನರಾದ ಆ ಮಹರ್ಷಿ ಶ್ರೇಷ್ಠರನ್ನು ಕಂಡೊಡನೆಯೇ ಕೌಶಿಕನು ಮಹಾಬಲ ಸಂಪನ್ನನಾದರೂ ವಿನಯ ವಿಧೇಯತೆಗಳಿಂದ ಮುಂದೆ ನಡೆದುಹೋಗಿ, ಅವರಿಗೆ ಸಾಷ್ಟಾಂಗಾಭಿವಾದನಮಾಡಿದನು. ಆಗ ವಸಿಷ್ಠರು ಆತನಿಗೆ ಸುಖಾಸನವನ್ನಿತ್ತು ಕುಳಿತುಕೊಳ್ಳಲು ಹೇಳಿ, ಗೆಡ್ಡೆ ಗೆಣಸುಗಳನ್ನೂ, ವಿವಿಧ ಫಲಗಳನ್ನೂ, ಶೀತಲೋದಕವನ್ನೂ ಕೊಡಿಸಿ, ಮಾರ್ಗಾಯಾಸ ಪರಿಹಾರವಾಗುವಂತೆ ಉಚಿತ ವಚನಗಳಿಂದ ಆದರಿಸಿದರು. ಅವರ ಉಪಚಾರಗಳಿಂದ ಅತಿಶಯ ಸಂತುಷ್ಟನಾದ ಗಾಧೇಯನು-"ಮಹರ್ಷಿಗಳೇ, ತಮ್ಮ ತಪಸ್ಸೂ, ಅಗ್ನಿಹೋತ್ರವೇ ಮುಂತಾದ ಕರ್ಮಗಳೂ ಲೋಕ ಕ್ಷೇಮಕ್ಕಾಗಿ ನಿರ್ವಿಘ್ನವಾಗಿ ಸಾಗುತ್ತಿರುವುವೇ? ಶಿಷ್ಯವರ್ಗವು ಕುಶಲವೇ? ಆಶ್ರಮ ವೃಕ್ಷಗಳು ಫಲಭರಿತಗಳಾಗಿವೆಯೇ? ಆಶ್ರಮದಲ್ಲಿನ ಕೂಪತಟಾಕಾದಿಗಳು ಜಲಸಮೃದ್ಧಗಳಾಗಿವೆಯೋ? ಆಶ್ರಮವಾಸೀ ಮೃಗಪಕ್ಷಿಗಳೂ ದುಷ್ಟಕಿರಾತರ ಪೀಡೆಗೆ ಒಳಗಾಗದೆ ಕ್ಷೇಮವಾಗಿವೆಯೇ?" ಎಂದು ಪ್ರಶ್ನಿಸಿದನು.

ಗಾಧೇಯನ ಈ ಪ್ರಶ್ನೆಗಳಿಗೆ ಉತ್ತರವಾಗಿ ವಸಿಷ್ಠರು-'ಮಹಾರಾಜಾ, ಜಗದ್ರಕ್ಷಕನ ಅನುಗ್ರಹದಿಂದ ಆಶ್ರಮವು ಸುಕ್ಷೇಮವಾಗಿದೆ. ನೀನು ಪತ್ನೀ ಪುತ್ರರೊಂದಿಗೂ, ಪ್ರಜಾಪರಿವಾರಗಳೊಂದಿಗೂ, ಕ್ಷೇಮವಾಗಿದ್ದೀಯಾ? ಧಾರ್ಮಿಕನಾದ ರಾಜನಿಗೆ ಪುತ್ರಸ್ವರೂಪರಾದವರೆಂದು ಹೇಳಿಸಿಕೊಳ್ಳುವ ಅಶೇಷ ಪ್ರಜಾವರ್ಗವನ್ನೂ ಪಕ್ಷಪಾತರಹಿತನಾಗಿ ಪೋಷಿಸುತ್ತಿರುವೆಯಾ? ಪ್ರಜೆಗಳೂ ಭೃತ್ಯರೂ ನಿನಗೆ ವಿಧೇಯರಾಗಿರುವರೇ? ದ್ರವ್ಯ ಸಂಪಾದನೆ, ಅದನ್ನು ಅಭಿವೃದ್ಧಿಗೊಳಿಸುವಿಕೆ, ಅದು ಕ್ಷೀಣಿಸದಂತೆ ಕಾಪಾಡುವಿಕೆ, ಮತ್ತು ಅದನ್ನು ಸನ್ಮಾರ್ಗದಲ್ಲಿ ವಿನಿಯೋಗಿಸುವಿಕೆ ಎಂಬೀ ನಾಲ್ಕು ರಾಜಧರ್ಮಗಳನ್ನು ಅರಿತು ನಡೆಯುತ್ತಿರುವೆಯಾ? ನಿನ್ನ ಸೈನ್ಯಗಳೂ ಬೊಕ್ಕಸಗಳೂ, ಮಿತ್ರರೂ ಉಳಿದ ರಾಜ್ಯಾಂಗಗಳೂ ಕ್ರಮವಾಗಿರುವುವೆ? ಮಹಾರಾಜನೇ ಪ್ರಜಾಸೇವೆಯೇ ಪರಮಾತ್ಮ ಸೇವೆಯ ಪ್ರತಿರೂಪವೆಂಬ ಭಾವನೆಯಿಂದ ಪ್ರೇರಿತನಾಗಿ, ರಾಜ್ಯಾಧಿಪತ್ಯವನ್ನು ಮಾಡುತ್ತಾ ಪ್ರಜಾನುರಾಗವನ್ನು ಸಂಪಾದಿಸಿಕೊಂಡಿರುವೆಯಾ?" ಎಂದು ಪ್ರಶ್ನಿಸಿದರು. ಗಾಧೇಯನು, ವಸಿಷ್ಠರು ಪ್ರಶ್ನಾರೂಪವಾಗಿ ಹೇಳಿದ ಆ ಬೋಧಪ್ರದ ವಾಕ್ಯಗಳನ್ನು ಕೇಳಿ, ವಿನಯದಿಂದ—'ಮಹರ್ಷಿ ಶ್ರೇಷ್ಠರೇ, ನಮ್ಮ ಪಿತೃಪಿತಾಮಹರು, ರಾಜ್ಯಪರಿಪಾಲನೆಯಲ್ಲಿ ಅನುಸರಿಸಿಕೊಂಡು ಬಂದ ಮಾರ್ಗವನ್ನು ತಪ್ಪದೆ, ತಾವು ಅಪ್ಪಣೆ ಕೊಡಿಸಿದಂತೆಯೇ ನಡೆಯುತ್ತಿದ್ದೇನೆ. ತಮ್ಮ ಅನುಗ್ರಹ ಬಲದಿಂದ ಸಕಲರೂ ಕ್ಷೇಮವಾಗಿದ್ದೇವೆ" ಎಂದು ನುಡಿದನು.

ಹೀಗೆ ಬಹು ಹೊತ್ತಿನವರೆಗೂ ಗಾಧೇಯನೂ ವಸಿಷ್ಠರೂ ಮಾತನಾಡಿಕೊಂಡು ಕುಳಿತಿದ್ದರು. ತರುವಾಯ ವಸಿಷ್ಠರು, ಆತನನ್ನು ಕುರಿತು—"ಮಹಾರಾಜಾ, ಬಹು ಕಾಲಕ್ಕೆ ಅಪೂರ್ವವಾಗಿ ಅರಣ್ಯವಾಸಿಗಳಾದ ನಮ್ಮ ಆಶ್ರಮಕ್ಕೆ ಮಹಾರಾಜನಾದ ನೀನು ಬಂದಿರುವೆ; ಇದು ನಮಗೊಂದು ವಿಶೇಷ ಸಂಭವವು. ಈ ಅಲಭ್ಯ ಸಂದರ್ಭವನ್ನು ಉತ್ತಮ ರೀತಿಯಿಂದ ಉಪಯೋಗಿಸಿಕೊಳ್ಳಬೇಕೆಂದು ಇಚ್ಛೆಯಾಗುತ್ತದೆ. ನಿನಗೂ ನಿನ್ನ ಈ ದೊಡ್ಡ ಸೈನ್ಯಕ್ಕೂ ರಾಜಯೋಗ್ಯವಾದ ಔತಣಮಾಡಿಸಿ ಸತ್ಕರಿಸಬೇಕೆಂದು ಯೋಚಿಸಿದ್ದೇನೆ. ನೀನು ಈ ನನ್ನ ಇಚ್ಛೆಯನ್ನು ಪ್ರೀತಿಯಿಟ್ಟು

ನೆರವೇರಿಸಿಕೊಡಬೇಕು" ಎಂದರು. ವಸಿಷ್ಠರ ಆ ಪ್ರೇಮಪೂರ್ಣ ಪ್ರಾರ್ಥನೆಯನ್ನು ಕೇಳಿ, ಗಾಧೇಯನು "ಮಹರ್ಷಿಗಳೇ, ನಮಗಾಗಿ ವಿಶೇಷ ಶ್ರಮ ತೆಗೆದುಕೊಳ್ಳುವಿರಲ್ಲಾ! ನೀವು ಈವರೆಗೇ ಮಾಡಿರುವ ಪ್ರೇಮಾದರ ಪೂರ್ವಕವಾದ ಸತ್ಕಾರಗಳೂ, ಒಪ್ಪಿಸಿರುವ ಕಂದಮೂಲ ಫಲಾದಿಗಳೂ ಅತಿಥ್ಯವಲ್ಲವೇನು! ನಿಮ್ಮ ದರ್ಶನಲಾಭ ದೊರೆತುದೇ ಮಹಾ ಶ್ರೇಯಸ್ಕರವಾದುದು. ಪ್ರೀತಿಪೂರ್ವಕವಾದ ನಿಮ್ಮ ವಾಕ್ಯಗಳೇ ನಮಗೆ ಸಮಸ್ತವಿಧ ರಾಜೋಪಚಾರಗಳಿಗಿಂತಲೂ ಮಿಗಿಲಾದುವು. ಹೆಚ್ಚು ಶ್ರಮೆಯೇಕೆ? ದಯವಿಟ್ಟು ನಮ್ಮ ಪ್ರಯಾಣಕ್ಕೆ ಅನುಮತಿಯನ್ನು ದಯಪಾಲಿಸಿರಿ" ಎಂದು ನುಡಿದನು.

ಅಷ್ಟುಮಾತ್ರಕ್ಕೇ ವಸಿಷ್ಠರು ಒಪ್ಪಿ ಸುಮ್ಮನಾಗಲಿಲ್ಲ. ಬಾರಿಬಾರಿಗೂ-'ಹಾಗಲ್ಲ, ನಮ್ಮ ಆತಿಥ್ಯವನ್ನು ಸ್ವೀಕರಿಸಿದ ತರುವಾಯವೇ ಪ್ರಯಾಣ ಮಾಡಬೇಕು. ಪ್ರೀತಿ ಪೂರ್ವಕವಾದ ನಮ್ಮಾ ಮನವಿಯನ್ನು ಮಹಾರಾಜನು ನಿರಾಕರಿಸಕೂಡದು' ಎಂದು ಬಹು ಬಗೆಯಿಂದ ನಿರ್ಬಂಧಗೊಳಿಸಿದರು. ತರುವಾಯ ಗಾಧೇಯನು-'ಮಹರ್ಷಿಗಳೇ, ತಮ್ಮ ಇಷ್ಟಬಂದಂತೆ ಮಾಡಿರಿ. ತಮ್ಮ ಆಶ್ರಮಕ್ಕೆ ಬಂದಮೇಲೆ, ನಾವು ತಮ್ಮ ಅಧೀನಕ್ಕೆ ಒಳಪಟ್ಟವರಾದೆವು. ತಮಗೆ ಅಸಂತೋಷವನ್ನುಂಟುಮಾಡುವುದು ಧರ್ಮವಲ್ಲ' ಎಂದು ಸಮಸ್ತ ಪರಿವಾರಗಳೊಡನೆಯೂ ಆಶ್ರಮದಲ್ಲೇ ನಿಂತು, ಆತಿಥ್ಯವನ್ನು ಸ್ವೀಕರಿಸಲು ಒಪ್ಪಿಕೊಂಡನು.

ಒಡನೆಯೇ ವಸಿಷ್ಠ ಮಹರ್ಷಿಗಳು ಬಹು ಸಂಭ್ರಮಗೊಂಡು, ತಮ್ಮ ಹೋಮಧೇನುವಾದ ಶಬಲೆಯನ್ನು ಬಳಿಗೆ ಕರೆದು-'ಅಮ್ಮಾ ಮಗಳೆ, ಇಗೋ ನೋಡು, ಮಹಾರಾಜನಾದ ಗಾಧೇಯನು ಪರಿವಾರ ಯುಕ್ತನಾಗಿ ಈ ದಿನ ನಮ್ಮ ಅತಿಥಿಯಾಗಿರುವನು. ಈತನಿಗೆ ಅಪೂರ್ವ ಔತಣವನ್ನು ನಡೆಸಿ ಸಂತೋಷಪಡಿಸಬೇಕೆಂದು ಇಚ್ಛಿಸಿ, ಇಲ್ಲೇ ನಿಲ್ಲಿಸಿಕೊಂಡಿರುವೆನು. ಈಗ ನೀನು, ಈತನಿಗೂ ಈತನ ಪರಿವಾರಕ್ಕೂ, ರಾಜಯೋಗ್ಯವಾದ ಭಕ್ಷ್ಯಭೋಜ್ಯಾದಿ ಸಕಲ ಆಹಾರ ಪದಾರ್ಥಗಳನ್ನೂ ಸಿದ್ಧಗೊಳಿಸಿ ದಿವ್ಯಾತನದಿಂದ ಸತ್ಕರಿಸಬೇಕಾಗಿದೆ. ಮಹಾರಾಜನಾದ ಈತನಿಗಾಗಲೀ

ಈತನ ಅಗಣಿತ ಸೈನ್ಯಕ್ಕಾಗಲೀ ಯಾವಭಾಗದಲ್ಲೂ ಕೊರತೆಯುಂಟಾಗ ದಂತೆ ಮಾಡಬೇಕಮ್ಮಾ!" ಎಂದು ನುಡಿದರು.

ಮಹಾಮಹಿಮರಾದ ವಸಿಷ್ಠರ ಮಾತನ್ನು ಕೇಳಿದ, ಆ ಕಾಮಧೇನು ಪುತ್ರಿಯು ಹಸನ್ಮುಖದಿಂದ ಹಾಗೇ ಆಗಲೆಂದು, ಆ ಮಹತ್ಸೈನ್ಯಕ್ಕೂ, ಮಹಾರಾಜನಿಗೂ ಆತನ ಸ್ವಂತ ಪರಿವಾರಕ್ಕೂ ಬೇಕುಬೇಕಾದ ಸಮಸ್ತ ಪದಾರ್ಥಗಳನ್ನೂ ಒದಗಿಸಲಾರಂಭಿಸಿತು. ಸಾಕ್ಷಾತ್ತು ಕಾಮಧೇನುವೇ ನಿಂತು ಇಚ್ಛಾಪೂರ್ಣಮಾಡಲು ಪ್ರಾರಂಭಿಸಿದಮೇಲೆ, ಮುಂದೆ ಹೇಳಬೇಕಾದುದೇನು! ಬಗೆಬಗೆಯ ಶಾಲ್ಯಾನ್ನರಾಸಿಗಳೂ, ನಾಲ್ಕೆಂಟು ಬಗೆಯ ಸಾರು ತೊವ್ವೆ ಹುಳಿ ಪರಮಾನ್ನಾದಿಗಳೂ, ಗೊಜ್ಜು ಚಟ್ನಿ ಕೋಸುಂಬರಿ ಗಳೂ, ಹಲವು ವಿಧದ ಕರಿದ ಬೇಯಿಸಿದ ಮತ್ತು ಸುಟ್ಟ ಭಕ್ಷ್ಯಭೋಜ್ಯಾ ದಿಗಳೂ ಸಿದ್ಧವಾದುವು. ಷಡ್ರಸೋಪೇತವಾದ ಸಮಸ್ತ ಆಹಾರ ಪದಾ ರ್ಥಗಳನ್ನೂ ಸಾಕು ಸಾಕೆಂಬಂತೆ ತಿಂದು, ಸಕಲರೂ ಇಂತಹ ಅಪೂರ್ವ ವಾದ ಮತ್ತು ರುಚಿಕರವಾದ ಪದಾರ್ಥಗಳನ್ನು ನಮ್ಮ ಜನ್ಮಾರಭ್ಯ ಕಂಡು ಕೇಳಿದುದಿಲ್ಲವೆಂದು ಆ ಔತಣ ಸಮಾರಂಭವನ್ನು ಕುರಿತು ಪರಮಾಶ್ಚರ್ಯ ಪಟ್ಟರು. ಮಹಾರಾಜನಾದ ಗಾಧೇಯನಂತೂ, ಅಂತಃಪುರ ಸ್ತ್ರೀ ಜನ ರೂ, ಮಂತ್ರಿ ಪುರೋಹಿತರೂ, ಮಿತ್ರರಾದ ರಾಜಪುತ್ರರೂ, ಇವರೊಂ ದಿಗೆ ಆ ಅಪೂರ್ವ ಔತಣಗೊಂಡು, ಅತ್ಯಂತ ಆನಂದಾಶ್ಚರ್ಯಮಗ್ನನಾಗಿ, ವಸಿಷ್ಠ ಮಹರ್ಷಿಗಳನ್ನು ಬಹು ಬಗೆಯಿಂದ ಅಭಿನಂದಿಸುತ್ತಾ,—'ಪೂ ಜ್ಯರೇ, ನೀವು ಮಾಡಿಸಿದ ಈ ಔತಣವು ರಾಜಾಧಿರಾಜರಿಂದಲೂ ಸಾಧ್ಯವಲ್ಲ ದುದು. ನಿಮ್ಮಾ ಅದ್ಭುತ ಸತ್ಕಾರವನ್ನು ನಾವು ನಮ್ಮ ಜನ್ಮಾವಧಿ ಮರೆ ಯುವಂತೆ ಇಲ್ಲ. ಆದರೆ ಅತಿಥಿಯಾದ ನನ್ನ ಪ್ರಾರ್ಥನೆಯು ಇನ್ನೊಂ ದುಂಟು. ಅದನ್ನೂ ತಾವು ನೆರವೇರಿಸಿ ಕೊಡಬೇಕು. ತಮಗೆ ಸಹ ಸ್ರಾರು ಇತರ ಧೇನುಗಳನ್ನು ಕೊಡಲು ಸಿದ್ಧನಾಗಿರುವೆನು. ಧೇನು ಕುಲಕ್ಕೇ ರತ್ನಪ್ರಾಯವಾಗಿರುವ ಈ ಕಾಮಧೇನುವೊಂದನ್ನು ಮಾತ್ರ ನನಗೆ ದಯವಿಟ್ಟು ಕೊಡಬೇಕು. ಲೋಕದಲ್ಲಿರುವ ಉತ್ತಮೋತ್ತಮ ವಸ್ತುಗಳೆಲ್ಲವೂ ರಾಜನಿಗೆ ಸೇರಬೇಕಾದುವು ಎಂಬ ಧರ್ಮವು ತಮಗೆ ತಿಳಿಯದುದಲ್ಲವಷ್ಟೆ!" ಎಂದು ನುಡಿದನು.

ಆ ಮಾತನ್ನು ಕೇಳಿ ವಸಿಷ್ಠರು, ನಗುತ್ತಾ—"ಮಹಾರಾಜಾ, ಸಹಸ್ರ ಗೋವುಗಳೇ ಏಕೆ, ಲಕ್ಷಾವಧಿ-ಕೋಟ್ಯಾವಧಿ ಗೋವುಗಳನ್ನು ನೀನೊಂದು ವೇಳೆ ಒಪ್ಪಿಸಬಹುದಾದರೂ, ಈ ಧೇನು ರತ್ನವನ್ನು ನಾನು ಕೊಡಲಾರೆನು—ಮಾತ್ರವಲ್ಲ ನಿನ್ನ ಬೊಕ್ಕಸದಲ್ಲಿ ತುಂಬಿರುವ ಅಸಂಖ್ಯ ರತ್ನ ಮಾಣಿಕ್ಯಾದಿಗಳೂ, ಹೆಚ್ಚೇನು, ವಿಸ್ತಾರವಾದ ನಿನ್ನೀ ಸಾಮ್ರಾಜ್ಯವೂ ಇದನ್ನು ದೊರಕಿಸಲಾರವು. ರಾಜನೇ, ತಪೋನಿರತನಾದ ನಾನು, ದೇವತೆಗಳಿಗೆ ಸಮರ್ಪಿಸಬೇಕಾದ ಹವ್ಯವನ್ನೂ, ಪಿತೃಗಳಿಗೆ ಸಮರ್ಪಿಸಬೇಕಾದ ಕವ್ಯವನ್ನೂ, ನನ್ನ ನಿತ್ಯಾನುಷ್ಠಾನಕ್ಕೆ ಸಂಬಂಧಿಸಿದ ಅಗ್ನಿಹೋತ್ರ, ಅತಿಥಿ ಯಜ್ಞ, ಬಲಿಹರಣ ಮುಂತಾದ ಸಮಸ್ತ ಕಾರ್ಯಗಳನ್ನೂ ಈ ಧೇನುವಿನ ಸಹಾಯದಿಂದ ನಡೆಯಿಸಿಕೊಳ್ಳುತ್ತಿರುವೆನು. ಇದು ನನ್ನ ಪ್ರಾಣಸ್ವರೂಪವಾಗಿ, ನನ್ನೀ ನಿತ್ಯಕರ್ಮಗಳೆಲ್ಲಕ್ಕೂ ಮುಖ್ಯ ಸಾಧನವಾಗಿರುವುದು. ಅಲ್ಲದೆ, ಇದು ನನ್ನ ತಪೋಕಾರ್ಯಕ್ಕಾಗಿ ದೇವೇಂದ್ರನಿಂದ ಅನುಗ್ರಹಿಸಲ್ಪಟ್ಟುದು; ದೇವದತ್ತವಾದ ಇದನ್ನು ನಾನು ಸ್ವತಂತ್ರಿಸಿ ಕೊಡುವಂತೆಯೂ ಇಲ್ಲ" ಎಂದು ಬಹು ಬಗೆಯಿಂದ ಹೇಳಿದರು. ಆದರೂ, ರಾಜನಿಗೆ ಅದರ ಮೇಲೆ ಹುಟ್ಟಿದ ಅಪೇಕ್ಷೆಯು ಕುಂದಲಿಲ್ಲ—"ಮಹರ್ಷಿ ಶ್ರೇಷ್ಠರೇ, ಚಿನ್ನ ಬೆಳ್ಳಿಯ ಒಡವೆಗಳಿಂದಲೂ, ದಿವ್ಯ ಹಾರ ಕಾಲ್ಗಡಗಗಳಿಂದಲೂ ಅಲಂಕೃತವಾದ ನಾಲ್ಕು ಸಾವಿರ ಆನೆಗಳನ್ನೂ, ಸುವರ್ಣಮಯವಾದ ಎಂಟು ನೂರು ರಥಗಳನ್ನೂ, ಉತ್ತಮ ಜಾತಿಯಲ್ಲಿ ಹುಟ್ಟಿದ ಹನ್ನೊಂದು ಸಾವಿರ ಕುದುರೆಗಳನ್ನೂ, ಸುವರ್ಣದ ಗೆಜ್ಜೆ ಕೋಡು ಕೊಳಗಗಳಿಂದಲೂ, ಹಾರ ಪೀತಾಂಬರಗಳಿಂದಲೂ ಅಲಂಕರಿಸಲ್ಪಟ್ಟ ಒಂದು ಕೋಟಿ ಪ್ರಾಯದ ಹಸುಗಳನ್ನೂ ತಮಗೆ ಒಪ್ಪಿಸುವೆನು. ಇದೊಂದು ದಿವ್ಯ ಧೇನುವನ್ನು ಮಾತ್ರ ನನಗೆ ಕೊಡುವ ಮನಸ್ಸು ಮಾಡಿರಿ" ಎಂದು ಪುನಃ ಅಂಗಲಾಚಿಕೊಂಡನು. ಆಗಲೂ ವಸಿಷ್ಠರು—"ರಾಜೇಂದ್ರಾ, ನೀನು ಏನು ಕೊಟ್ಟರೂ, ಈ ಧೇನು ಮಾತ್ರ ವಿನಿಮಯವಾಗಿ ದೊರೆಯಲಾರದು. ಇದೇ ನನ್ನ ಧನವು, ಸರ್ವಸ್ವವು, ಹೆಚ್ಚೇನು! ಇದು ನನ್ನ ಪ್ರಾಣಸ್ವರೂಪವಾದುದು. ನನ್ನ ಸಮಸ್ತ ಸತ್ಕರ್ಮಗಳೂ, ವ್ರತನಿಯಮಾದಿಗಳೂ ಇದನ್ನೇ ಅವಲಂಬಿಸಿಕೊಂಡಿರುವಾಗ, ತಪೋನಿರತನಾದ ನಾನು ಇದನ್ನು ಬೇ

ರೊಬ್ಬರಿಗೆ ಒಪ್ಪಿಸುವುದೆಂದರೆ, ನನ್ನ ಪಂಚಪ್ರಾಣಗಳನ್ನೂ ಒಪ್ಪಿಸಿದಂತೆಯೇ ಸರಿ. ರಾಜಾ, ಸುಮ್ಮನೆ ಏಕೆ ಶ್ರಮಪಡುವೆ? ಇದು ನಿನಗೆಂದಿಗೂ ದೊರೆಯಲಾರದು. ನಾನಿದನ್ನು ಎಂದಿಗೂ ಕೊಡಲಾರೆನು'' ಎಂದು ನುಡಿದರು.

ಮಹಾರಾಜನಾದ ತನ್ನ ಇಚ್ಛೆಯು, ಕೇವಲ ವನವಾಸಿಯಾದ ಒಬ್ಬ ಮುನಿಯಿಂದ ತುಚ್ಛೀಕರಿಸಲ್ಪಟ್ಟುದೊಂದು, ಆ ಧೇನುವಿನ ಮೇಲಿದ್ದ ಅಮಿತ ಆಕಾಂಕ್ಷೆಯೊಂದು, ಇವುಗಳಿಂದ ಗಾಧೇಯನು ಬುದ್ಧಿಗೆಟ್ಟಂತಾಗಿ - ಏನಾದರಾಗಲಿ, ಬಲಾತ್ಕಾರದಿಂದಲಾದರೂ, ಅದನ್ನು ಅಪಹರಿಸಿ, ದಕ್ಕಿಸಿಕೊಳ್ಳಲೇ ಬೇಕೆಂದು ಛಲಗೊಂಡನು. ಒಡನೆ ಹಗ್ಗಗಳಿಂದ ಕಟ್ಟಿ ಅದನ್ನು ಎಳೆದುಕೊಂಡು ನಡೆಯಿರೆಂದು ಸೈನಿಕರಿಗೆ ಆಜ್ಞಾಪಿಸಿದನು. ರಾಜಾಜ್ಞೆ, ಮುಂದೆ ಕೇಳುವುದೇನು! ಭಟರು, ನೂಲು ಹಗ್ಗಗಳಿಂದ ಆ ದೇವಲೋಕದ ಧೇನುರತ್ನವನ್ನು ಬಂಧಿಸಿ ಎಳೆಯುತೊಡಗಿದರು. ಆಗಲಾ ಧೇನುವು ಆರ್ತನಾದ ಮಾಡುತ್ತಾ—'ಅಕ್ಕಟಾ ಇದೇನೀ ದುಸ್ಥಿತಿಯು! ನಾನು ಯಾರಿಗೆ, ಏನು ಅಪರಾಧ ಮಾಡಿದೆನು? ನನಗೇಕೆ ಈ ಬಂಧನವು ಪ್ರಾಪ್ತವಾಯಿತು? ಮಹಾತ್ಮರಾದ ವಸಿಷ್ಠರಿಗೆ ನನ್ನ ಮೇಲಿದ್ದ ಪ್ರೀತಿಯು ಬರತೆಯು ಬತ್ತಿತೆ? ಇದೇನೀ ಅತ್ಯಾಚಾರವು!'' ಎಂದುಕೊಂಡಿತು— ಮಹಾತ್ಮರೇ, ಇದೇನು ರಾಜಭಟರು ಹಗ್ಗಗಳಿಂದ ಕಟ್ಟಿ, ತಮ್ಮಿಂದ ಅಗಲಿಸಿ ನನ್ನನ್ನು ಎಳೆದುಕೊಂಡು ಹೋಗುತ್ತಿರುವರಲ್ಲಾ! ಏಕೆ ಉದಾಸೀನರಾಗಿರುವಿರಿ. ನನ್ನನ್ನು ಕೈ ಬಿಟ್ಟಿರಾ!'' ಎಂದು ಪ್ರಾರ್ಥಿಸಿತು. ಆ ಗೋಮಾತೆಯ ಮೊರೆಯನ್ನು ಕೇಳಿ, ವಸಿಷ್ಠರು—'ಅಮ್ಮಾ ನಾನೇನು ಹೇಳಲಿ! ನಿನ್ನಿಂದ ಬಹು ಬಗೆಯಿಂದ ಉಪಕೃತನಾದ ನಾನು ನಿನ್ನನ್ನು ಹೇಗೆ ಬಿಡಲಿ? ಆದರೆ, ಈಗ ಮಹಾ ಬಲಶಾಲಿಯೂ, ಅಕ್ಷೋಹಿಣೀಪತಿಯೂ, ಧನುರ್ಧಾರಿಯೂ ಆದ ಈ ರಾಜನು ಬಲಾತ್ಕಾರವಾಗಿ ನಿನ್ನನ್ನೆಳೆದೊಯ್ಯಲು ತೊಡಗಿರುವನು. ರಾಜನಾದ ಇವನನ್ನು ಬ್ರಾಹ್ಮಣನಾದ ನಾನು ಹೇಗೆ ನಿವಾರಿಸಲಿ! ಚತುರಂಗಬಲ ಸಮೇತನಾಗಿ ಕುಮಾರ್ಗಪ್ರವರ್ತಕನಾದ ಈತನನ್ನು ನನ್ನ ತಪೋಬಲದಿಂದ ನಿಗ್ರಹಿಸಬಹುದಾದರೂ ರಾಜನಾದ ಈತನನ್ನು ಪ್ರಜೆಗಳಾದ ನಾವು ಎದುರಿಸಲಾಗದು. ಅದು

ಧರ್ಮವಲ್ಲ' ಎಂದರು. ವಸಿಷ್ಠರ ಆ ಮಾತಿಗೆ ಪ್ರತ್ಯುತ್ತರವಾಗಿ ಸಂದಿನಿಯು—'ಮಹಾತ್ಮರೇ, ಇದೇನು ಕ್ಷತ್ರಿಯನ ಶಸ್ತ್ರಬಲವು ತಮ್ಮ ತಪೋಬಲಕ್ಕಿಂತಲೂ ಎಂದಿಗಾದರೂ ಹೆಚ್ಚಾದೀತೆ? ಬ್ರಹ್ಮತೇಜಸ್ಸೆಲ್ಲಿ, ಕ್ಷತ್ರಿಯ ತೇಜಸ್ಸೆಲ್ಲಿ? ನಿಮ್ಮ ಬ್ರಹ್ಮತೇಜದೆದುರಿಗೆ, ಈ ದುಷ್ಟ ರಾಜನ ಅಸ್ತ್ರಶಸ್ತ್ರಾದಿಗಳೆಲ್ಲವೂ ತೃಣಪ್ರಾಯವಲ್ಲವೆ! ಏಕೆ ಶಂಕಿಸುವಿರಿ. ತಾವೇನೂ ಶ್ರಮಪಡಬೇಕಾದುದಿಲ್ಲ. ನನಗೆ ಅನುಗ್ರಹಿಸಿ ಅಪ್ಪಣೆ ಕೊಡಿ. ಕ್ಷಣಮಾತ್ರದಲ್ಲಿ, ಈ ದುರಾತ್ಮನ ಕೊಬ್ಬಡಗಿಸಿ, ಬಂಧನಿವೃತ್ತಿ ಮಾಡಿಕೊಳ್ಳುವೆನು'' ಎಂದಿತು.

ವಸಿಷ್ಠರು, ಶಬಲೆಯ ಆ ಮಾತಿಗೆ ಸಮ್ಮತಿಸಿದರು.—'ಅಮ್ಮಾ ಹಾಗೆಯೇ ಮಾಡು. ನಿನ್ನ ಅವಯವಗಳಿಂದಲೇ ಸೈನ್ಯವನ್ನು ಸೃಷ್ಟಿಸಿ, ಈ ಶತ್ರು ಸೈನ್ಯವನ್ನು ನಿರ್ಮೂಲಗೊಳಿಸು'' ಎಂದು ಅನುಗ್ರಹಿಸಿದರು. ಒಡನೆ, ಆ ಧೇನುವು ಒಂದು ಸಾರಿ ಹುಂಕರಿಸಿ ವ್ಯೆಯನ್ನು ಕೊಡಹಲು, ಅದರಿಂದ ಪಪ್ಲವರೆಂಬ ವೀರಭಟರ ಸೈನ್ಯವೊಂದು ಸೃಷ್ಟಿಯಾಗಿ, ರಾಜನ ಸೈನ್ಯವನ್ನು ಕಂಡಲ್ಲಿ ಕೊಲ್ಲತೊಡಗಿತು. ತನ್ನ ಕಣ್ಣೆದುರಿಗೇ ನಾಶವಾಗುತ್ತಿದ್ದ ತನ್ನ ಸೈನ್ಯವನ್ನು ಕಂಡು, ಮಹಾ ರೋಷಾಕ್ರಾಂತನಾದ ರಾಜನು ಧನುರ್ಧಾರಿಯಾಗಿ ಅವರನ್ನೆಲ್ಲ ವಧಿಸಲಾರಂಭಿಸಿದನು. ಅವರು ಹತರಾದರೆಂಬ ವೇಳೆಗೆ, ಆ ಕಾಮಧೇನುವಿನ ವ್ಯೆಯಿಂದ ಪುನಃ ಶಕರು ಯವನರು ಮುಂತಾದ ಸೈನ್ಯ ಪರಂಪರೆಯು ಉದ್ಭವವಾಗಿ, ರಾಜನ ಅಸಂಖ್ಯ ಸೈನ್ಯವನ್ನು ಸಂಹರಿಸಿತು. ಗಾಧೇಯನೂ ಸಹ ಅನೇಕ ದಿವ್ಯಾಸ್ತ್ರ ಪ್ರಯೋಗದಿಂದ ಆ ಅರಿಸೈನ್ಯವನ್ನು ಧ್ವಂಸಗೊಳಿಸುತ್ತಿದ್ದನು. ಮೇಲೆ ಮೇಲೆ ಶಬಲೆಯು ವಸಿಷ್ಠರ ಆಜ್ಞೆಯಿಂದ ನವೀನ ಸೈನ್ಯಗಳನ್ನು ಸೃಷ್ಟಿಸುತ್ತಲೇ ಇದ್ದಿತು. ಕಾಂಭೋಜರು, ತುರುಷ್ಕರು, ಹಾರೀತರು, ಕಿರಾತರು ಎಂಬೀ ಮಹಾ ಬಲಶಾಲಿಗಳಾದ ಅಸಂಖ್ಯ ಬಲವು ಉದ್ಭವವಾಗಿ, ರಾಜನ ಸೈನ್ಯವೆಲ್ಲವನ್ನೂ ನಿರ್ಮೂಲಗೊಳಿಸಿತು. ಗಾಧೇಯನು ಮಹಾ ರೋಷದಿಂದ ಆರ್ಭಟಿಸುತ್ತ, ತನ್ನ ಸರ್ವ ಶಕ್ತಿಯನ್ನೂ ವಿನಿಯೋಗಿಸಿ, ಭಯಂಕರ ಯುದ್ಧದಲ್ಲಿ ಆ ಸೈನ್ಯವೆಲ್ಲವನ್ನೂ ನಾಶಮಾಡುತ್ತಾ ಇದ್ದನು. ಅಷ್ಟರಲ್ಲಿ, ಇಷ್ಟೆಲ್ಲವೂ ಈ ತಪಸ್ವಿಯ ಮಹಿಮೆಯಿಂದಲೇ ನಡೆಯು

ತ್ತಿರುವುದೆಂದು ತಿಳಿದು, ರಾಜನ ನೂರುಮಂದಿ ಮಕ್ಕಳೂ ವಿವಿಧ ಆಯುಧಗಳನ್ನು ಎತ್ತಿಕೊಂಡು ವಸಿಷ್ಠಮಹರ್ಷಿಗಳನ್ನೇ ಘಾತಿಸಬೇಕೆಂದು ಅವರ ಮೇಲೇರಿ ಹೋದರು. ಆ ದುರಾತ್ಮರ ಕೇಡಿಗ ಬುದ್ಧಿಯನ್ನು ಕಂಡ ಆ ಮಹಾತ್ಮರು, ಕೋಪದಿಂದ ಒಂದಾವರ್ತಿ ಹುಂಕಾರಮಾಡಿದ ಮಾತ್ರದಲ್ಲೇ ಅವರೆಲ್ಲರೂ ಸುಟ್ಟು ಬೂದಿಯಾಗಿ ಹೋದರು. ಒಂದೆಡೆ, ಸಮಸ್ತ ಸೈನ್ಯಗಳೂ ಹತವಾಗಿ ಬಿದ್ದಿವೆ. ಮತ್ತೊಂದೆಡೆ ತನ್ನ ನೂರ್ವರು ಪುತ್ರರೂ ಕ್ಷಣಮಾತ್ರದಲ್ಲಿ ಬೂದಿಯ ಗುಡ್ಡೆಯಾಗಿ ಬಿದ್ದಿದಾರೆ. ಎದುರಿಗೆ ತನ್ನಾ ಪರಾಭವಕ್ಕೆ ಮೂಲಕಾರಣವಾದ ಆ ಧೇನುವೂ ವಸಿಷ್ಠರೂ, ಏನಪಾಯವೂ ಇಲ್ಲದೆ ಸುರಕ್ಷಿತವಾಗಿ ನಿಂತಿದ್ದಾರೆ. ಇದನ್ನು ಕಂಡ ಮಹಾರಾಜನು, ಬಹು ನಾಚಿಕೆಗೊಂಡನು. ತನ್ನ ಅವಿವೇಕವನ್ನು ಹಲವು ಬಗೆಯಿಂದ ಹಳಿದುಕೊಂಡನು. ಅವನ ಕೊಬ್ಬಡಗಿತು. ಹಲ್ಲುಕಿತ್ತ ಸರ್ಪದಂತೆ ಸ್ತಬ್ಧನಾದನು. ಇದಾದಮೇಲೆ ರಾಜನು, ರಾಹುಗ್ರಸ್ತನಾದ ಸೂರ್ಯನಂತೆ ತೇಜೋವಿಹೀನನಾಗಿ, ದಿಕ್ಕೇ ತೋರದಂತೆ ನಿಂತುಬಿಟ್ಟನು. ಆತನ ದಂಭ ದರ್ಪಗಳು ಅಡಗಿದುವು. ಸೈನ್ಯವು ನಾಶವಾಯಿತು. ಮಕ್ಕಳು ನಿರ್ನಾಮರಾದರು. ವೈಯೆಲ್ಲ ಝುರ್ಝುರಿತವಾಯಿತು. ಈ ಪರಾಭವಗಳಿಂದ ಆತನು ಬಹು ಹಣ್ಣಾಗಿ, ನಾಚಿಕೆಯೂ ದುಃಖವೂ ತರಂಗ ತರಂಗವಾಗಿ ಉಕ್ಕೇರುತ್ತಿರಲು ಉಪಾಯಕಾಣದೆ, ಬಹು ಹೊತ್ತು ಚಿಂತಿಸುತ್ತಿದ್ದು, ಕೊನೆಗೆ ತನ್ನ ಮಕ್ಕಳಲ್ಲಿ ಸತ್ತವರು ಹೋಗಲಾಗಿ ಉಳಿದ ಒಬ್ಬನನ್ನು ರಾಜ್ಯಕ್ಕೆ ನಿಯಮಿಸಿ, ಅವನನ್ನಿಟ್ಟುಕೊಂಡು ರಾಜ್ಯವನ್ನು ಪಾಲಿಸುತ್ತಿರುವಂತೆ ಮಂತ್ರಿ ಸಾಮಂತರಿಗೆ ನಿಯಮಿಸಿ ಕಳುಹಿಸಿ; ತಾನು ತನ್ನ ಅಷ್ಟು ಪರಾಭವಕ್ಕೂ ಆಕರವಾದ ಆ ವಸಿಷ್ಠಾಶ್ರಮದಿಂದ ಹೊರಬಿದ್ದನು.



## ಅಧ್ಯಾಯ ೩ "ರಾಜರ್ಷಿ ವಿಶ್ವಾಮಿತ್ರರು"

ವಸಿಷ್ಠಾಶ್ರಮದಿಂದ ಹೊರಬಿದ್ದ ಗಾಧೇಯನು, ಸಿದ್ಧ ಚಾರಣರಿಂದಲೂ, ಕಿನ್ನರ ಕಿಂಪುರುಷಾದಿಗಳಿಂದಲೂ ಸೇವಿತವಾದ ಹಿಮಾಲಯ ಪರ್ವ

ತದ ತಪ್ಪಲು ಪ್ರದೇಶವನ್ನು ಆಶ್ರಯಿಸಿ ರುದ್ರನನ್ನು ಕುರಿತು, ಭಯಂಕರವಾದ ತಪಸ್ಸನ್ನು ಆಚರಿಸಲು, ಪ್ರಾರಂಭಿಸಿದನು. ಮಹಾನಿಷ್ಠನಾಗಿ ಏಕಾಗ್ರ ಚಿತ್ತದಿಂದ ಮಾಡಿದ ಆತನ ಸ್ವಲ್ಪಕಾಲದ ತಪಸ್ಸಿಗೇ ಮೆಚ್ಚಿ, ವೃಷಭಧ್ವಜನಾದ ಶಂಕರನು ಪ್ರತ್ಯಕ್ಷನಾಗಿ-'ರಾಜನೇ, ಇಂತಹ ಉಗ್ರವಾದ ತಪಸ್ಸಿನಿಂದ ನೀನು ಸಾಧಿಸಲಪೇಕ್ಷಿಸಿದ ವಸ್ತುವಾವುದು ? ನಿನ್ನ ಮನೋಗತವೇನುಂಟೆಂಬುದನ್ನು ಹೇಳು' ಎಂದು ಪ್ರಶ್ನಿಸಲು, ಗಾಧೇಯನು-'ಪ್ರಭೋ ಮಹಾದೇವ, ನೀನು ನನಗೆ ಸುಪ್ರಸನ್ನನಾಗಿರುವುದು ಸತ್ಯವಾದರೆ, ನನಗೆ ಅಶೇಷ ಧನುರ್ವೇದವನ್ನೂ ಉಪದೇಶಿಸು. ಸಮಸ್ತ ಮಂತ್ರಾಸ್ತ್ರ ರಹಸ್ಯಗಳನ್ನೂ ಸಾಂಗವಾಗಿ ಅನುಗ್ರಹಿಸು. ದೇವ ದಾನವರೂ ಯಕ್ಷ ರಾಕ್ಷಸಾದಿಗಳೂ ಯಾವ ವಿಶೇಷಾಸ್ತ್ರ ಶಸ್ತ್ರಗಳನ್ನು ಉಪಯೋಗಿಸುತ್ತಿರುವರೋ ಅವುಗಳೆಲ್ಲವೂ ನನಗೆ ವಶವಾಗುವಂತೆ ಮಾಡು. ಇದೇ ನನ್ನ ಕೋರಿಕೆಯು' ಎಂದನು. ಶಂಕರನು, ಆ ಪ್ರಾರ್ಥನೆಗೆ ಹಸನ್ಮುಖದಿಂದ 'ತಥಾಸ್ತು' (ಹಾಗೆಯೇ ಆಗಲಿ) ಎಂದು ನುಡಿದು, ಆತನ ತಲೆಯಮೇಲೆ ಕೈಯಿಟ್ಟು ಆಶೀರ್ವದಿಸಿ, ಅಂತರ್ಧಾನವಾದನು.

ಸ್ವಾಭಾವಿಕವಾಗಿಯೇ ಕ್ಷತ್ರಿಯನಾದ ಗಾಧೇಯನಿಗೆ, ಈ ಅಸ್ತ್ರ ಶಸ್ತ್ರಾದಿಗಳ ಲಾಭದಿಂದ, ಕಳೆದುಹೋಗಿದ್ದ ಪೌರುಷವು ಪುನಃ ಉದಯವಾಯಿತು. ರುದ್ರನ ವರಬಲದಿಂದ ಮನಸ್ಸಿನಲ್ಲಿ ಅಭಿಮಾನ ಅಹಂಕಾರಾದಿಗಳು ವಿಶೇಷವಾಗಿ ಹೆಚ್ಚಿ, - 'ಇನ್ನು ನನ್ನನ್ನು ಎದುರಿಸಬಲ್ಲ ವೀರನಾರು! ಇಂದು ವಸಿಷ್ಠನನ್ನು ಧ್ವಂಸಮಾಡಿ, ಮಣ್ಣುಗೂಡಿಸಿ, ಅವನ ಆ ಧೇನುವನ್ನು ಎಳೆತರುವೆನು'' ಎಂದು ಅಟ್ಟಹಾಸಮಾಡುತ್ತ, ಪುನಃ ವಸಿಷ್ಠಾಶ್ರಮಕ್ಕೆ ಬಂದು, ಪ್ರಳಯಾಗ್ನಿ ಸ್ವರೂಪವಾದ ಭಯಂಕರ ಅಸ್ತ್ರಗಳನ್ನು ಪ್ರಯೋಗಿಸತೊಡಗಿದನು. ಆ ಅಸ್ತ್ರಗಳು ಜ್ವಾಲಾ ಸ್ವರೂಪವಾಗಿ ಆ ತಪೋವನವೆಲ್ಲವನ್ನೂ ಧ್ವಂಸಗೊಳಿಸಿದುವು. ಅದರ ಬೇಗೆಯನ್ನು ಸಹಿಸಲಾರದೆ, ಅಲ್ಲಲ್ಲೇ ಎಲೆವನೆಗಳಲ್ಲಿ ವಾಸಿಸಿದ್ದ ಮುನಿಗಳೂ, ವಟುಗಳೂ, ಮುನಿಸ್ತ್ರೀಯರೂ, ಗಿಡ ಪೊದರುಗಳಲ್ಲಡಗಿದ್ದ ಮೃಗಪಕ್ಷಿಗಳೂ ಪ್ರಾಣಭೀತಿಯಿಂದ ದಿಕ್ಕುದಿಕ್ಕಿಗೆ ಪಲಾಯನವಾದುವು. ಗಾಧಿಪುತ್ರನ ಅಸ್ತ್ರಗಳು ನಿಮಿಷಮಾತ್ರದಲ್ಲಿ ಮನೋಹರವಾದ ಆ ತಪೋವನವನ್ನು ನಿರ್ಜನ - ಮರು

ಭೂಮಿಯನ್ನಾಗಿಸಿದುವು. ಕೋಮಲವಾಗಿ ಬೆಳೆದಿದ್ದ ವೃಕ್ಷಲತಾದಿಗಳೆಲ್ಲವೂ ಭಸ್ಮೀಭೂತವಾದುವು. ಈ ಪರಿಸ್ಥಿತಿಯು, ವಸಿಷ್ಠರ ಗಮನಕ್ಕೆ ಬರಲು, ಅವರು ಆಶ್ರಮಕ್ಕೆ ಪ್ರಾಪ್ತವಾದ ಹಾನಿಯನ್ನು ಕಂಡು ಕಡುಮರುಗಿ, ಓಡಿಹೋಗುತ್ತಿದ್ದ ಮುನಿಗಳನ್ನೂ ಮುನಿವಟುಗಳನ್ನೂ,—'ಭಯಪಡಬೇಡಿರಿ - ಓಡಿಹೋಗಬೇಡಿ, ಬನ್ನಿರಿ. ಕ್ಷಣಕಾಲದಲ್ಲಿ ಈ ದುಷ್ಟರಾಜನ ಕೊಬ್ಬಡಗಿಸಿ, ಆಶ್ರಮವನ್ನು ಸುರಕ್ಷಿತಗೊಳಿಸುವೆನು' ಎಂದು ಅಭಯದಾನ ಮಾಡಿದರು. ಆ ವೇಳೆಗೆ, ಅರ್ಭಟಿಸುತ್ತಾ ಎದುರಿಗೆ ಬಂದ ರಾಜನು, ಆ ಮಹರ್ಷಿಗಳ ಮೇಲೂ, ಬಾಣಪ್ರಯೋಗ ಮಾಡಲು ಹವಣಿಸಿದನು. ಆಗ ವಸಿಷ್ಠರು—'ಎಲವೋ ಕೇಡಿಗನೆ, ಎಷ್ಟೋ ದಿನಗಳಿಂದಲೂ ಸೊಂಪಾಗಿ ಬೆಳೆಸಿದ್ದ ಆಶ್ರಮವನ್ನೆಲ್ಲ ಧ್ವಂಸಗೊಳಿಸಿದೆಯಲ್ಲಾ! ನಿನ್ನ ಮೈಯಲ್ಲಿ ಕೊಬ್ಬು ಹೆಚ್ಚಿರುವುದು. ತಕ್ಕ ಶಿಕ್ಷೆಯಾಗದೆ ಅದು ಇಳಿಯದು. ಬಾ, ನಿನ್ನೀ ಅಕೃತ್ಯಕ್ಕೆ ತಕ್ಕ ಫಲವನ್ನು ಈಗಲೇ ದೊರಕಿಸುವೆನು'' ಎಂದು ನುಡಿದು, ಆತನಿಂದ ಬರುತ್ತಿದ್ದ ಪ್ರಳಯಾಗ್ನಿಯಂತೆ ಭಯಂಕರವಾದ ಅಸ್ತ್ರಗಳಿಗೆ ಎದುರಾಗಿ, ಹೊಗೆಯಾಡದ ಕಾಲಾಗ್ನಿಯಂತೆಯೂ, ಬೇರೊಂದು ಯಮದಂಡವೋ ಎಂಬಂತೆಯೂ, ಅದ್ಭುತತೇಜೋಮಯವಾಗಿ ಹೊಳೆಯುತ್ತಿದ್ದ ತಮ್ಮ ಬ್ರಹ್ಮದಂಡವನ್ನು ಎತ್ತಿ ಹಿಡಿದು,-—'ಎಲ್ಲಿ, ನಿನ್ನ ಪೌರುಷ ಪ್ರತಾಪಗಳೆಲ್ಲಿ, ತೋರಿಸು' ಎಂದು ಹುಂಕರಿಸಿ ನಿಂತರು.

ಕೇವಲ ಪಶುಬಲದಿಂದ ಕೊಬ್ಬಿದ್ದ ರಾಜನಿಗೆ ಬ್ರಹ್ಮತೇಜದಿಂದ ವಿರಾಜಮಾನವಾದ ಆ ಬ್ರಹ್ಮದಂಡದ ಶಕ್ತಿಯೆಷ್ಟೆಂಬುದು ಹೇಗೆ ಗೋಚರವಾದೀತು! ಗಾಧಿಪುತ್ರನು ಒಡನೆ, ಮಹಾ ತೀಕ್ಷ್ಣವಾದ ಒಂದು ಬಾಣವನ್ನು ಧನುಸ್ಸಿನಲ್ಲಿ ಹೂಡಿ, ಪ್ರಳಯಕಾರಿಯಾದ ಆಗ್ನೇಯಾಸ್ತ್ರ ಮಂತ್ರದಿಂದ ಅದನ್ನು ಅಭಿಮಂತ್ರಿಸಿ ಪ್ರಯೋಗಿಸಲನುವಾದನು. ಅಷ್ಟರಲ್ಲಿ ವಸಿಷ್ಠರು—'ಎಲವೋ ಅವಿವೇಕಿಯೋ, ಏನೆಂದು ತಿಳಿದೆ! ನಿನ್ನ ಹುಲು ಕ್ಷತ್ರಿಯ ತೇಜಸ್ಸಿನಿಂದ ನಮ್ಮ ಬ್ರಹ್ಮತೇಜವನ್ನು ಎದುರಿಸಲು ಯತ್ನಿಸುವೆಯಾ? ಈಗೊಂದು ಕ್ಷಣಮಾತ್ರದಲ್ಲಿ ನಿನ್ನ ಪೌರುಷ ಪ್ರತಾಪಗಳ ಒರತೆಯನ್ನೇ ಬತ್ತಿಸುವೆನು ನೋಡು'' ಎಂದು ನುಡಿದು, ತಮ್ಮ ಕೈ

ಯಲ್ಲಿದ್ದ ದಂಡವನ್ನು ಒಂದಾವರ್ತಿ ಬೀಸಿದ ಮಾತ್ರದಲ್ಲೇ ಪ್ರಳಯಾಗ್ನಿಯಂತೆ ಜಾಜ್ವಲ್ಯಮಾನವಾಗಿದ್ದ ಆ ಆಗ್ನೇಯಾಸ್ತ್ರವು ನೀರಿನಿಂದ ಆರಿ ಶಾಂತವಾದ ಬೆಂಕಿಯಂತೆ, ತನ್ನ ಸ್ವಾಭಾವಿಕ ದಾಹಕ ಶಕ್ತಿಯನ್ನು ಕಳೆದು ಕೊಂಡು ಸ್ತಬ್ಧವಾಯಿತು. ತನ್ನಾ ಅಸ್ತ್ರವು ಹಾಗೆ ವಿಫಲವಾದುದು ಆತನಿಗೆ ಮತ್ತೂ ಛಲವನ್ನು ಹೆಚ್ಚಿಸಲು, ಆತನು, ಒಂದಾದ ಮೇಲೊಂದರಂತೆ, ವಾರುಣಾಸ್ತ್ರ, ಸರ್ಪಾಸ್ತ್ರ, ಪರ್ವತಾಸ್ತ್ರ, ವಜ್ರಾಸ್ತ್ರ, ರೌದ್ರಾಸ್ತ್ರ, ಪಾಶುಪತಾಸ್ತ್ರ ಮುಂತಾದುವುಗಳನ್ನು ಪ್ರಯೋಗಿಸಲಾರಂಭಿಸಿದನು. ಯಾವ ಒಂದೊಂದು ಅಸ್ತ್ರವೇ ಮೂರು ಲೋಕವನ್ನೂ ನಾಶಗೊಳಿಸಲು ಶಕ್ತವಾಗಿರುವುದೋ ಅಂತಹ ಅನೇಕಾಸ್ತ್ರಗಳನ್ನು ಪ್ರಯೋಗಿಸಿದರೂ, ವಸಿಷ್ಠರಾಗಲೀ, ಅವರ ಬ್ರಹ್ಮದಂಡವಾಗಲೀ ಲವಮಾತ್ರವೂ ಜಂಕಲಿಲ್ಲ. ಇದನ್ನು ಕಂಡ ಮೇಲಂತೂ ಗಾಧಿಪುತ್ರನ ರೋಷಕ್ಕೆ ಮೇರೆಯೇ ಉಳಿಯಲಿಲ್ಲ. ಪುನಃ ಮಾನವ, ಗಾಂಧರ್ವ, ಮೋಹನ, ಸ್ವಾಪನ, ಜೃಂಭಣ, ಮಾದನ, ಸಂತಾಪನ, ವಿಲಾಪನ, ಶೋಷಣ, ದಾರಣ, ವಜ್ರ, ಬ್ರಹ್ಮಪಾಶ, ಕಾಲಪಾಶ, ವರುಣಪಾಶ, ಪೈನಾಕಾಸ್ತ್ರ, ದಯಿತ, ದಂಡವೆಂಬಿವುಗಳನ್ನೂ ಧರ್ಮಚಕ್ರ, ಕಾಲಚಕ್ರ, ವಿಷ್ಣುಚಕ್ರಗಳೆಂಬ ಆಯುಧ ವಿಶೇಷಗಳನ್ನೂ, ವಾಯುವ್ಯ, ಮಥನ, ಹಯಗ್ರೀವಗಳೆಂಬ ಮೂರು ಅಸ್ತ್ರಗಳನ್ನೂ, ಶಕ್ತ್ಯಾಯುಧಗಳನ್ನೂ, ಕಂಕಾಳ ಮುಸಲಾಯುಧಗಳೆಂಬುವುಗಳನ್ನೂ, ವೈದ್ಯಾಧರ ಕಾಲಾಸ್ತ್ರಗಳೆಂಬ ಮಹಾ ಭಯಂಕರವಾದ ಮಹಾಸ್ತ್ರಗಳನ್ನೂ, ದಾರುಣ, ತ್ರಿಶೂಲ, ಘೋರ, ಕಾಪಾಲ, ಕಂಕಣಾದಿಗಳೆಂಬ ದಿವ್ಯಾಸ್ತ್ರಗಳನ್ನೂ, ಸಮಂತ್ರಕವಾಗಿ ಪ್ರಯೋಗಿಸಿದನು. ಆದರೇನು? ಆ ಎಲ್ಲವನ್ನೂ ವಸಿಷ್ಠರ ಬ್ರಹ್ಮದಂಡವು ನುಂಗಿ ನಿಂತಿತು. ಮಾನುಷ ಲೋಕಕ್ಕೇ ಅಪೂರ್ವವಾದ ಹಲವು ದಿವ್ಯಾಸ್ತ್ರಗಳು ಹೀಗೆ ವಿಫಲವಾದುದನ್ನು ಕಂಡು, ಗಾಧೇಯನು ಮಹಾ ರೋಷಾಕ್ರಾಂತನಾಗಿ,—'ವಸಿಷ್ಠನನ್ನು ಸುಟ್ಟುಬಿಡುವೆನು' ಎಂದು ಹುಂಕರಿಸಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲು ಉಜ್ಜುಗಿಸಿದನು. ಆತನ ಆ ಪ್ರಯತ್ನವನ್ನು ನೋಡಿ ಸಮಸ್ತ ದಿಗ್ದೇವತೆಗಳೂ, ಮಹರ್ಷಿಗಳೂ, ಗಂಧರ್ವ ಕಿನ್ನರಾದಿಗಳೂ ನಡನಡುಗಿದರು. ಮೂರು ಲೋಕವೂ ತಲ್ಲಣಿಸಿಹೋಯಿತು. ಆದರೇನು! ಧೀರೋತ್ತಮ

ರಾದ ವಸಿಷ್ಠರು, ಯಾವ ಬಗೆಯ ಚಿತ್ತವಿಕಾರಕ್ಕೂ ಒಳಪಡದೆ, ಎಂದಿನಂತೆಯೇ ಶಾಂತಮನಸ್ಕತೆಯಿಂದ ತಮ್ಮ ಉಜ್ವಲ ಬ್ರಹ್ಮದಂಡವನ್ನು ಎತ್ತಿ ಹಿಡಿದುಕೊಂಡು, ಅದಕ್ಕೆ ಅಭಿಮುಖರಾಗಿ ನಿಂತಿದ್ದರು.

ಕೌಶಿಕನಿಂದ ಸಮಂತ್ರಕವಾಗಿ ಬ್ರಹ್ಮಾಸ್ತ್ರವೂ ಪ್ರಯೋಗಿಸಲ್ಪಟ್ಟಿತು. ಅದರಿಂದಲೂ ಏನೂ ಪ್ರಯೋಜನವಾಗಲಿಲ್ಲ. ವಸಿಷ್ಠರ ಬ್ರಹ್ಮತೇಜದ ಮುಂದೆ ಅದರ ಆಟವೂ ನಡೆಯದೆ ಹೋಯಿತು. ಬ್ರಹ್ಮದಂಡವು ಅದನ್ನೂ ನುಂಗಿಬಿಟ್ಟಿತು. ಬ್ರಹ್ಮಾಸ್ತ್ರವು ಆ ದಂಡದಲ್ಲಿ ಐಕ್ಯವಾದೊಡನೆಯೇ ಇತ್ತ ವಸಿಷ್ಠರ ದೇಹವಾದ್ಯಂತವೂ ಭಯಂಕರವಾದ ಜ್ವಾಲಾಮಯವಾಗಿ ತೋರಸಾಗಿತು. ಅದನ್ನು ಕಂಡು ಸಮಸ್ತ ಋಷಿಗಳೂ ಮುನಿಗಳೂ ಅವರ ಮಹಿಮೆಯನ್ನು ಬಹು ಬಗೆಯಿಂದ ಕೊಂಡಾಡುತ್ತಾ, —'ಮಹಾತ್ಮರೇ, ಈ ತೇಜಸ್ಸನ್ನು ಲೋಕಕ್ಷೇಮಕ್ಕಾಗಿ ದಯೆಮಾಡಿ ತಮ್ಮಲ್ಲೇ ಅಡಗಿಸಿಕೊಳ್ಳಬೇಕು. ಗಾಧೇಯನು ವಿಶೇಷ ತಪಸ್ಸುಮಾಡಿ ಸಂಪಾದಿಸಿ ತಂದಿದ್ದ ಅಸ್ತ್ರಗಳೆಲ್ಲವನ್ನೂ, ನುಂಗಿದ ನಿಮ್ಮ ಬ್ರಹ್ಮತೇಜಸ್ಸು ಅದ್ವಿತೀಯವಾದುದು - ಅಗಾಧವಾದುದು. ಮಹಾತ್ಮರೇ ಪ್ರಸನ್ನರಾಗಿರಿ" ಎಂದು ಪ್ರಾರ್ಥಿಸಿಕೊಂಡರು. ವಸಿಷ್ಠರೂ ಬ್ರಹ್ಮದಂಡದಿಂದ ತಮ್ಮಲ್ಲುಂಟಾಗಿದ್ದ ಜ್ವಾಲಾಮಯ ತೇಜಸ್ಸನ್ನು ತಮ್ಮ ತಪಸ್ಸಾಮರ್ಥ್ಯದಿಂದ ಅಡಗಿಸಿಕೊಂಡರು. ಅಸ್ತ್ರರಾಜವಾದ ಬ್ರಹ್ಮಾಸ್ತ್ರವೂ ಹಾಗೆ ವಿಫಲವಾದುದು, ಗಾಧೇಯನನ್ನು ಕೇವಲ ಹತಾಶನನ್ನಾಗಿ ಮಾಡಿತು.—'ಛೀ ಇದೇನೀ ದುರವಸ್ಥೆಯು! ಮಹಾ ತೀಕ್ಷ್ಣಗಳಾದ ಅಸ್ತ್ರಶಸ್ತ್ರಗಳಿಗೂ ಇಂತಹ ಪರಾಜಯವೆ! ನಿಶ್ಶಸ್ತ್ರನಾದ ಒಬ್ಬ ಬ್ರಾಹ್ಮಣನ ತೇಜಸ್ಸಿನೆದುರಿಗೆ, ಈಶದತ್ತವಾದ ಈ ಮಹಾಸ್ತ್ರಗಳೂ ವಿಫಲವಾದಮೇಲೆ, ಇನ್ನೇ ಕ್ಷಾತ್ರತೇಜವನ್ನು ಸುಡಬೇಡವೆ! ಧಿಕ್ಕಾರವಿರಲಿ ಈ ಕ್ಷತ್ರಿಯ ತೇಜಸ್ಸಿಗೆ; ತೇಜಸ್ಸೆಂದರೆ ಬ್ರಹ್ಮತೇಜಸ್ಸೇ! ಬಲವೆಂದರೆ ಬ್ರಹ್ಮಬಲವೇ! ಸಾಕು, ಮನಸ್ಸು ಬುದ್ಧಿ ಇಂದ್ರಿಯಾದಿಗಳನ್ನು ಕೆಡಿಸಿ, ಕರ್ತವ್ಯಮೂಢನನ್ನಾಗಿಸುವ ಈ ಕ್ಷಾತ್ರ ಸ್ವಭಾವವು ಇನ್ನು ನಾಶವಾಗಲಿ; ಬ್ರಾಹ್ಮಣ್ಯ ಸಾಧನೆಗೆ ಕಾರಣವಾದ ತಪಸ್ಸನ್ನು ಮಾಡಿ, ಇನ್ನು ಅದನ್ನು ಸಂಪಾದಿಸುವುದೇ ನನ್ನ

ಜನ್ಮಧ್ಯೇಯುವಾಗಿರಲಿ!” ಎಂದು ತ್ರಿಕರಣಪೂರ್ವಕವಾಗಿ ಸಂಕಲ್ಪ ಮಾಡಿದನು.

ವಸಿಷ್ಠರನ್ನು ಜಯಿಸಬೇಕೆಂಬ ಇಚ್ಛೆಯೂ, ಅವರ ಹೋಮಧೇನುವನ್ನು ಸ್ವಾಧೀನಗೊಳಿಸಿಕೊಳ್ಳಬೇಕೆಂಬ ಅಪೇಕ್ಷೆಯೂ, ಆತನಿಂದ ತೊಲಗಿ ಹೋದುವು. ರಾಜ್ಯದ ವಿಚಾರವು ಆತನ ಸಮೀಪಕ್ಕೇ ಬರದಾಯಿತು. ಈಗ ಆತನ ಮನಸ್ಸೆಲ್ಲವೂ, ಕ್ಷಾತ್ರತೇಜಸ್ಸಿಗಿಂತಲೂ ಶತಾಧಿಕ - ಸಹಸ್ರಾಧಿಕ ತೇಜಸ್ಸಂಪನ್ನವಾದ ಬ್ರಹ್ಮತೇಜಸ್ಸನ್ನು ಗಳಿಸಬೇಕು - ಎಂಬುದರ ಮೇಲೆಯೇ ಕೇಂದ್ರೀಕೃತವಾಗಿರುವುದು. ಎಂತಹ ಕಷ್ಟವಾದರೂ ಪ್ರಾಪ್ತವಾಗಲಿ - ಪ್ರಾಣಾಪಾಯವೊದಗಲಿ, ಕೊನೆಗೆ ಅದರಲ್ಲೇ ದೇಹಪಾತವಾಗಿ ಹೋಗಲಿ-ಎಂತೂ ಬ್ರಾಹ್ಮಣ್ಯ ಸಾಧನೆಗಾಗಿ ಪ್ರಯತ್ನಿಸತಕ್ಕದೇ ಸರಿ! ಎಂದು ನಿರ್ಧರ ಮಾಡಿಕೊಂಡು, ಪತ್ನಿಯೊಡಗೂಡಿ, ದಕ್ಷಿಣ ದಿಕ್ಕಿಗೆ ಅಭಿಮುಖವಾಗಿ ಪ್ರಯಾಣಮಾಡಿ, ಅಲ್ಲಿ ತಪೋನಿರತನಾದನು. ಶ್ವಾಸಧಾರಣೆ ಮಾಡಿ ಅನೇಕ ಕಾಲ ಏಕನಿಷ್ಠೆಯಿಂದ ತಪಸ್ಸನ್ನಾಚರಿಸಿದನು. ಈ ಕಾಲದಲ್ಲೇ ಆತನಿಗೆ ಹವಿಷ್ಯಂದ, ಮಧುಷ್ಯಂದ, ದೃಢನೇತ್ರರೆಂಬ, ಸತ್ಯವಂತರೂ ಧಾರ್ಮಿಕರೂ ಮಹಾ ಪರಾಕ್ರಮಶಾಲಿಗಳೂ ಆದ ಮೂವರು ಪುತ್ರರು ಜನಿಸಿದರು. ದೇಹಾಭಿಮಾನವನ್ನು ಮರೆತು ಮಾಡುತ್ತಿದ್ದ ಈ ತಪಸ್ಸಿನಲ್ಲೇ ಸಹಸ್ರ ವರ್ಷಗಳು ಕಳೆದುವಂತೆ! ಆಗ ಸರ್ವಲೋಕ ಪಿತಾಮಹನಾದ ಬ್ರಹ್ಮದೇವನು, ಸಕಲ ದೇವತೆಗಳೊಂದಿಗೂ ಪ್ರತ್ಯಕ್ಷನಾಗಿ ಬಂದು—‘ಎಲೈ ಕೌಶಿಕನೇ, ನಿನ್ನೀ ಮಹಾ ತಪಸ್ಸಿನಿಂದ ನೀನು ರಾಜರ್ಷಿಗಳೆಲ್ಲರಿಗೂ ಶ್ರೇಷ್ಠನಾಗಿರುವೆ! ಇನ್ನು ಲೋಕದಲ್ಲಿ ಎಲ್ಲರೂ ನಿನ್ನನ್ನು ರಾಜರ್ಷಿಯೆಂದೇ ಗೌರವಿಸುವರು’ ಎಂದು ನುಡಿದು, ಉತ್ತರಕ್ಷಣದಲ್ಲೇ ಎಲ್ಲಾ ದೇವತೆಗಳೊಂದಿಗೂ ಅದೃಶ್ಯನಾಗಿ ಹೊರಟು ಹೋದನು.

ಬ್ರಹ್ಮದೇವನಾಡಿದ ಆ ಮಾತಿನಿಂದ ಗಾಧೇಯನಿಗೆ ಸಂತೋಷವುಂಟಾಗದಿದ್ದುದಂತಿರಲಿ; ಅತಿಶಯ ಲಜ್ಜೆಯುಂಟಾಯಿತು-‘ನನ್ನ ಇಷ್ಟು ಕಾಲದ ತಪಸ್ಸಿಗೆ ಫಲವು ಇದೇಯೋ!’ ಎಂದುಕೊಂಡನು. ಆದರೂ ಇದು ಆಗದ ಕಾರ್ಯವೆಂದು ಆ ಪ್ರಯತ್ನವನ್ನು ಬಿಡುವ ಯೋಚನೆ ಮಾಡಲಿಲ್ಲ. ಇಂ

ತಹ ನಿರುತ್ಸಾಹ ಕಾರಣವು ಒದಗಿದರೂ ಆತನು ಹತಾಶನಾಗಲಿಲ್ಲ. ಮುಂದೆ ಅದಕ್ಕಿಂತಲೂ ಘೋರವಾದ ತಪಸ್ಸನ್ನು ಮಾಡಿ ತನ್ನ ಇಷ್ಟೆಯನ್ನು ಪೂರ್ಣಮಾಡಿಕೊಳ್ಳಬೇಕೆಂದು, ಪುನಃ ತಪೋನಿರತನಾದನು.

ಗಾಧಿವಂಶ ಸಂಭೂತನಾಗಿ ವೀರಕ್ಷತ್ರಿಯನೆಂದು ಪ್ರಖ್ಯಾತನಾಗಿದ್ದ ಕೌಶಿಕ ಮಹಾರಾಜನು, ಕೇವಲ ಕಾನನ ವಾಸಿಗಳಾದ ಮುನಿಜನರಿಗೆ ಸಹಜವಾದ ಕಷ್ಟ ಜೀವಿತವನ್ನು ಸಹಿಸಿ ಅಗಾಧ ತಪಸ್ಸುಮಾಡಿ, ರಾಜರ್ಷಿ ಎಂಬ ಬಿರುದಿಗೆ ಪಾತ್ರನಾದನಷ್ಟೆ! ಮುಂದೆ ರಾಜನಾಗದಿರುವ ಆತನಿಗೆ ಪೂರ್ವದ ನಾಮವೂ ತಕ್ಕುದಾಗಿ ಶೋಭಿಸದು. ಲೋಕಕ್ಕೆ ಉಜ್ವಲವಾದ ಆದರ್ಶವನ್ನಿಟ್ಟು, ವಿಶ್ವಕ್ಕೇ ಪರಮಮಿತ್ರನಾಗಿರುವ ಈ ಮಹಾಪುರುಷನನ್ನು 'ವಿಶ್ವಾಮಿತ್ರ' ಎಂಬ ಪವಿತ್ರನಾಮದಿಂದ ಸಂಬೋಧಿಸುವುದೇ ಯುಕ್ತವಾಗಿರುವುದರಿಂದ, ಇನ್ನು ಮುಂದೆ ಆತನನ್ನು ವಿಶ್ವಾಮಿತ್ರರೆಂಬ ಸಾರ್ಥಕ ನಾಮದಿಂದಲೇ ಕರೆಯುತ್ತಾ ಹೋಗುತ್ತೇವೆ. ರಾಜರ್ಷಿ ವಿಶ್ವಾಮಿತ್ರರು, ರಾಜಕುಲದಲ್ಲಿ ಹೇಗೋ ಋಷಿಕುಲದಲ್ಲೂ ಹಾಗೆಯೇ ಅದ್ವಿತೀಯರಾಗಿಯೇ ಶೋಭಿಸಿದರು.



## ಅಧ್ಯಾಯ ೪ — "ತ್ರಿಶಂಕುಸ್ವರ್ಗ"

ರಾಜರ್ಷಿ ವಿಶ್ವಾಮಿತ್ರರು ಇತ್ತ ಬ್ರಾಹ್ಮಣ್ಯ ಸಾಧನೆಗಾಗಿ ಕೃತನಿಶ್ಚಿತರಾಗಿ ಅಗಾಧ ತಪೋನಿರತರಾಗಿ ಕುಳಿತಿದ್ದ ಕಾಲದಲ್ಲೇ ಅತ್ತ, ಅಯೋಧ್ಯಾರಾಜಧಾನಿಯಲ್ಲಿದ್ದ ಇಕ್ಷ್ವಾಕು ವಂಶಜನಾದ ತ್ರಿಶಂಕುವೆಂಬ ರಾಜನು ಈ ಶರೀರದೊಂದಿಗೇ ಸ್ವರ್ಗಕ್ಕೆ ಏರಬೇಕೆಂದು ಇಚ್ಛಿಸಿದನು. ಹೀಗೆ ಸಶರೀರ ಸ್ವರ್ಗಪ್ರಾಪ್ತಿ ಮಾಡಿಕೊಳ್ಳಬೇಕೆಂಬ ಇಷ್ಟೆಯು ಉದಯಿಸಿದೊಡನೆಯೇ ಆತನು, ತನ್ನ ಕುಲಗುರುಗಳಾದ ವಸಿಷ್ಠರಲ್ಲಿಗೆ ನಡೆದು, ತನ್ನ ಮನೋವಾಂಛಿತವನ್ನು ಅರುಹಿ, ಅದರ ಸಾಧನೆಗೆ ಅವಶ್ಯಕವಾದ ಯಾಗ ಮಾಡಿಸಬೇಕೆಂದು ಅವರನ್ನು ಪ್ರಾರ್ಥಿಸಿದನು. ವಸಿಷ್ಠರಿಗೆ ಪರಮಾಶ್ಚರ್ಯ

ವಾಯಿತು.-'ಇದೇನಿದು ? ಕೆಲವು ದಿನಗಳ ಹಿಂದೆ ಗಾಧೇಯನು ಬ್ರಾಹ್ಮಣ್ಯಬೇಕೆಂದು ಅಪೇಕ್ಷಿಸಿ, ಇಂದು ಲೋಕಭೀಕರವಾದ ತಪಸ್ಸಿನಲ್ಲಿ ನಿರತನಾಗಿರುವನು. ಈಗ ಈ ರಾಜನಾದರೋ, ಸಶರೀರ ಸ್ವರ್ಗಪ್ರಾಪ್ತಿಯನ್ನು ಅಪೇಕ್ಷಿಸುತ್ತಿದ್ದಾನೆ ! ಇದೇಕೆ, ಕ್ಷತ್ರಿಯ ಕುಲವು ಹೀಗೆ ಅಸಂತುಷ್ಟವಾಗಿ ತಮ್ಮ ಕುಲಧರ್ಮಕ್ಕೆ ವಿರುದ್ಧವಾದ ಕಾರ್ಯಗಳನ್ನೇ ಆಚರಿಸಲು ಯತ್ನಿಸುತ್ತಿದೆ? ಇದೇನು ಕಾಲಗತಿಯೋ!" ಎಂದುಕೊಂಡರು. ಹಾಗೆ ಯೋಚಿಸಿದ ವಸಿಷ್ಠರು ಪಾದಾಕ್ರಾಂತನಾಗಿದ್ದ ತ್ರಿಶಂಕುವನ್ನು ನೋಡಿ —'ರಾಜನೇ ನೀನೆಂದರೇನು, ಸ್ವರ್ಗವೆಂದರೇನು, ಅಲ್ಲಿಗೆ ಸ್ವಶರೀರದಿಂದಲೇ ಏರುವುದೆಂದರೇನು ? ಇದು ಅಸಾಧ್ಯ ಕಾರ್ಯವು. ಅದಕ್ಕಾಗಿ ಏಕೆ ಶ್ರಮಪಡುವೆ! ಬೇಡ. ನಿನಗದು ಲಭ್ಯವಾಗದು. ಸುಮ್ಮನಿರು" ಎಂದು ಹೇಳಿದರು.

ಗುರುಗಳಿಂದ ಹೀಗೆ ತಿರಸ್ಕೃತನಾದರೂ, ತ್ರಿಶಂಕುವಿಗೆ ಆ ಅಪೇಕ್ಷೆಯು ಕುಂಠಿತವಾಗಲಿಲ್ಲ. ಅವರ ಆಶ್ರಮದಿಂದ ಹೊರಟು, ಅವರ ನೂರು ಮಂದಿ ಪುತ್ರರೂ ತಪಸ್ಸು ಮಾಡಿಕೊಂಡಿದ್ದ ಮತ್ತೊಂದಾಶ್ರಮಕ್ಕೆ ಬಂದನು. ಶ್ರದ್ಧಾಳುವೂ ಗುರುಭಕ್ತನೂ ಆದ ಆ ರಾಜನು, ಆ ನೂರ್ವರು ಗುರುಪುತ್ರರಿಗೂ ಸಾಷ್ಟಾಂಗಪ್ರಣಾಮಮಾಡಿ,—'ಪೂಜ್ಯರೇ, ನಾನೊಂದು ಕಾರ್ಯಕ್ಕಾಗಿ ಪ್ರಯತ್ನಿಸಿ, ನಮ್ಮ ಕುಲಗುರುಗಳೂ ತಮ್ಮ ಪಿತೃವರ್ಯರೂ ಆದ ವಸಿಷ್ಠರ ಬಳಿಗೆ ಹೋಗಿ ಪ್ರಾರ್ಥಿಸಿದೆ. ಆದರೆ ಅವರು ನನ್ನನ್ನು ತಿರಸ್ಕರಿಸಿದರು. ಆದುದರಿಂದ ಉಪಾಯಾಂತರ ತೋರದೆ ತಮ್ಮಲ್ಲಿಗೆ ಬಂದಿದ್ದೇನೆ. ಸೂರ್ಯ ವಂಶದವರ ಕುಲ ಪೌರೋಹಿತ್ಯವು ತಮ್ಮ ಕಡೆಗಿರುವುದರಿಂದ, ತಮ್ಮ ತಂದೆಯುವರು ಮಾಡಿಸದಿರುವ ಆ ಕಾರ್ಯವನ್ನು ಅವರ ಪರವಾಗಿ ತಾವಲ್ಲವೆ ಮಾಡಿಸಬೇಕು ! ನಾನು ಸಶರೀರ ಸ್ವರ್ಗಪ್ರಾಪ್ತಿಗಾಗಿ ಅಪೇಕ್ಷಿಸಿ ಒಂದು ಮಹಾಯಾಗ ಮಾಡಬೇಕೆಂದಿರುವೆನು. ನನ್ನ ಪೂಜ್ಯ ಗುರುಪುತ್ರರೂ, ತಪೋಧನರೂ, ಬ್ರಾಹ್ಮಣೋತ್ತಮರೂ ಆದ ತಾವು, ಆ ಯಾಗವನ್ನು ಸಾಂಗವಾಗಿ ನೆರವೇರಿಸಿ ಕೊಟ್ಟು ನನ್ನನ್ನು ಉದರಿಸಬೇಕು" ಎಂದು ಸಾಷ್ಟಾಂಗ ನಮಸ್ಕಾರ ಪೂರ್ವಕ ಪ್ರಾರ್ಥಿಸಿದನು.

ತ್ರಿಶಂಕುರಾಜನ ಪ್ರಾರ್ಥನೆಯು ಅವರಿಗೂ ಸೂಕ್ತವಾದುದೆಂದು ತೋರಲಿಲ್ಲ. ಅವರು—'ಎಲೈ ಮಂದಬುದ್ಧಿಯಾದ ರಾಜನೇ, ಈ ಅಸಾಧ್ಯ ಕಾರ್ಯಕ್ಕೆ ಪ್ರಯತ್ನಿಸುವ ಅವಿವೇಕವು ನಿನಗೇಕೆ ಪ್ರಾಪ್ತವಾಯಿತು? ಅಲ್ಲದೆ ಮಹಾ ತಪೋನಿಧಿಗಳೂ, ಬ್ರಹ್ಮರ್ಷಿ ಶ್ರೇಷ್ಠರೂ, ವಂಶಪಾರಂಪರ್ಯವಾಗಿ ನಿನ್ನ ಕುಲಗುರುಗಳೂ ಆದ ನಮ್ಮ ಪೂಜ್ಯ ತೀರ್ಥರೂಪರು ಅಸಾಧ್ಯವೆಂದು ಹೇಳಿದ ಆ ಯಾಗವನ್ನು ನಾವು ತಾನೆ ಹೇಗೆ ಮಾಡಿಸಬಲ್ಲೆವು! ಅವರೇ ಮಾಡಿಸಲಾಗದಿದ್ದ ಯಾಗವನ್ನು ನಾವು ಮಾಡಿಸಿ ಅವರನ್ನು ಅಪಮಾನಪಡಿಸತಕ್ಕುದು ಸಾಧ್ಯವೇ! ಹೋಗು ಹೋಗು. ನಿನ್ನ ಈಗಿನ ಸ್ಥಿತಿಯಲ್ಲೇ ತೃಪ್ತನಾಗಿ, ರಾಜ್ಯಪಾಲನೆಯಲ್ಲಿ ನಿರತನಾಗಿ ಸ್ವಸ್ಥನಾಗಿರು'' ಎಂದು ಹೇಳಿಬಿಟ್ಟರು. ಗುರುಪುತ್ರರಾಡಿದ ಆ ಮಾತು ರಾಜನಿಗೆ ಸಮಾಧಾನವನ್ನುಂಟುಮಾಡಲಿಲ್ಲ—'ಪೂಜ್ಯರೇ, ನನ್ನ ಕುಲಗುರುವು ತಿರಸ್ಕರಿಸಿದರೆಂದು ಅವರ ಪುತ್ರರಾದ ನಿಮ್ಮಲ್ಲಿಗೆ ಬಂದೆನು. ಆದರೆ ಇಲ್ಲಿ ನೀವೂ ಹೀಗೆ ತಿರಸ್ಕರಿಸಿದಿರಿ. ಆಗಲಿ; ಮತ್ತೆಲ್ಲಿಗಾದರೂ ಹೋಗಿ, ಎಂತೂ ನನ್ನ ಕಾರ್ಯವನ್ನು ಸಾಧಿಸಿಕೊಳ್ಳದೆ ಇರೆನು. ನೀವು ಸುಖವಾಗಿರಿ' ಎಂದು ನುಡಿದನು. ರಾಜನ ಈ ಮಾತು ಮರ್ಮಭೇದಕವಾಗಿ ಅವರ ಮನಸ್ಸನ್ನು ನೋಯಿಸಿತು. ಒಡನೆ ಆ ಮುನಿಪುತ್ರರು ಕೋಪಾಕ್ರಾಂತರಾಗಿ—'ಎಲಾ ಕ್ಷತ್ರಿಯಾಧಮ. ಏನೆಂದು ಬೊಗಳುತ್ತಿರುವೆ! ಗುರುದ್ರೋಹಕರವಾದ ಈ ನಿನ್ನ ಉದ್ಧಟತನದ ಫಲವಾಗಿ - ಹೋಗು ಚಂಡಾಲನಾಗಿ ಹೋಗು' ಎಂದು ಶಾಪವಿತ್ತು, ಆತನ ಮೇಲೆ ಶಾಪ ಜಲವನ್ನೆರೆಚಿ ಆಶ್ರಮದೊಳಕ್ಕೆ ಹೊರಟುಹೋದರು. ಅವರ ತಪಸ್ಸಾಮರ್ಥ್ಯವೆನ್ನೆಂಥಾದ್ದೋ! ಉತ್ತರಕ್ಷಣದಲ್ಲೇ, ತ್ರಿಶಂಕುವಿನ ದೇಹವಾದ್ಯಂತವೂ ಅಂಗಾರವರ್ಣಕ್ಕೆ ತಿರುಗಿ, ಆತನ ರಾಜತೇಜವು ನಿರ್ಮೂಲವಾಯಿತು. ಆ ದಿನ ರಾತ್ರಿ ಕಳೆದು ಬೆಳಗಾಗುವುದರೊಳಗಾಗಿ ಆತನು ಧರಿಸಿದ ಅಮೌಲ್ಯ ಪಟ್ಟುವಸ್ತ್ರಗಳೆಲ್ಲವೂ, ಮಸೀಮಯವಾಗಿ ಒರಟಾಗಿ ಅಸಹ್ಯಕರವಾದ ಕಂಪಿನಿಂದ ನಾರತೊಡಗಿದುವು. ಧರಿಸಿದ ವಜ್ರವೈಢೂರ್ಯಮಯವಾದ ಸುವರ್ಣಾಭರಣಗಳು ಉಕ್ಕಿನಿಂದ ಮಾಡಲ್ಪಟ್ಟುವುಗಳೋ ಎಂಬಂತೆ ಕಪ್ಪಾದುವು. ಆತನ ತಲೆಯ ಕೂದಲುಗಳು ಉದುರಿದುವು. ದೇಹಚರ್ಮವು

ಒರಟಾಗಿ, ಮನೋಹರವಾಗಿದ್ದ ತ್ರಿಶಂಕುವು ಭಯಂಕರ ಸ್ವರೂಪಿಯಾದನು. ಆತನನ್ನು ಕಂಡ ಮಂತ್ರಿಸಾಮಂತರೂ, ಪರಿಜನಪುರಜನರೂ ರಾಣೀವಾಸದ ನಾರಿಯರೂ ಭಯಪಟ್ಟು, ಸಮೀಪ ಸೇರಲು ಅಸಹ್ಯಗೊಂಡು ತಿರಸ್ಕರಿಸಿ ಹೊರಟುಹೋದರು. ಅಕಸ್ಮಾತ್ತಾಗಿ ಪ್ರಾಪ್ತವಾದ ಈ ಪರಿಸ್ಥಿತಿಯನ್ನು ನೋಡಿ ತ್ರಿಶಂಕುವು ಪ್ರಾರಂಭಕ್ಕೆ ಅಪ್ರತಿಭನಾದರೂ, ತನಗೆ ತಾನೇ ಸಮಾಧಾನ ಹೇಳಿಕೊಂಡು ಕ್ರಮಕ್ರಮವಾಗಿ ಧೈರ್ಯತಂದುಕೊಂಡನು. ಮನಸ್ಸಿನಲ್ಲಿ ಗಳಿಗೆಗಳಿಗೆಗೆ ಛಲವೇರಿತು. ತನ್ನನ್ನು ಆ ದುರ್ಗತಿಗೆ ತಂದ ಅವರ ಮುಖಕ್ಕೆ ಮಸಿಯನ್ನಿಟ್ಟಂತೆ ಹೇಗಾದರೂ ಆ ಕಾರ್ಯವನ್ನು ಸಾಧಿಸಿಯೇ ತೀರಬೇಕೆಂದು ಹಟತೊಟ್ಟು ತನಗೆ ಯಾರು ಒತ್ತಾಸೆಯಾಗಬಹುದೆಂದು ಯೋಚಿಸಿದನು. ಒಡನೆ, ರಾಜರ್ಷಿ ವಿಶ್ವಾಮಿತ್ರರು, ವಸಿಷ್ಠರ ಮೇಲಿನ ದ್ವೇಷಸಾಧನೆಯ ಉದ್ದೇಶದಿಂದಲೇ ತಪೋನಿರತರಾಗಿರುವರು, ಎಂಬ ಸಂಗತಿಯು ಜ್ಞಾಪಕಕ್ಕೆ ಬಂದಿತು. ಕೂಡಲೆ ಅವರಿದ್ದ ಸ್ಥಳವನ್ನು ಹುಡುಕಿಕೊಂಡು ಹೊರಟು, ಆ ಉಗ್ರ ತಪಸ್ವಿಯನ್ನು ಕಂಡನು.

ಮಹಾ ಪ್ರತಿಭಾವಂತವಾದ ಸೂರ್ಯವಂಶದಲ್ಲಿ ಉದ್ಭವಿಸಿದ ತ್ರಿಶಂಕು ಮಹಾರಾಜನು ಪರಮ ನೀಚವಾದ ಚಾಂಡಾಲ ರೂಪದಿಂದ ಎದುರಿಗೆ ನಿಂತಿದ್ದುದನ್ನು ಕಂಡು, ವಿಶ್ವಾಮಿತ್ರರು—'ಎಲೈ ರಾಜನೇ, ನಿನಗೆ ಈ ದುರ್ಗತಿಯುಂಟಾಗಲು ಕಾರಣವೇನು ? ಚಂಡಾಲತ್ವ ಪ್ರಾಪ್ತವಾದುದೇಕೆ ? ನೀನು ನನ್ನ ಬಳಿಗೆ ಬಂದ ಉದ್ದೇಶವೇನು ? " ಎಂದು ಕೇಳಿದರು. ಜಗ ದುರ್ದೈವಿ ತ್ರಿಶಂಕುವು, ತನ್ನ ಸ್ಥಿತಿಗಾಗಿ ಮರುಗಿ ನಿಟ್ಟುಸಿರು ಬಿಡುತ್ತಾ—'ಮಹಾತ್ಮರೇ, ನೂರಾರು ಯಾಗಗಳನ್ನೂ ಹಲವು ಪುಣ್ಯಕರ್ಮಗಳನ್ನೂ ಮಾಡಿದ ನನಗೆ ಈ ಶರೀರದೊಂದಿಗೇ ಸ್ವರ್ಗಕ್ಕೆ ಹೋಗಬೇಕೆಂಬ ಅಪೇಕ್ಷೆಯುಂಟಾಯಿತು. ಅದಕ್ಕೆ ಸಾಧನವಾದ ಒಂದು ಯಾಗ ಮಾಡಿಸಿರೆಂದು ನನ್ನ ಕುಲಗುರುವಾದ ವಸಿಷ್ಠರನ್ನು ಪ್ರಾರ್ಥಿಸಿದೆ. ಅವರು ಅದು ಸಾಧ್ಯವಾಗದ ಕಾರ್ಯವೆಂದರು. ತರುವಾಯ ಉಪಾಯ ರಹಿತನಾಗಿ, ಅವರ ಪುತ್ರರಲ್ಲಿಗೆ ಹೋಗಿ ಅವರನ್ನೂ ಹಾಗೆಯೇ ಪ್ರಾರ್ಥಿಸಿ

ಮಾಡಿಸಲಾರೆವೆಂದು ಹೇಳಿ ತಿರಸ್ಕರಿಸಿಬಿಟ್ಟರು. ಮಾತ್ರವಲ್ಲ - ಚಂಡಾಲನಾಗೆಂದು ಘೋರ ಶಾಪವನ್ನೂ ಕೊಟ್ಟರು. ಇದೀಗ ನನ್ನ ಸ್ಥಿತಿ, ಪೂಜ್ಯರೇ, ಈ ನನ್ನ ದುಸ್ಥಿತಿಯಲ್ಲಿ ಮುಂದೆ ಮಾರ್ಗ ಕಾಣದೆ, ಮಹಾತ್ಮರಾದ ತಮಗ್ಗೆ ಶರಣಾಗತನಾಗಿದ್ದೇನೆ. ನನ್ನನ್ನುದ್ಧರಿಸಿ ಧರ್ಮವಿರೋಧವಲ್ಲದ ನನ್ನಾ ಬಯಕೆಯನ್ನು ಈಡೇರಿಸಿ ಕೊಡತಕ್ಕ ಸಮರ್ಥರು ತಾವೇ ಎಂದು ನಂಬಿದ್ದೇನೆ. ನಾನು ಮತ್ತಾವ ಪಾಪಕರ್ಮಗಳನ್ನೂ ಮಾಡಿದವನಲ್ಲ. ಸುಳ್ಳಾಡಿದವನಲ್ಲ. ಧರ್ಮಮಾರ್ಗದಿಂದ ಪ್ರಜಾಪಾಲನೆ ಮಾಡಿಕೊಂಡು, ಸದಾಚಾರಶೀಲನಾಗಿದ್ದ ನನಗೆ ಇಂತಹ ದುರ್ಗತಿಯೊದಗಿತು. ಮಾಡತಕ್ಕುದೇನು ? ಮುಖ್ಯ ಮನುಷ್ಯ ಪ್ರಯತ್ನವು ಎಷ್ಟು ಪ್ರಬಲವಾಗಿದ್ದರೂ ಅದು ದೈವ ಬಲವಿಲ್ಲದೆ, ಫಲಕಾರಿಯಾಗಲಾರದೆಂಬುದು ಸ್ಪಷ್ಟವಾಯಿತು. ಅದೃಷ್ಟ ಬಲವಿಹೀನನಾದ ನನಗೆ ಕಾರ್ಯದಲ್ಲಿ ಜಯವೂ ಯಶಸ್ಸೂ ಹೇಗೆ ಸಿದ್ಧಿಸುವುವು! ಮಹಾತ್ಮರೇ, ಹೀಗೆ ದೈವಹತಕನಾದ ನನ್ನನ್ನು ತಮ್ಮ ಅನುಗ್ರಹವೆಂಬ ಪುರುಷಕಾರದಿಂದ ಉದ್ಧರಿಸಬೇಕು. ತಮ್ಮ ಹೊರತು ನನಗೆ ಅನ್ಯಥಾ ಗತಿಯಿಲ್ಲ' ಎಂದು ಪುನಃ ಪಾದಕ್ಕೆರಗಿದನು.

ಹೀಗೆ ದೀನತೆಯಿಂದ ಪ್ರಾರ್ಥಿಸುತ್ತಿದ್ದ ಚಂಡಾಲ ರೂಪಧಾರಿಯಾದ ಆ ತ್ರಿಶಂಕು ರಾಜನ ದುರ್ದಸೆಯನ್ನು ಕಂಡು ಮಹಾ ದಯಾಳುವಾದ ವಿಶ್ವಾಮಿತ್ರರ ಮೃದುಹೃದಯವು ಕರಗಿ ನೀರಾಯಿತು.—ಮಹಾರಾಜಾ, ಇಕ್ಷ್ವಾಕು ಕುಲಶ್ರೇಷ್ಠ, ಭಯಪಡಬೇಡ. ನೀನು ಪರಮ ಧಾರ್ಮಿಕನೆಂದು ನಾನು ಬಲ್ಲೆನು. ಇನ್ನು ವ್ಯಥೆಯನ್ನು ಬಿಡು. ಶರಣಾಗತ ರಕ್ಷಣೆಯಲ್ಲಿ ಸಮರ್ಥನಾದ ಈ ವಿಶ್ವಾಮಿತ್ರನನ್ನು ಮರೆಹೊಕ್ಕ ಮೇಲೆ ನಿನ್ನ ಕಾರ್ಯವು ಸಿದ್ಧಿಯಾಯಿತೆಂದೇ ತಿಳಿ. ವಸಿಷ್ಠರೂ - ಅವರ ಪುತ್ರರೂ ಅಸೂಯೆಯಿಂದ - ನಿನ್ನಿಂದ ಯಾವ ಯಜ್ಞವು ಅಸಾಧ್ಯವೆಂದು ನುಡಿದರೋ ಅದೇ ಯಜ್ಞವನ್ನೇ ನಿನ್ನಿಂದ ಮಾಡಿಸಿ ನಿನ್ನ ಇಚ್ಛೆಯಂತೆಯೇ ಸಶರೀರವಾಗಿ ಸ್ವರ್ಗಕ್ಕೇರಿಸುವೆನು. ನನ್ನ ತಪಸ್ಸಾಮರ್ಥ್ಯವನ್ನಾದರೂ ನೋಡು ! ನಿನ್ನೀ ಯಾಗದಲ್ಲಿ ಸಹಕಾರಿಗಳಾಗಿರಲು ವೇದವಿದರಾದ ಸಮಸ್ತ ಮುನಿಗಳನ್ನೂ ಈಗಲೇ ಕರೆಸುವೆನು' ಎಂದು ನುಡಿದು, ಒಡನೆ ಸಮರ್ಥ

ರಾದ ತಮ್ಮ ಮಕ್ಕಳನ್ನು ಕರೆದು ಸಕಲ ಯಜ್ಞ ಸಾಮಗ್ರಿಗಳನ್ನೂ ಸಿದ್ಧಪಡಿಸಿರೆಂದು ಆಜ್ಞಾಪಿಸಿದರು. ಅಲ್ಲದೆ, ತಮ್ಮ ಶಿಷ್ಯರನ್ನು ಕರೆದು,—ಎಲೈ ಬಾಲಕರೇ, ನೀವು ಈಗಲೇ ಹೋಗಿ ಸಮಸ್ತ ಋಷಿಗಳನ್ನೂ ಯಾಗಕ್ಕೆ ಬರಬೇಕೆಂದು ಕರೆದು ಬನ್ನಿರಿ. ಮಾತ್ರವಲ್ಲ - ಆ ಋಷಿಗಳೆಲ್ಲರೂ ತಮ್ಮ ಆಶ್ರಮಗಳಲ್ಲಿರುವ ಸಮಸ್ತ ಮುನಿಗಳನ್ನೂ - ಋತ್ವಿಕ್ಕುಗಳನ್ನೂ ವಿದ್ವಾಂಸರನ್ನೂ ಕರೆದುಕೊಂಡು ಬರುವ ಹಾಗೆ ವಿಜ್ಞಾಪಿಸಿರಿ. ನೀವು ಹಾಗೆ ಕರೆಯುವಾಗ, ಅವರಲ್ಲಿ ಯಾರಾದರೂ ಆ ನನ್ನ ವಾಕ್ಯವನ್ನು ಅನಾದರಣೆ ಮಾಡಿ, ತಿರಸ್ಕಾರವಾಗಿ ಏನಾದರೂ ಹೇಳಿದ ಪಕ್ಷದಲ್ಲಿ ಆ ಸಂಗತಿಯನ್ನು ತಪ್ಪದೆ ನನಗೆ ತಿಳಿಸತಕ್ಕದ್ದು. ಇನ್ನು ಹೊರಡಿರಿ, ಸಾವಕಾಶ ಮಾಡಬೇಡಿ' ಎಂದು ಅವರನ್ನು ಕಳುಹಿಸಿ, ಆ ಅಪೂರ್ವ ಯಾಗಕ್ಕಾಗಿ ಸರ್ವಸಿದ್ಧತೆಗಳನ್ನೂ ಮಾಡಿಕೊಳ್ಳತೊಡಗಿದರು.

ತಮ್ಮ ಗುರುವರ್ಯರ ಆಜ್ಞೆಯನ್ನು ಕೇಳಿದ ಆ ಶಿಷ್ಯರು ಲೇಶಮಾತ್ರವೂ ಸಾವಕಾಶ ಮಾಡದೆ ಹೊರಟು, ಎಲ್ಲಾ ಋಷ್ಯಾಶ್ರಮಗಳನ್ನೂ ಸುತ್ತಿ ಸಕಲರನ್ನೂ ಆಹ್ವಾನಿಸಿದರು. ಸಶರೀರ ಸ್ವರ್ಗಪ್ರಾಪ್ತಿಗಾಗಿ-ಚಾಂಡಾಲ ರೂಪಧಾರಿಯಾದ ಆ ರಾಜನಿಂದ ರಾಜರ್ಷಿಯಾದ ವಿಶ್ವಾಮಿತ್ರರು ಮಾಡಿಸಲಿದ್ದ ಆ ಅಪೂರ್ವ ಯಾಗದ ವೃತ್ತಾಂತವನ್ನು ಕೇಳಿ ಋಷಿಮುನಿಗಳೆಲ್ಲರೂ ಕೌತುಕಗೊಂಡು ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳತೊಡಗಿದರಾದರೂ, ಅವರಲ್ಲಿ ಯಾರೂ ಧೈರ್ಯಗೊಂಡು ಅದಕ್ಕೆ ಪ್ರತಿಹೇಳಲಾರದೆ ಬರುತ್ತೇವೆಂದು ಒಪ್ಪಿಕೊಂಡರು. ಹೀಗೆ ಎಲ್ಲಾ ಕಡೆಯಲ್ಲೂ ಕರೆವಾದಮೇಲೆ ಶಿಷ್ಯರು, ವಸಿಷ್ಠ ಪುತ್ರರಿದ್ದ ಆಶ್ರಮಕ್ಕೂ ಬಂದು ಅವರನ್ನೂ ಆಹ್ವಾನಿಸಿದರು. ಮಹಾ ನಿಷ್ಠರೂ ತೀವ್ರವ್ರತಸಂಪನ್ನರೂ ಆದ ಅವರಿಗೆ ಮಾತ್ರ ಅದು ಸಹನೆಯಾಗಲಿಲ್ಲ. ಸಂಪ್ರದಾಯ ವಿರೋಧವಾಗಿ ನಡೆಯುತ್ತಿದ್ದ ಆ ಆಚರಣೆಯು ಅವರನ್ನು ರೇಗಿಸಲು, ಅವರು—'ಏನನ್ಯಾಯವಿದು! ವೇದವಿಧಿಯಂತೆ ಯಜ್ಞ ಮಾಡಿಸುವ ಅಧಿಕಾರವು ಬ್ರಾಹ್ಮಣನಿಗಲ್ಲದೆ ಮತ್ತಾವನಿಗುಂಟು? ಇಂದು ಈ ಯಾಗದಲ್ಲಿ ಕ್ಷತ್ರಿಯನು ಪುರೋಹಿತನಂತೆ! ಚಂಡಾಲನು ಯಜ್ಞದೀಕ್ಷಿತನಂತೆ!

ಅಹಾ ಎಷ್ಟು ಚೆನ್ನಾಗಿದೆ? ಈ ಅಪೂರ್ವ ಯಾಗದಲ್ಲಿ ದೇವತೆಗಳು ಬಂದು ಹೇಗೆ ತಮ್ಮ ಭಾಗವನ್ನು ತೆಗೆದುಕೊಳ್ಳುವರೋ ಪರಮ ಧಾರ್ಮಿಕರಾದ ಋಷಿಮುನಿಗಳಾದರೂ ಹೇಗೆ ಆ ಹವಿಶ್ಶೇಷವನ್ನು ಭಕ್ಷಿಸುವರೋ, ನೋಡಬೇಕು. ಲೋಕದಲ್ಲಿ ವಿಚಿತ್ರ ಸಂಗತಿಗಳು ನಡೆಯುತ್ತವೆ!' ಎಂದು ನುಡಿದರು. ವಿಶ್ವಾಮಿತ್ರರ ಆಜ್ಞೆಯಂತೆ ಅಲ್ಲಲ್ಲಿ ಆಹ್ವಾನಿಸಿ ಬಂದು, ಅವರವರು ಹೇಳಿದ ಮಾತುಗಳನ್ನು ಗುರುಗಳಿಗೆ ತಿಳಿಸುತ್ತಿದ್ದ ಶಿಷ್ಯರು, ಮೇಲ್ಕಂಡಂತೆ ನುಡಿದ ವಸಿಷ್ಠ ಪುತ್ರರ ಮತ್ತು ಮಹೋದಯನೆಂಬ ಮತ್ತೊಬ್ಬ ಮುನಿಯ ವಾಕ್ಯಗಳನ್ನೂ ಯಥಾವತ್ತಾಗಿ ತಿಳಿಸಿದರು. ಬಹು ತೀಕ್ಷ್ಣಗಳೂ ತಿರಸ್ಕಾರ ಸೂಚಕಗಳೂ ಆದ ಆ ಮಾತುಗಳನ್ನು ಕೇಳಿದೊಡನೆಯೇ ವಿಶ್ವಾಮಿತ್ರರು ಮಹಾ ಕೋಪಾವಿಷ್ಟರಾಗಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು,—'ಯಾರ ತಂಟೆಗೂ ಹೋಗದೆ, ಯಾರಿಗೂ ಕೇಡನ್ನು ಹಾರೈಸದೆ ನನ್ನ ಮಟ್ಟಿಗೆ ನಾನು ತಪಸ್ಸನ್ನು ಆಚರಿಸುತ್ತಿದ್ದರೂ ವಿನಾಕಾರಣವಾಗಿ ನನ್ನನ್ನು ದೂಷಿಸಿದ ಆ ವಸಿಷ್ಠ ಪುತ್ರರಿಗೆ ಕೊಬ್ಬು ಹೆಚ್ಚಿರಬೇಕು. ದುರಹಂಕಾರಿಗಳಾಗಿ ಸ್ವಪ್ರತಿಷ್ಠೆ ಪರದೂಷಣೆಗಳಲ್ಲಿ ತೊಡಗಿದ ಅವರಿಗೆ ತಕ್ಕ ಶಿಕ್ಷೆಯಾದಲ್ಲದೆ ಬುದ್ಧಿ ಬಾರದು.—ಇಗೋ ಯಾರು ನಿಷ್ಕಾರಣವಾಗಿ ನನ್ನನ್ನು ಹಾಗೆ ದೂಷಿಸಿದರೋ ಆ ವಸಿಷ್ಠ ಪುತ್ರರು ನೂರ್ವರೂ ಈ ಕ್ಷಣದಲ್ಲಿಯೇ ಭಸ್ಮೀಭೂತರಾಗಿ ಕಾಲಪಾಶ ಬಂಧಿತರಾಗಿ ಯಮಪಟ್ಟಣಕ್ಕೆ ಸಾಗಿಸಲ್ಪಡಲಿ - ಮಾತ್ರವಲ್ಲ, ಮುಂದೆ ಏಳು ನೂರು ಜನ್ಮಗಳವರೆಗೂ ಈ ಲೋಕದಲ್ಲಿ ವಿಕಾರ ರೂಪುಳ್ಳವರಾಗಿ ಜನಿಸಿ ಶ್ವಾನಮಾಂಸಭಕ್ಷಕರಾಗಿ ದುಷ್ಟಜೀವನವನ್ನು ಹೊರೆಯಲಿ! ಮತ್ತು ಆ ಮಹೋದಯನೂ ಲೋಕನಿಂದಿತನಾಗಿ ಹೀನವಾದ ಬೇಡ ಕುಲದಲ್ಲಿ ಜನ್ಮವೆತ್ತಿ ಮೃಗವಧೆಯಿಂದ ಜೀವನವನ್ನು ಸಾಗಿಸುತ್ತಾ ದುರ್ಗತಿಯನ್ನು ಹೊಂದುವನಾಗಲಿ' ಎಂದು ಶಾಪವಿತ್ತರು. ಉಗ್ರ ತಪಸ್ವಿಗಳೂ ಮಹಾ ತೇಜಸ್ಸಂಪನ್ನರೂ ಆದ ಅವರ ಆ ವಾಕ್ಯವು ತಕ್ಷಣವೇ ಫಲಕಾರಿಯಾಯಿತು. ವಸಿಷ್ಠ ಪುತ್ರರೂ, ಆ ಮಹೋದಯನೂ ಒಡನೇ ಭಸ್ಮೀಭೂತರಾಗಿ ಹೋದರು ಅದನ್ನು ಕಂಡ ಇತರ ಸಕಲರೂ ಅವರ ಪ್ರಭಾವಕ್ಕೆ ಆಶ್ಚರ್ಯಪಡುತ್ತಾ. ಅಂತಹ ಮಹಾಮಹಿಮರ ಆಜ್ಞೆಗೆ

ವಿರೋಧವಾಗಿ ನಡೆಯಲು ಬೆದರಿ, ಅತ್ಯಂತ ವಿನಯವಿಧೇಯತೆಗಳಿಂದ ನಡೆಯುತ್ತಿದ್ದರು.

ತರುವಾಯ ವಿಶ್ವಾಮಿತ್ರ ಮಹರ್ಷಿಗಳು, ನೆರೆದ ಸಮಸ್ತರನ್ನೂ ಉದ್ದೇಶಿಸಿ—'ಎಲೈ ಸಜ್ಜನರೇ, ತಪಸ್ಸಂಪನ್ನರಾದ ಋಷಿಗಳೇ, ಇಲ್ಲಿ ನಿಮ್ಮಗಳೆದುರಿಗೆ ನಿಂತಿರುವ ಈತನು, ಇಕ್ಷ್ವಾಕು ವಂಶಸಂಭವನಾದ ತ್ರಿಶಂಕುವೆಂಬ ರಾಜನು. ಧಾರ್ಮಿಕನು, ಮಹೋದಾರಿಯು. ಅನೇಕ ಯಾಗಗಳನ್ನು ಮಾಡಿದಾತನು. ಈತನಿಗೆ ಸಶರೀರ ಸ್ವರ್ಗವನ್ನು ಹೊಂದ ಬೇಕೆಂಬ ಅಪೇಕ್ಷೆಯುಂಟಾಗಿ ನನ್ನನ್ನು ಮರೆಹೊಕ್ಕಿರುವನು. ನಾನೂ ಸಹ ಆ ರೀತಿ ಅದನ್ನು ದೊರಕಿಸಿ ಕೊಡುವುದಾಗಿ ವಾಗ್ದಾನ ಮಾಡಿರು ವೆನು. ಈಗ ನಾವುಗಳೆಲ್ಲರೂ ಸೇರಿ ಅಂತಹ ಒಂದು ಯಾಗವನ್ನಾಚರಿಸಿ, ಈತನಿಗೆ ಸದ್ಗತಿಯನ್ನು ದೊರಕಿಸಿ ಕೊಡಬೇಕಾಗಿದೆ. ಇದಕ್ಕಾಗಿ ನೀವೆ ಲ್ಲರೂ ಸಹಕರಿಸಬೇಕು' ಎಂದು ನುಡಿದರು. ವಿಶ್ವಾಮಿತ್ರರ ಆ ಮಾ ತನ್ನು ಕೇಳಿದ ಸಕಲರೂ, ಅವರ ಪ್ರತಿಭೆಯನ್ನೂ ತೀಕ್ಷ್ಣ ಪ್ರಕೃತಿ ಯನ್ನೂ ತಿಳಿದವರಾದುದರಿಂದ ಪ್ರತ್ಯುತ್ತರವಾಗಿ ಏನೂ ಹೇಳದೆ, ಯ ಜ್ಞಾಂಗವಾಗಿ ತಮ್ಮಿಂದ ಆಗಬೇಕಾದ ಕಾರ್ಯಗಳೆಂಥವೆಂಬುದನ್ನು ಹಂಚಿ ಕೊಂಡು, ಶ್ರದ್ಧೆಯಿಂದ ಮಾಡಲು ಸಿದ್ಧರಾದರು. ತಮ್ಮ ಇಷ್ಟಾನು ಸಾರವಾಗಿ ಯಜ್ಞ ಕಾರ್ಯಗಳು ನಡೆಯತೊಡಗಿದುದು ವಿಶ್ವಾಮಿತ್ರರಿಗೆ ಅತಿಶಯ ಸಮಾಧಾನವನ್ನುಂಟುಮಾಡಿತು. ಆ ಯಾಗದಲ್ಲಿ ಅವರೇ ಮುಖ್ಯ ಪೌರೋಹಿತ್ಯವನ್ನು ವಹಿಸಿದರು. ಗುರು ಶಾಪದಿಂದ ಚಂಡಾಲ ಜನ್ಮ ವನ್ನು ಹೊಂದಿದ ತ್ರಿಶಂಕುವು ಯಜ್ಞದೀಕ್ಷಿತನಾಗಿ ಕಂಕಣವನ್ನು ಧರಿಸಿ ದನು. ವಿಶ್ವಾಮಿತ್ರರ ಆಜ್ಞೆಯಿಂದ, ಸಕಲ ಋತ್ವಿಕ್ಕುಗಳೂ ಹೋತೃ ಗಳೂ ಇತರ ಪುರೋಹಿತ ವರ್ಗವೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತು, ಮಂತ್ರತಂತ್ರಾದಿ ಯಾವ ಭಾಗದಲ್ಲೂ ಲೋಪವಿಲ್ಲದಂತೆ ಅತಿಶಯ ವಿಚ ಕ್ಷಣೆಯಿಂದ ಯಾಗವನ್ನು ನಡೆಯಿಸಿದರು. ಹೀಗೆ ಬಹುಕಾಲ ನಡೆದಮೇಲೆ, ಕೊನೆಯಲ್ಲಿ ವಿಶ್ವಾಮಿತ್ರರು, ಹವಿರ್ಭಾಗಗಳನ್ನು ತೆಗೆದುಕೊಳ್ಳಲೆಂದು, ಮಂತ್ರೋಚ್ಚಾರಣ ಪೂರ್ವಕವಾಗಿ ಬೇರೆ ಬೇರೆ ದೇವತೆಗಳ ಹೆಸರು ಹಿಡಿದು ಕೂಗಿದರು. ಆದರೆ ಬಹುಹೊತ್ತಿನವರೆಗೆ ನಿರೀಕ್ಷಿಸಿದರೂ ಯಾ

ವ ದೇವತೆಯೂ ಬರಲಿಲ್ಲ. ದೇವತೆಗಳ ಈ ವರ್ತನವು ಮಹಾ ತೀವ್ರಸ್ವಭಾವದ ವಿಶ್ವಾಮಿತ್ರರನ್ನು ರೇಗಿಸಿತು. ಒಡನೆ ರೋಷಾರುಣಲೋಚನರಾದ ಅವರು, ಹೋಮೋಪಕರಣವಾದ ಸ್ರುವವನ್ನು ಕೈಯಿಂದೆತ್ತಿ ಹಿಡಿದುಕೊಂಡು, ದೀಕ್ಷಿತನಾದ ತ್ರಿಶಂಕುವನ್ನು ಕುರಿತು-'ಎಲೈ ರಾಜನೇ, ದೇವತೆಗಳಿಗೆ ಕೊಡಬೇಕಾದ ಹವಿರ್ದಾನಕ್ಕೆ ಏಕೆ ಲೋಪವನ್ನುಂಟುಮಾಡಬೇಕೆಂದು ಅವರನ್ನು ಮಂತ್ರೋಕ್ತವಾಗಿ ಕರೆದುದಾಯಿತು. ಅವರು, ಬರಲಿಲ್ಲ. ಹೋಗಲಿ; ಅಸೂಯಾಪರರಾದ ಅವರು ಬಂದರೇನು, ಬಾರದಿದ್ದರೇನು? ಯಜ್ಞಭಾಗವನ್ನು ಸ್ವೀಕರಿಸಿದರೆಷ್ಟು! ನಿರಾಕರಿಸಿದರೆಷ್ಟು! ಇನ್ನು ಈ ದೇವತೆಗಳ ಗೊಡವೆಯೇಕೆ? ಬಾ, ನಾನು ಈ ವರೆಗೆ ಗಳಿಸಿಟ್ಟಿರುವ ತಪಸ್ಸಾಮರ್ಥ್ಯದಿಂದಲೇ ನಿನ್ನನ್ನು ಸ್ವರ್ಗಕ್ಕೇರಿಸುವೆನು. ನನ್ನ ತಪೋಬಲವನ್ನಾದರೂ ಈ ದೇವತೆಗಳು ನೋಡಲಿ!' ಎಂದು ನುಡಿದು, 'ಇಗೋ ಹಿಡಿ, ನನ್ನೀ ತಪಸ್ಸಾಮರ್ಥ್ಯವನ್ನು! ಈ ಬಲದಿಂದ ಈ ನಿನ್ನ ಭೌತಿಕ ದೇಹದೊಂದಿಗೇ ಸ್ವರ್ಗಕ್ಕೆ ಹೊರಡು' ಎಂದು ಆಜ್ಞಾಪಿಸಿದನು.

ವಿಶ್ವಾಮಿತ್ರರು ಹಾಗೆ ನುಡಿದುದೇ ತಾವಕಾಶ: ಸಕಲರೂ ನೋಡುತ್ತಿದ್ದ ಹಾಗೆಯೇ, ತ್ರಿಶಂಕುರಾಜನು ತನ್ನಾ ಚಂಡಾಲ ದೇಹದೊಡನೆಯೇ ಅಂತರಿಕ್ಷವನ್ನು ಕುರಿತು ಏರತೊಡಗಿದನು. ಅದನ್ನು ನೋಡಿದ ಸಮಸ್ತರೂ ಪರಮಾಶ್ಚರ್ಯಭರಿತರಾದರು. ವಿಶ್ವಾಮಿತ್ರರ ಆಜ್ಞೆಯಿಂದ ಮೇಲಕ್ಕೇರಿದ ತ್ರಿಶಂಕುವು, ಎಲ್ಲರಿಗೂ ಕಣ್ಮರೆಯಾಗಿ ದೇವಲೋಕವನ್ನು ಸೇರಿದನು. ಆ ಸಂಗತಿಯು, ದೇವೇಂದ್ರನಿಗೆ ತಿಳಿಯಿತು. ಒಡನೆ ಅತನು ಸಮಸ್ತ ದೇವತೆಗಳೊಡನೆಯೂ ಆ ಸ್ಥಳಕ್ಕೆ ಬಂದು-'ಎಲೈ ತ್ರಿಶಂಕುವೇ, ಗುರುದ್ರೋಹ ಪಾತಕವನ್ನು ಗಳಿಸಿ, ಅವರ ಶಾಪದಿಂದ ಚಂಡಾಲ ದೇಹಧಾರಣೆಮಾಡಿದ ನೀನು ಈ ಸ್ವರ್ಗವಾಸಕ್ಕೆ ಯೋಗ್ಯನಲ್ಲ: ಈ ಪುಣ್ಯಲೋಕವಾಸವು, ನೀಚ ಜನ್ಮದಿಂದ ದೂಷಿತನಾದ ನಿನಗೆ ಪ್ರಾಪ್ತಿಸಲರಿಯದು. ಇನ್ನು ಹಿಂದಿರುಗಿ, ನಿನಗೆ ಸಹಜ ವಾಸಸ್ಥಳವಾದ ಆ ಭೂಮಿಯಮೇಲೆ ತಲೆಕೆಳಗಾಗಿ ಬೀಳು' ಎಂದು ನುಡಿದನು. ಇಂದ್ರನಾಡಿದ ಆ ಮಾತುಗಳು ಕಿವಿಗೆ ಬಿದ್ದೊಡನೆಯೇ ತ್ರಿಶಂಕುವು ನಡುಗಿಹೋದನು. ಪರಕ್ಷಣದಲ್ಲೇ ಅವನು ಅವಶವಾಗಿ ತಲೆಕೆಳಗಾಗಿ ಪ್ರಚಂಡ ವೇಗದಿಂದ ಕೆಳಕ್ಕೆ ಬೀಳಲಾ

ರಂಭಿಸಿದನು. ಆ ಪರಿಸ್ಥಿತಿಯು ಆತನಿಗೆ ಅತಿಶಯ ಭಯಪ್ರದವಾಗಲು, ಆವನು ತತ್ತರಿಸುತ್ತ—'ಹೋ, ಮಹರ್ಷಿಗಳೇ ಬಿದ್ದೆ - ಬಿದ್ದೆ', ನನ್ನನ್ನು ರಕ್ಷಿಸಿ, ರಕ್ಷಿಸಿ, ಎಂದು ಕೂಗಿಕೊಂಡನು.

ಮಹಾ ತಪಸ್ಸಂಪನ್ನರಾದ ವಿಶ್ವಾಮಿತ್ರರ ಉಗ್ರ ತಪಸ್ಸಿನ ಮಹಿಮೆಯನ್ನು ಕುರಿತು, ಪರಮಾಶ್ಚರ್ಯಪಡುತ್ತಾ, ಆ ಸಂಬಂಧ ಸಂಭಾಷಣೆಯಲ್ಲೇ ಮಗ್ನರಾಗಿ ಕುಳಿತಿದ್ದ ಆ ಯಾಗ ಸಭೆಯಲ್ಲಿದ್ದವರಿಗೆ,—'ಹೋ ಮಹರ್ಷಿಗಳೇ, ಬಿದ್ದೆ - ಬಿದ್ದೆ - ರಕ್ಷಿಸಿ - ರಕ್ಷಿಸಿ' ಎಂಬೀ ಆರ್ತನಾದವು ಕೇಳಿಸಿತು. ಎಲ್ಲರಂತೆಯೇ ಆ ಮಾತನ್ನು ವಿಶ್ವಾಮಿತ್ರರೂ ಕೇಳಿದರು. ತಮ್ಮ ಉದ್ದೇಶ ಸಾಧನೆಗೆ ಪ್ರಾಪ್ತವಾದ ಆ ವಿಘ್ನವು ಅವರನ್ನು ವಿಶೇಷ ಕೋಪಾಕ್ರಾಂತರನ್ನಾಗಿ ಮಾಡಿತು. ತಕ್ಷಣ ಅವರು—'ನಿಲ್ಲು, ನಿಲ್ಲು, ತ್ರಿಶಂಕುವೇ ನೀನಿರುವಲ್ಲಿಯೇ ನಿಲ್ಲು' ಎಂದು ಗರ್ಜಿಸುತ್ತಾ ಬಲದ ಹಸ್ತವನ್ನು ಮೇಲಕ್ಕೆತ್ತಿ, ಅಲ್ಲಿದ್ದ ಮಹರ್ಷಿಗಳೆಲ್ಲರೂ ಅತಿಶಯ ಕೌತುಕದಿಂದ - ಗಾಬರಿಗೊಂಡು ನೋಡುತ್ತಿರಲು.—'ಎಲೈ ನೀನು, ಆ ಬಡ ಇಂದ್ರನ ಸ್ವರ್ಗಲೋಕಕ್ಕೆ ಬೇಡದವನಾದರೆ ಹೋಗಲಿ. ನೀನಿರುವಲ್ಲಿಯೇ ಒಂದು ಸ್ವರ್ಗಲೋಕವನ್ನು ಸೃಷ್ಟಿಸುತ್ತೇನೆ' ಎಂದು ನುಡಿದರು. ಉತ್ತರ ದಿಕ್ಕಿನಲ್ಲಿ ಧ್ರುವ ನಕ್ಷತ್ರವು ಶಾಶ್ವತವಾಗಿ ಇರುವಂತೆಯೇ, ದಕ್ಷಿಣ ದಿಕ್ಕಿನಲ್ಲಿ ತ್ರಿಶಂಕುವನ್ನು ನಿಲ್ಲಿಸಿ, ಅವನ ಸುತ್ತಲೂ, ಬ್ರಹ್ಮ ಸೃಷ್ಟಿಯಲ್ಲಿರುವಂತೆಯೇ ಸಪ್ತರ್ಷಿ ಮಂಡಲವನ್ನೂ ಇತರ ಹಲವು ನಕ್ಷತ್ರಗಳನ್ನೂ ಉಂಟುಮಾಡಿದರು. ಈ ನೂತನ ಸ್ವರ್ಗಕ್ಕೆ ಒಬ್ಬ ಇಂದ್ರನನ್ನು ನಿಯಮಿಸಬೇಕೆಂಬ ಯೋಚನೆಯುಂಟಾಗಲು-ಬೇಡಬೇಡ. ಈ ತ್ರಿಶಂಕುವೇ ಅಲ್ಲಿಗೆ ಇಂದ್ರನಾಗಿರಲಿ, ಎಂದು ನಿಶ್ಚಯಿಸಿ, ಆತನಿಗೆ ಅನುಚರರಾಗಿರಬೇಕಾದ ದೇವತಾ ವರ್ಗವನ್ನೂ ಕ್ರಮವಾಗಿ ಸೃಷ್ಟಿಸಲಾರಂಭಿಸಿದರು. ಈವರೆಗೂ ವಿಶ್ವಾಮಿತ್ರರು ಮಾಡುತ್ತಿದ್ದ ಕಾರ್ಯಗಳನ್ನು ಅಲಕ್ಷ್ಯಭಾವದಿಂದ ನೋಡುತ್ತಿದ್ದ ದೇವತೆಗಳು ಈಗ ಮಾತ್ರ ಬಹು ಗಾಬರಿಗೊಂಡರು. ಆ ತಪಸ್ವಿಗಳು ಏನು ಮಾಡಬಲ್ಲರು, ಏನು ಮಾಡಲಾರರು ಎಂಬ ಸಂದೇಹವು ಅವರಿಗೆ ಉಳಿಯಲಿಲ್ಲ. ಒಡನೆ ಇಂದ್ರಾದಿ ದೇವತೆಗಳೆಲ್ಲರೂ ಸಕಲ ಋಷಿಗಳನ್ನೂ ಮುಂದಿಟ್ಟುಕೊಂಡು,

ವಿಶ್ವಾಮಿತ್ರರ ಬಳಿಗೆ ಬಂದು-'ಮಹಾತ್ಮರೇ ಮಹನೀಯರಾದ ನೀವೂ ಹೀಗೆ ಕೋಪಕ್ಕೆ ವಶರಾಗಬಹುದೇ? ಮಹಾ ತಪಸ್ಸಂಪನ್ನರಾದ ನಿಮಗೆ ತಿಳಿಯದಿರುವ ಧರ್ಮವಾವುದಿದೆ? ಗುರುಶಾಪಗ್ರಸ್ತನಾಗಿ ಚಂಡಾಲ ಜನ್ಮವನ್ನು ಧರಿಸಿರುವ ಈತನಿಗೆ ಸ್ವರ್ಗದಲ್ಲಿ ಸ್ಥಳವು ಹೇಗೆ ದೊರೆತೀತು? ಇದನ್ನಾದರೂ ನೀವು ಸಾವಧಾನವಾಗಿ ವಿಮರ್ಶಿಸಬೇಡವೆ?'' ಎಂದು ಪ್ರಾರ್ಥಿಸಿದರು. ನಯವಿನಯಗಳಿಂದ ಜೇಡಿದ ಅವರ ಹಿತವಾಕ್ಯವು ಆ ತಪೋಧನನ ಕೋಪವನ್ನು ಸ್ವಲ್ಪ ತಗ್ಗಿಸಲು, ಅವರು-'ಎಲೈ ದೇವತೆಗಳಿರಾ, ಋಷಿಗಳಿರಾ, ನನಗೆ ಶರಣಾಗತನಾದ ಈತನಿಗೆ ನಾನು ಸಶರೀರವಾಗಿ ಸ್ವರ್ಗಕ್ಕೇರಿಸುವೆನೆಂದು ವಾಗ್ದಾನಮಾಡಿಬಿಟ್ಟಿರುವೆನು. ಆ ನನ್ನ ಮಾತಿಗೆ ಈಗ ತಪ್ಪಿ ನಡೆಯಲು ಸಾಧ್ಯವಿಲ್ಲ. ಆದುದರಿಂದ ಈಗ ನಾನು ಸೃಷ್ಟಿಸಿರುವ ಲೋಕವೂ ಅದರ ಸುತ್ತಲೂ ಇರುವ ನಕ್ಷತ್ರಾದಿಗಳೂ ಇತರ ಲೋಕಗಳಿರುವವರೆಗೂ ಶಾಶ್ವತವಾಗಿರಲಿ. ಆ ಲೋಕಕ್ಕೆ ಈ ತ್ರಿಶಂಕುವೇ ಪ್ರಭುವಾಗಿ ಬಾಳಿಕೊಂಡಿರಲಿ, ಇದಕ್ಕೆ ನೀವು ವಿಘ್ನವನ್ನುಂಟುಮಾಡಕೂಡದು' ಎಂದು ನುಡಿದರು. ದೇವತೆಗಳೆಲ್ಲರೂ ಅದಕ್ಕೆ ಒಪ್ಪಿದರು. ಅಂದಿನಿಂದ ತ್ರಿಶಂಕುವು ಆ ನೂತನ ಸ್ವರ್ಗಲೋಕದಲ್ಲಿ ವಿಶ್ವಾಮಿತ್ರರಿಂದ ಸೃಷ್ಟವಾದ ಆ ಜ್ಯೋತಿಶ್ಚಕ್ರಗಳ ನಡುವೆ, ತಾನು ಮಾಡಿದ ಗುರುದ್ರೋಹಕ್ಕಾಗಿ ತಲೆಕೆಳಗಾಗಿ ನಿಂತು ವಾಸಿಸುತ್ತಿರುವನಂತೆ! ಆದರೂ, ಆ ಸ್ಥಿತಿಯು ಆತನಿಗೆ ಸ್ವರ್ಗವಾಸದಂತೆಯೇ ತೃಪ್ತಿದಾಯಕವಾಗಿರುವುದಂತೆ! ಹೀಗೆ ಅತ್ತ ಸ್ವರ್ಗವೂ ದೊರಕದೆ, ಇತ್ತ ಭೂಮಿಗೂ ತಗುಲದೆ ಮಧ್ಯದಲ್ಲಿ ತಲೆಕೆಳಗಾಗಿ ನಿಂತಿರುವಂತಹ ತ್ರಿಶಂಕುವಿನ ವಿಚಿತ್ರ ಸ್ಥಿತಿಯನ್ನೇ-ತ್ರಿಶಂಕುಸ್ವರ್ಗ-ಎಂದು ಕರೆವ ರೂಢಿಯು ಬಂದಿರುವುದು.



## ಅಧ್ಯಾಯ ೫ "ಬ್ರಹ್ಮರ್ಷಿ ವಿಶ್ವಾಮಿತ್ರರು"

ಗುರುಶಾಪಗ್ರಸ್ತನಾದ ತ್ರಿಶಂಕುವಿಗೆ ಹೀಗೆ ಒಂದು ಗತಿಯನ್ನು ಕಲ್ಪಿಸಿಕೊಡುವ ಕಾರ್ಯಕ್ಕಾಗಿ, ವಿಶ್ವಾಮಿತ್ರರು ಅವರಿಗೆ ಮಾಡಿದ ಅಗಾ

ಧ ತಪೋಧನವೂ ವ್ಯಯವಾಗಿ ಹೋಯಿತು. ಆಗಿನ ಕೆಲವು ದಿನಗಳಲ್ಲಿ ನಡೆದ ಸಂಗತಿಗಳನ್ನು ಕುರಿತು, ಅವರು ತಮ್ಮ ಮನಸ್ಸಿನಲ್ಲೇ ಪರಿಭಾವಿಸಿಕೊಳ್ಳುತ್ತ-"ಅಕಟ, ಎಂತಹ ದುರಂತಕಾರ್ಯವು ನಡೆದುಹೋಯಿತು! ಬ್ರಹ್ಮರ್ಷಿತ್ವವನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ ಉಗ್ರ ತಪೋನಿರತನಾದ ನಾನು ಇನ್ನೂ ಕೇವಲ ಕ್ರೋಧ ಮೋಹಗಳನ್ನು ಸಹ ಜಯಿಸಲಾರದೆ ಹೋದೆನಲ್ಲ-ಇಂತಹ ಅಜಿತೇಂದ್ರಿಯನಾದ ನನಗೆ ಮಹರ್ಷಿಪದವು ಲಭಿಸುವುದೆ? ಕ್ರೋಧವಶನಾಗಿ ವಸಿಷ್ಠನ ನೂರುಮಂದಿ ಮಕ್ಕಳನ್ನೂ ಶಾಪದಿಂದ ಭಸ್ಮೀಕರಿಸಿ ಅಗಾಧ ಪಾಪ ಸಂಚಯ ಮಾಡಿಕೊಂಡ ನಾನು, ಇನ್ನು ಯಾವ ಪುಣ್ಯಕಾರ್ಯವನ್ನು ತಾನೇ ಮಾಡಬಲ್ಲೆನು! ಛೆ, ಅತ್ಯುನ್ನತ ಧ್ಯೇಯವಾದ ಬ್ರಹ್ಮಣ್ಯ ಪದವಿಯನ್ನು ಕೋರಿ ಪ್ರಯತ್ನಶೀಲನಾದ ನನ್ನ ದಾರ್ಢ್ಯಪರೀಕ್ಷೆಗಾಗಿಯೇ ದೇವತೆಗಳು ಈ ಬಗೆಯ ವಿಘ್ನಗಳನ್ನು ಒದಗಿಸುತ್ತಿರುವರೆಂಬುದನ್ನು ತಿಳಿದಿದ್ದೂ ಮೋಸಹೋಗುತ್ತಿರುವೆನಲ್ಲಾ!" ಎಂದು ಬಹುಹೊತ್ತು ಚಿಂತಿಸಿ ಕೊನೆಗೆ,-"ಆಗಲಿ, ಇನ್ನು ಹೀಗೆ ಮರುಗುತ್ತಾ ಕುಳಿತುಕೊಳ್ಳುವುದರಿಂದ ಯಾವ ಪುರುಷಾರ್ಥ ಸಿದ್ಧಿಯಾದೀತು? ಈ ಸ್ಥಳವನ್ನು ಬಿಟ್ಟು ಇಲ್ಲೇ ಪಶ್ಚಿಮದಿಕ್ಕಿನಲ್ಲಿರುವ ರಮಣೀಯವಾದ ಪುಷ್ಕರ ಕ್ಷೇತ್ರಕ್ಕೆ ನಡೆದು, ಅಲ್ಲಿ ನನ್ನ ಮನೋರಥ ಸಿದ್ಧಿಗಾಗಿ ಘೋರವಾದ ತಪಸ್ಸನ್ನು ಮಾಡುವೆನು" ಎಂದು ನಿಶ್ಚಯಿಸಿ, ಆಶ್ರಮವಾಸಿಗಳಾದ ಎಲ್ಲರನ್ನೂ ಕರೆದು, ಆ ಸಂಗತಿಯನ್ನು ತಿಳಿಸಿ, ಯಥೇಚ್ಛವಾಗಿ ಆ ಸ್ಥಳವನ್ನು ಕುರಿತು ಪ್ರಯಾಣಮಾಡಿದರು. ಅಲ್ಲಿ ತ್ರಿಕಾಲಸ್ನಾನ, ಗಾಯತ್ರೀ ಜಪ ಮುಂತಾದ ನಿಷ್ಠೆಗಳಲ್ಲಿ ಮಗ್ನರಾಗಿ ಬಹುಕಾಲ ತಪೋನಿರತರಾಗಿದ್ದರು.

ವಿಶ್ವಾಮಿತ್ರರು ಈ ಪುಷ್ಕರ ಕ್ಷೇತ್ರದಲ್ಲಿ ತಪಸ್ಸು ಮಾಡುತ್ತಿದ್ದಾಗಲೇ-ಇತ್ತ ಅಯೋಧ್ಯೆಯಲ್ಲಿ ಅಂಬರೀಷನೆಂಬ ರಾಜನು ಆಧಿಪತ್ಯ ಮಾಡುತ್ತಿದ್ದನು. ಆತನು ಒಂದಾನೊಂದು ಯಜ್ಞ ಮಾಡಲು ದೀಕ್ಷಿತನಾಗಿ ಯಾಗಶಾಲೆಯಲ್ಲೇ ವಾಸಿಸಲಾರಂಭಿಸಿದನು. ಯಜ್ಞಕಾರ್ಯವು ಪ್ರಾರಂಭವಾಗಿ ಸ್ವಲ್ಪಕಾಲ ಎಲ್ಲವೂ ನಿರ್ವಿಘ್ನವಾಗಿ ನಡೆಯಿತು. ಯಜ್ಞ ಮಧ್ಯಕಾಲದಲ್ಲಿ ಆ ಯಜ್ಞಪಶುವು ಎಲ್ಲೋ ಕಳುವಾಗಿಹೋಯಿತು. ಪುರೋಹಿತನು,-ಹೇಗಾದರೂ ಮಾಡಿ ಅದೇ ಪಶುವನ್ನೇ ಹುಡುಕಿತರಬೇಕು. ಅದು ಸಿಕ್ಕದಿದ್ದರೆ

ಅದರ ಬದಲಿಗೆ ಒಬ್ಬ ಮನುಷ್ಯನನ್ನೇ ಯಜ್ಞಪಶುವಾಗಿ ಯೂಪಸ್ಥಾನಕ್ಕೆ ಒದಗಿಸಬೇಕು. ಇಲ್ಲದಿದ್ದರೆ, ಯಜ್ಞ ಕರ್ತೃವಿಗೂ ಆತನ ದೇಶಕ್ಕೂ ಬಹು ಹಾನಿಯು ಸಂಭವಿಸುವುದು' ಎಂದು ಹೇಳಿದನು. ಆ ಮಾತನ್ನು ಕೇಳಿದ ಅಂಬರೀಷರಾಜನು ಬಹು ಚಿಂತಾಕ್ರಾಂತನಾಗಿ, ಕಳೆದುಹೋದ ಯಜ್ಞ ಪಶುವನ್ನು ಹುಡುಕಿಕೊಂಡು ಅನೇಕ ಸ್ಥಳಗಳಲ್ಲಿ ಅಲೆದನು. ಅದು ಎಲ್ಲೂ ದೊರಕಲಿಲ್ಲ. ಕೊನೆಗೆ ಅಸಂಖ್ಯ ಮೌಲ್ಯವನ್ನಾದರೂ ಕೊಟ್ಟು ಯಜ್ಞ ಪಶುವಾಗಿರಲು ಸಮ್ಮತಿಸಬಲ್ಲ ಒಬ್ಬ ಮನುಷ್ಯನನ್ನು ಸಂಪಾದಿಸಬೇಕೆಂದು ಅನೇಕ ಸ್ಥಳಗಳಲ್ಲಿ ಸುತ್ತಿದ್ದಾಯಿತು. ಕೊನೆಗೆ ಭೃಗುತುಂದವೆಂಬ ಬಂ ದಾನೊಂದು ಬೆಟ್ಟದ ತಪ್ಪಲಲ್ಲಿ ಪತ್ನೀ ಪುತ್ರರೊಂದಿಗೆ ವಾಸಿಸುತ್ತಿದ್ದ ಋಚೀಕನೆಂಬ ಒಬ್ಬ ಋಷಿಯನ್ನು ಕಂಡು, ತನ್ನ ಯಜ್ಞ ಸಾಧನೆಗಾಗಿ ಆತನ ಪುತ್ರರಲ್ಲಿ ಒಬ್ಬನನ್ನು ಕೊಡುವುದಾದರೆ, ಸಹಸ್ರ ಗೋವುಗಳನ್ನೂ ವಿಶೇಷ ಧನ ಕನಕವನ್ನೂ ಕೊಡುವುದಾಗಿ ಹೇಳಿ, ಬಹು ವಿನಯದಿಂದ ಯಾ ಚಿಸಿದನು. ಬ್ರಾಹ್ಮಣನು, ಲೋಕಕ್ಷೇಮಕ್ಕಾಗಿ ಯಜ್ಞಪರತನಾದ ಆ ರಾಜನ ಸ್ಥಿತಿಯನ್ನು ನೋಡಿ, ಸಹಾನುಭೂತಿಗೊಂಡನಾದರೂ, ದಂಪತಿಗ ಳಾದ ತಮಗೆ ಸದ್ಗತಿ ಪ್ರದನಾದ ಜ್ಯೇಷ್ಠ ಪುತ್ರನನ್ನು ಕೊಡಲಾರೆನೆಂದನು. ಒಡನೆ ಆ ಋಷಿಯ ಭಾರ್ಯೆಯು ತನ್ನ ಚಿಕ್ಕ ಮಗನಮೇಲೆ ತನಗೆ ಬಹು ಪ್ರೇಮವಿದ್ದುದರಿಂದ ಅವನನ್ನು ತಾನು ಕೊಡಲಾರೆನೆಂದಳು. ಇದನ್ನು ಕಂಡ ಅವರ ಎರಡನೆಯ ಮಗನಾದ ಶುನಶ್ಶೇಫನೆಂಬುವನು ರಾಜನನ್ನು ಕುರಿತು-'ರಾಜನೇ, ಇನ್ನೇಕೆ ಸಂದೇಹಪಡುವೆ? ನಮ್ಮ ತಂದೆಗೆ ನಮ್ಮಣ್ಣ ನನ್ನು ಕೊಡಲು ಸಮ್ಮತಿಯಿಲ್ಲ-ತಾಯಿಯು ಚಿಕ್ಕವನಾದ ನನ್ನ ತಮ್ಮನನ್ನು ಕೊಡಲಾರಳು. ಇನ್ನು ನನ್ನನ್ನು ಕೊಡಲು ಸಮ್ಮತಿಯೆಂದು ಪ್ರತ್ಯೇಕ ಹೇಳಬೇಕಾದುದೇ ಇಲ್ಲವಷ್ಟೆ! ಕೊಡು, ನನ್ನ ಮೌಲ್ಯವಾಗಿ ಅಗಣಿತ ದ್ರ ವ್ಯವನ್ನು ಕೊಟ್ಟು ಅವರ ದಾರಿದ್ರ್ಯವನ್ನು ನೀಗಿಸು. ನಡೆ, ನಾನು ನಿನ್ನ ಯಜ್ಞಪಶುವಾಗಿ ಬರುತ್ತೇನೆ' ಎಂದು ನುಡಿದು, ಹೊರಟನು. ಅಂಬರೀ ಷನು, ಶುನಶ್ಶೇಫನ ಮಾತಾಪಿತೃಗಳಿಗೆ ವಿಶೇಷ ಗೋವುಗಳನ್ನೂ ಧನ ಕನಕ ಗಳನ್ನೂ ಕೊಟ್ಟು, ಅವನನ್ನು ಕರೆದುಕೊಂಡು ಸಂತುಷ್ಟನಾಗಿ ಹೊರಟನು.

ರಾಜ್ಯಾಭಿಮುಖನಾಗಿ ಪ್ರಯಾಣಮಾಡುತ್ತಿದ್ದ ಅಂಬರೀಷನ ಮಾರ್ಗಮಧ್ಯದಲ್ಲೀ ವಿಶ್ವಾಮಿತ್ರರು ತಪಸ್ಸುಮಾಡುತ್ತಿದ್ದ ಪುಷ್ಕರ ತೀರ್ಥವು ದೊರೆಯಿತು. ರಾಜನು ವಿಶ್ರಾಂತಿಗೊಳ್ಳುತ್ತಿದ್ದ ಸಂದರ್ಭವನ್ನು ನೋಡಿ, ಶುನಶ್ಶೇಫನು ತನ್ನಸೋದರಮಾವಂದಿರಾದ ವಿಶ್ವಾಮಿತ್ರ ಮುನೀಶ್ವರರನ್ನು ಸಮೀಪಿಸಿ, ತನ್ನ ದುರ್ಗತಿಯನ್ನು ಕುರಿತು ಮೊರೆಯಿಟ್ಟುಕೊಂಡನು. ಆ ಬಾಲಕನಿಗೆ ಪ್ರಾಪ್ತವಾದ ದುಸ್ಥಿತಿಗಾಗಿ ಮರುಗಿ, ದಯಾಳುಗಳಾದ ವಿಶ್ವಾಮಿತ್ರರು, ಮಧುಸ್ಯಂದನೆ ಮೊದಲಾದ ತಮ್ಮ ಮಕ್ಕಳನ್ನು ಕರೆದು,-ಪರದೇಶಿಯಾದ ಆ ಬ್ರಾಹ್ಮಣ ಬಾಲಕನಿಗೆ ಪ್ರಾಣದಾನ ಮಾಡಲು, ನಿಮ್ಮಲ್ಲಿ ಯಾರಾದರೊಬ್ಬರು ಅಂಬರೀಷರಾಜನ ಯಾಗಕ್ಕೆ ಯೂಪ ಪಶುವಾಗಿ ಹೋಗಿರೆಂದು ಸಲಹೆಕೊಟ್ಟರು. ಆ ಮಾತನ್ನು ಕೇಳಿದ ಆ ಮುನಿಪುತ್ರರು-'ತಂದೆಯೇ, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ಬಲಿಕೊಟ್ಟು ಪರರ ಮಕ್ಕಳನ್ನು ಕಾಪಾಡುವುದಿದೆಂತಹ ನೀತಿಯು! ಯಾವ ಧರ್ಮವು? ಧರ್ಮಸಾಧನೆಗಾಗಿಯಲ್ಲವೆ ಪರೋಪಕಾರಾದಿ ಸತ್ಕಾರ್ಯಗಳನ್ನು ಮಾಡತಕ್ಕುದು! ಔರಸ ಪುತ್ರರನ್ನು-ಪರರಿಗಾಗಿ ವಧಿಸುವುದು ಯಾವ ಧರ್ಮವು? ಇದು ಮೃಷ್ಟಾನ್ನವು ಸಿದ್ಧವಾಗಿರುವಾಗ ಅದನ್ನು ಬಿಟ್ಟು, ಶ್ವಾನ ಮಾಂಸವನ್ನು ಭಕ್ಷಿಸುವಂತೆ ಅಕಾರ್ಯವಾಗುವುದಲ್ಲವೆ?" ಎಂದರು. ಕಾಲಪ್ರೇರಿತರಾಗಿಯೋ ಎಂಬಂತೆ ತಮ್ಮ ಪುತ್ರರು ನುಡಿದ ಈ ಮಾತು, ಬಹು ತೀಕ್ಷ್ಣ ಪ್ರಕೃತಿಯ ವಿಶ್ವಾಮಿತ್ರರಿಗೆ ಒಡನೆ ಅಗಾಧ ಕೋಪವನ್ನು ಹುಟ್ಟಿಸಿತು. ತಮ್ಮ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿಯೂ, ತಮ್ಮ ಮಾತನ್ನು ಆಕ್ಷೇಪಿಸಿಯೂ ನುಡಿದ ತಮ್ಮ ಮಕ್ಕಳ ಆ ಮಾತುಗಳನ್ನು ಕೇಳಿ ಅವರು ಪ್ರಯತ್ನಪೂರ್ವಕ ಸಾಧನೆಮಾಡುತ್ತಿದ್ದ ಶಾಂತ ಸ್ವಭಾವವು ನಾಶವಾಗಿಹೋಯಿತು. ಕ್ರೋಧವು ಜ್ವಾಲಾ ರೂಪವಾಗಿ ಹೊರಹೊಮ್ಮ ಸಾಗಿತು. ಆಗಲವರು, ಅದರ ವೇಗವನ್ನು ತಡೆದುಕೊಳ್ಳಲಾರದೆ,-'ಎಲಾ. ದುರುಳರಿರಾ, ನೀಚರಿರಾ, ಧರ್ಮಸೂಕ್ಷ್ಮ ವಿಚಾರವಿಲ್ಲದೆ. ತಂದೆಯಾದ ನನ್ನನ್ನೂ ಲಕ್ಷ್ಯಮಾಡದೆ ನಿರ್ಭಯರಾಗಿ ಇಂತಹ ಕ್ರೂರ ವಾಕ್ಯಗಳನ್ನಾಡಿದ ನೀವು, ವಸಿಷ್ಠ ಪುತ್ರರಂತೆಯೇ ಭಸ್ಮೀಭೂತರಾಗಿ, ಚಂಡಾಲ ಜನ್ಮವನ್ನೆತ್ತಿ ಉದಯಿಸಿ, ಶ್ವಾನಮಾಂಸ ಭಕ್ಷಕರಾಗಿ ಸಾವಿರ ವರ್ಷಗಳವರೆಗೆ ಈ ಭೂಮಿ

ಯಲ್ಲಿ ವಾಸಿಸುತ್ತ ನರಳಿರಿ'' ಎಂದು ನುಡಿದು, ಶಾಪ ಜಲವನ್ನು ಅವರಮೇಲೆ ಎರೆಚಿದರು. ಮತ್ತು ಬಳಿಯಲ್ಲೇ ನಿಂತಿದ್ದ ಶುನಶ್ಶೇಫನನ್ನು ಬಳಿಗೆ ಕರೆದು-'ಮಗೂ ಬೆದರಬೇಡ. ನಾನು ನಿನಗೆ ಈಗ ಎರಡು ಮಂತ್ರಗಳನ್ನು ಉಪದೇಶಿಸುವೆನು. ನೀನು ದರ್ಭೆಯಿಂದ ಬಿಗಿಯಲ್ಪಟ್ಟು, ರಕ್ತವಸ್ತ್ರವನ್ನು ಧರಿಸಿ ಯೂಪಸ್ತಂಭವನ್ನು ಸಮೀಪಿಸಿದಾಗ, ಈಗ ನಾನು ಅಭಿಮಂತ್ರಿಸಿಕೊಡುವ ವಿಭೂತಿಯನ್ನು ಹಣೆಯಲ್ಲಿ ಧರಿಸಿ, ಈ ಮಂತ್ರವನ್ನು ಪಠಿಸು. ಇದರಿಂದ ಇಂದ್ರ ಉಪೇಂದ್ರರಿಬ್ಬರೂ ಸಂತುಷ್ಟರಾಗಿ ನಿನ್ನನ್ನು ರಕ್ಷಿಸುವರಲ್ಲದೆ, ರಾಜನಿಗೂ ದ್ವಿಗುಣಿತ ಯಜ್ಞ ಫಲವನ್ನು ಪ್ರಸಾದಿಸುವರು'' ಎಂದು ನುಡಿದು, ಮಂತ್ರೋಪದೇಶವಮಾಡಿ, ವಿಭೂತಿಯನ್ನೂ ಮಂತ್ರಿಸಿಕೊಟ್ಟರು. ತರುವಾಯ ಶುನಶ್ಶೇಫನು ಧೈರ್ಯಗೊಂಡು ರಾಜನ ಬಳಿಗೆ ಬಂದನು. ತರುವಾಯ ಅಂಬರೀಷನು, ಜರುಗಿಸಿದ ಯಾಗದಲ್ಲಿ ಶುನಶ್ಶೇಫನು ಯೂಪಸ್ತಂಭಕ್ಕೆ ಕಟ್ಟಲ್ಪಟ್ಟಾಗ್ಗೆ, ಮಾಡಿದ ಸ್ತೋತ್ರಪಾಠದಿಂದ ಸಂತುಷ್ಟರಾದ ಇಂದ್ರೋಪೇಂದ್ರರು, ಆ ಬಾಲಕನಿಗೆ ಪ್ರಾಣದಾನ ಮಾಡಿದ್ದಲ್ಲದೆ, ಆ ಯಜ್ಞಾಚರಣೆಯಿಂದ ಸಾಮಾನ್ಯವಾಗಿ ಪ್ರಾಪ್ತವಾಗುತ್ತಿದ್ದುದಕ್ಕಿಂತಲೂ ದ್ವಿಗುಣಿತ ಫಲವನ್ನು ರಾಜನಿಗೆ ಕರುಣಿಸಿದರು.

ಶುನಶ್ಶೇಫನಿಗೆ ಪ್ರಾಣರಕ್ಷಣೋಪಾಯವನ್ನು ಬೋಧಿಸಿ ಕಳುಹಿಸಿದ ತರುವಾಯ, ವಿಶ್ವಾಮಿತ್ರರು, ಕೋಪಭರದಲ್ಲಿ ಪುನಃ ತಮ್ಮಿಂದ ಜರುಗಿಹೋದ ಅಗಾಧ ದುರಂತ ಕೃತ್ಯವನ್ನು, ಬಹು ಮಟ್ಟಿಗೆ ಸಂತಾಪಗೊಂಡರು. ಕೋಪದ ವೇಳೆಯಲ್ಲಿ ಅದನ್ನು ತಡೆದುಕೊಳ್ಳಲಾರದ ತಮ್ಮ ಅಶಕ್ತೆಯ ವಿಷಯದಲ್ಲಿ ಬಹು ಮರುಗಿದರು. ತರವಾಯ ಇಂತಹ ವಿಘ್ನಗಳಿಗೆ ಅವಕಾಶವೊದಗದಿರಲೆಂದು ಮೌನವ್ರತವನ್ನು ಧರಿಸಿ, ಅದೇ ಕ್ಷೇತ್ರದಲ್ಲೇ ಸಾವಿರ ವರ್ಷಗಳವರೆಗೆ ಘೋರ ತಪಸ್ಸನ್ನು ಆಚರಿಸಿದನು. ಅವರ ತಪೋಜ್ವಾಲೆಯು ದಿನದಿನಕ್ಕೆ ದೇವತೆಗಳಿಗೆ ದುಸ್ಸಹವಾಯಿತು. ಎಲ್ಲರೂ ಸರ್ವಲೋಕ ಪಿತಾಮಹನಾದ ಬ್ರಹ್ಮದೇವನ ಬಳಿಗೆಹೋಗಿ ಮೊರೆಯಿಟ್ಟುಕೊಂಡರು. ಆತನು ವಿಶ್ವಾಮಿತ್ರರು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಬಂದು-'ಎಲೈ ಮಹಾತ್ಮನೇ, ಇದುವರಗೆ ಕೇವಲ ರಾಜರ್ಷಿ ಸ್ಥಾನದಲ್ಲಿದ್ದ

ನಿನಗೆ, ಈವರೆಗಿನ ನಿನ್ನ ಅಗಾಧ ತಪಃ ಫಲವಾಗಿ ಋಷಿಪದವು ಪ್ರಾಪ್ತಿಸಲಿ- ನಿನಗೆ ಮಂಗಳವಾಗಲಿ' ಎಂದು ನುಡಿದು ಅದೃಶ್ಯನಾದನು.

ಅಪ್ರಾರ್ಥಿತನಾಗಿ ಬಂದು ವರಪ್ರದಾನಮಾಡಿದ ಬ್ರಹ್ಮದೇವನ ಆ ಬಗೆಯ ಅನುಗ್ರಹದಿಂದಲೂ ನಿರ್ಮಮರಾದ ವಿಶ್ವಾಮಿತ್ರರ ಮನಸ್ಸಿನಲ್ಲಿ ಸಂತೋಷವೇ ಆಗಲೀ ವ್ಯಸನವೇ ಆಗಲೀ ಉಂಟಾಗಲಿಲ್ಲ-ಎಂದಿನಂತೆ ಅವರು ತಪೋನಿರತರಾಗಿಯೇ ಇದ್ದುಬಿಟ್ಟರು. ಮಹಾವ್ರತನಿಷ್ಠರಾಗಿ ತಪಸ್ಸು ಮಾಡುತ್ತಿದ್ದ ಅವರ ಮನೋದಾರ್ಢ್ಯವನ್ನು ಪರೀಕ್ಷಿಸಲು, ದೇವತೆಗಳ ಕಡೆಯಿಂದ ಮತ್ತೊಂದು ಪರೀಕ್ಷೆಯು ನಡೆಯಿತು. ದೇವವೇಶ್ಯೆಯರಾದ ಅಪ್ಸರೆಯರಲ್ಲೆಲ್ಲ ಪರಮ ಸುಂದರಳಾದ ಮೇನಕೆಯು ಅವರ ದಾರ್ಢ್ಯಪರೀಕ್ಷೆಗಾಗಿ ಕಳುಹಿಸಲ್ಪಟ್ಟಳು. ವಿಶ್ವಾಮಿತ್ರರು ಕೇವಲ ಅಂತರ್ಮುಖಿಗಳಾಗಿ, ಯೋಗ ಮುದ್ರೆಯನ್ನು ಧರಿಸಿ ಸಮಾಧಿ ಮಗ್ನರಾಗಿ ಕುಳಿತಿದ್ದಾರೆ. ಬಾಹ್ಯಪ್ರಜ್ಞೆಯೇ ಅವರಿಗಿಲ್ಲ. ಆ ವೇಳೆಯಲ್ಲಿ ಮೇನಕೆಯು, ಮನ್ಮಥ ವಸಂತರನ್ನು ಸಹಾಯಕ್ಕಾಗಿ ಕರೆದುಕೊಂಡು, ಅವರ ಆ ತಪೋವನವನ್ನು ಪ್ರವೇಶಿಸಿದಳು. ವಸಂತನ ಸಾನ್ನಿಧ್ಯದಿಂದ ವ್ಯಾಪ್ತವಾದ ಒಡಸೆಯೋ ಆ ಉಪವನ ವೃಕ್ಷಗಳೂ ಲತೆಗಳೂ ಪುಷ್ಪಿತಗಳಾಗಿ ಸುಗಂಧವನ್ನು ಬೀರತೊಡಗಿದುವು. ಶುಕಪಿಕ ಚಕ್ರವಾಕಾದಿ ಪಕ್ಷಿಗಳು ಮನೋಹರ ಗಾನಮಾಡಲಾರಂಭಿಸಿದುವು. ತುಂಬಿಗಳ ಝೇಂಕಾರವೂ ಸರ್ವತ್ರ ವ್ಯಾಪಿಸಿತು. ವಾತಾವರಣವೇ ಅತಿಶಯ ಮೋಹಕವಾಯಿತು. ಈ ಕಾರಣಗಳಿಂದ ಸಮಾಧಿ ಮಗ್ನರಾಗಿದ್ದ ವಿಶ್ವಾಮಿತ್ರರಿಗೆ ಅಕಸ್ಮಾತ್ತಾಗಿ ಎಚ್ಚರವಾಗಿಯೇ ಹೋಯಿತು. ಕಣ್ಣುಬಿಟ್ಟು ನೋಡಿದರೆ, ಎದುರಿಗೆ ಮಿಂಚಿನಂತೆ ಪ್ರಕಾಶಮಾನವಾದ-ಅದ್ಭುತ ದೇಹ ಸೌಂದರ್ಯದಿಂದ ಒಪ್ಪುತ್ತಿದ್ದ ಮೇನಕೆಯು, ತನ್ನ ನಡೆ ನೋಟಗಳಿಂದ ಆ ವನಪ್ರದೇಶವನ್ನೇ ಬೆಳಗುಮಾಡುತ್ತ ದೃಷ್ಟಿಗೋಚರಳಾದಳು. ಆಕೆಯ ಕಾಲುಂಗುರಗಳ ಘಲ್ಲು ಘಲ್ಲೆಂಬ ಶಬ್ದವೂ, ಮೃದುವಾದ ಸುಮನೋಹರಗಾನವೂ ವಿಶ್ವಾಮಿತ್ರರ ಮನಸ್ಸನ್ನು ಆಕರ್ಷಿಸಿದುವು. ವಿಶ್ವಾಮಿತ್ರರು ನಟ್ಟ ದೃಷ್ಟಿಯಿಂದ ಆ ಅಪ್ಸರೆಯ ದೇಹಸೌಂದರ್ಯವನ್ನು ನೋಡಿ ನೋಡಿದಂತೆ ಆಕೆಯಲ್ಲಿ ಅನುರಕ್ತರಾದರು. ಮನಸ್ಸು ಮಾಂಸದಾಸೆಯಿಂದ ಗಾಳದಲ್ಲಿ ತಗುಲಿಕೊಂಡ ಮೀನಿನಂತೆ, ವಿಷಯ

ಸುಖಾಭಿಲಾಷೆಯಿಂದ ಆಕೆಯಲ್ಲಿ ತಗುಲಿತು. ಒಡನೆ ಉನ್ಮತ್ತರಂತೆ ಮೇಲಕ್ಕೆದ್ದು, ಆಕೆಯನ್ನು ಸಮೀಪಿಸಿ-'ಎಲೈ ನಾರೀಮಣಿಯೆ, ನಿನ್ನ ಅಗಣಿತ ರೂಪರಾಶಿಯಲ್ಲಿ ನನ್ನ ಮನವು ಸೂರೆಹೋಗಿದೆ. ನಾನು ನಿನ್ನಲ್ಲಿ ಮೋಹಿತನಾಗಿದ್ದೇನೆ. ನನ್ನ ಇಷ್ಟಾರ್ಥವನ್ನು ನೆರವೇರಿಸು'' ಎಂದು ಪ್ರಾರ್ಥಿಸಿದರು. ಅದೇ ಉದ್ದೇಶದಿಂದಲೇ ಬಂದಿದ್ದ ಆಕೆಯು ಆ ಮಾತನ್ನು ನಿರಾಕರಿಸುವಳೆ! ಒಡನೆ ಸಮ್ಮತಿಸಿದಳು. ಮುಂದೆ ಹತ್ತು ವರ್ಷಕಾಲ ವಿಶ್ವಾಮಿತ್ರರು ಆಕೆಯೊಂದಿಗೆ ವಿಷಯೋಪಭೋಗ ಮಗ್ನರಾಗಿದ್ದುಬಿಟ್ಟರು. ಆಕೆಯೂ ಅವರಿಗೆ ಪಂಚೇಂದ್ರಿಯ ತೃಪ್ತಿಯಾಗುವಂತೆ ಸಕಲವಿಧ ಭೋಗಗಳನ್ನೂ ಒದಗಿಸಿ, ಸಂಪೂರ್ಣವಾಗಿ ಅವರ ಚಿತ್ತವೃತ್ತಿಯನ್ನು ಅಪಹರಿಸಿಬಿಟ್ಟಿದ್ದಳು. ಕೊನೆಗೆ ಆಕೆಯಲ್ಲಿ ಒಂದು ಸ್ತ್ರೀ ಶಿಶುವು ಜನನವಾಯಿತು. ಆ ಸಂದರ್ಭದಲ್ಲೊಂದುದಿನ ವಿಶ್ವಾಮಿತ್ರರಿಗೆ ಪೂರ್ವದ ತಮ್ಮ ಉದ್ದೇಶವೂ, ತಾವು ಕೈಕೊಂಡಿದ್ದ ಅಗಾಧ ತಪಸ್ಸಿನ ವಿಚಾರವೂ ಜ್ಞಾಪಕಕ್ಕೆ ಬಂದುವು. ಒಡನೆ ಅವರ ಮನಸ್ಸಿನಲ್ಲಿ ಜ್ಞಾನೋದಯವಾಗಿ, ಕಾಮವಶರಾಗಿ ತಾವು ಎಂತಹ ಅನುಚಿತ ಕಾರ್ಯ ಮಾಡಿದೆವೆಂಬುದು ಸ್ಪಷ್ಟವಾಗಿ ಗೋಚರಿಸಿತು. ಮನಸ್ಸು ಬಹು ಕಳವಳಗೊಂಡಿತು. ಅಗಾಧ ಧ್ಯೇಯ ಸಾಧನೆಗಾಗಿ ಉದ್ದೇಶಿಸಿದ ತಾವು ಕೇವಲ ಕಾಮ ಮೋಹಗಳನ್ನು ಜಯಿಸಲಾರದೆ, ಇಂದ್ರಿಯವಶರಾಗಿ ಪಟ್ಟ ಭವಣೆಗಳನ್ನು ಒಂದೊಂದನ್ನಾಗಿ ಮನಸ್ಸಿನಲ್ಲೇ ಭಾವಿಸಿಕೊಂಡು ಬಹು ವ್ಯಸನಾಕ್ರಾಂತರಾಗಿ, ಬಾರಿಬಾರಿಗೂ ನಿಟ್ಟುಸಿರು ಬಿಡುತ್ತಾ-ತಮ್ಮ ತಪಸ್ಸಿಗೆ ವಿಘ್ನಕಾರಿಗಳಾಗಿ ದೇವತೆಗಳು ಮಾಡುತ್ತಿದ್ದ ಆ ಚೇಷ್ಟೆಗಾಗಿ ಬಹು ಕೋಪಗೊಂಡು ಕಟಕಟನೆ ಹಲ್ಕಡಿಯತೊಡಗಿದರು. ಅಷ್ಟರಲ್ಲ ತಮ್ಮಲ್ಲಿ ತಾವೇ ಸ್ವಲ್ಪಮಟ್ಟಿಗೆ ಸಮಾಧಾನಗೊಂಡು-'ಛೆ, ನಾನು ಮೋಹವಶನಾಗಿ ಎಂತಹ ಕೃತ್ಯವನ್ನಾಚರಿಸಿದೆ ? ಇಂತಹ ದುರ್ಬಲ ಮನಸ್ಸುಳ್ಳ ನನಗೆ ಮಹತ್ಪದವಿಯು ಎಂತು ಲಭಿಸೀತು !' ಎಂದು ಬಾರಿಬಾರಿಗೂ ನಿಟ್ಟುಸಿರು ಬಿಡುತ್ತ, ತನಗೆಲ್ಲಿ ಶಾಪಕೊಡುವರೋ ಎಂದು ಶಿಶುವನ್ನೆತ್ತಿಕೊಂಡು ತತ್ತಳಿಸುತ್ತಾ ನಿಂತಿದ್ದ ಮೇನಕೆಗೆ, ಬೆದರಬೇಡವೆಂದು ಅಭಯವಿತ್ತು ಕಳುಹಿಸಿದರು. ಮತ್ತು ತಪೋವಿಘ್ನಕಾರಿಯಾದ ವಾತಾವರಣವುಳ್ಳ ಆ ವನಪ್ರದೇಶವನ್ನೇ ಪರಿತ್ಯಜಿಸಿ ಹಿಮಾಲಯ

ಪರ್ವತ ಪ್ರಾಂತಕ್ಕೆ ನಡೆದು, ದೃಢವ್ರತ ನಿಷ್ಠರಾಗಿ ಪುನಃ ಘೋರವಾದ ತಪಸ್ಸುಮಾಡತೊಡಗಿದರು. ಅವರ [illegible] ತಪಸ್ಸಿನ ಜ್ವಾಲೆಯು ದೇವತೆಗಳಿಗೆಲ್ಲರಿಗೂ ಅತಿಶಯ ಭಯಪ್ರದವಾಯಿತು. ಒಡನೆ ಎಲ್ಲರೂ ಸತ್ಯಲೋಕಕ್ಕೆ ಓಡಿ, ಬ್ರಹ್ಮದೇವನಿಗೆ ಮೊರೆಯಿಟ್ಟರು. ಆತನು ಸಾವಕಾಶ ಮಾಡದೆ, ವಿಶ್ವಾಮಿತ್ರರಿಗೆ ಮೈದೋರಿ-'ಕಂದಾ, ಕ್ರೂರವಾದ ತಪಸ್ಸಿನಿಂದ ಬಹು ಬಳಲಿದೆ. ಇನ್ನು ಏಳು. ನೀನು ನಿನ್ನ ಉಗ್ರವಾದ ತಪಸ್ಸಿನಿಂದ ಮಹರ್ಷಿ ಪದವಿಯನ್ನು ಗಳಿಸಿದೆ'' ಎಂದು ನುಡಿದನು.

ವಿಶ್ವಾಮಿತ್ರರಿಗೆ, ಅದರಿಂದಲೂ ಸಂತೋಷವುಂಟಾಗಲಿಲ್ಲ -'ಪಿತಾಮಹ, ನೀನು ಹಾಗೆ ನನ್ನ ತಪಸ್ಸಿಗೆ ಮೆಚ್ಚಿ [illegible], ನನಗೆ ಜಿತೇಂದ್ರಿಯತ್ವವು ಸಿದ್ಧಿಸಿತಲ್ಲವೆ!' ಎಂದರು. ಅದನ್ನು ಕೇಳಿ ಬ್ರಹ್ಮದೇವನು-'ಮಗು, ಇನ್ನೂ ನಿನಗೆ ಜಿತೇಂದ್ರಿಯತ್ವವು ಲಭ್ಯವಾಗಲಿಲ್ಲ. ಇನ್ನೂ ಪ್ರಯತ್ನಿಸಬೇಕು' ಎಂದು ನುಡಿದು ಅದೃಶ್ಯನಾಗಿ ಹೋದನು. ವಿಶ್ವಾಮಿತ್ರರು ಪುನಃ ಅತ್ಯಂತ ದೃಢ ವ್ರತವನ್ನು ಕೈಕೊಂಡು ತಪಸ್ಸನ್ನು ಮಾಡಿ, ದೇಹದಂಡನೆಮಾಡಲು ಸಂಕಲ್ಪಿಸಿದರು. ಬೇಸಗೆಯಲ್ಲಿ ಪಂಚಾಗ್ನಿ ಮಧ್ಯದಲ್ಲೂ, ಮಳೆಗಾಲದಲ್ಲಿ ಬಯಲು ಸ್ಥಳದಲ್ಲೂ, ಚಳಿಗಾಲದಲ್ಲಿ ಜಲಮಧ್ಯದಲ್ಲೂ ನಿಂತು, ಕೇವಲ ನಿರಾಹಾರದಿಂದ ಸಹಸ್ರ ವರ್ಷಕಾಲ ಘೋರ ತಪಸ್ಸನ್ನು ಮಾಡಿದರು. ಅಷ್ಟುಕಾಲದ ಮೇಲಾದರೂ, ಅವರಲ್ಲಿ ಕೋಪತಾಪಗಳು ಅಣಗಿರುವುವೋ ಎಂಬುದನ್ನು ಪರೀಕ್ಷಿಸಲು, ದೇವರಾಜನು ಪುನಃ ರಂಭೆಯೆಂಬ ಅಪ್ಸರೆಯನ್ನು ಕಳುಹಿಸಿದನು. ಅವಳೂ ಹಿಂದೆ ಮೇನಕೆಯು ಬಂದಿದ್ದಂತೆಯೇ ಸುಮನೋಹರ ದೇಹಕಾಂತಿಯಿಂದ ಆ ಆಶ್ರಮವನ್ನು ಪ್ರವೇಶಿಸಿ ಕೋಲುಮಿಂಚಿನಂತೆ ಸುಳಿದಾಡತೊಡಗಿದಳು. ಅದನ್ನು ಕಂಡ ವಿಶ್ವಾಮಿತ್ರರು, ಅವಳೂ ತಮ್ಮ ತಪಸ್ಸನ್ನು ಕೆಡಿಸಲು ಬಂದವಳೇ ಎಂದು ತಿಳಿದು-'ಎಲೆ, ರಂಭೆ ಕಾಮ ಕ್ರೋಧಗಳನ್ನು ಜಯಿಸಬೇಕೆಂದು ತಪೋನಿರತನಾದ ನನ್ನ ಮನಸ್ಸನ್ನು ಕೆಡಿಸಿ ಪುನಃ ಇಂದ್ರಿಯ ಮಗ್ನನಾಗುವಂತೆ ಮಾಡಲು ನೀನು ಪ್ರಯತ್ನಿಸಿದೆಯಾದುದರಿಂದ ನೀನು ಹತ್ತು ಸಾವಿರ ವರ್ಷಕಾಲ ಕಲ್ಲಾಗಿಹೋಗು'' ಎಂದು ಶಾಪಕೊಟ್ಟರು. ಉತ್ತರ ಕ್ಷಣದಲ್ಲೇ ಅವಳು ಶಿಲಾ ರೂಪವನ್ನು ಹೊಂದಿ ಬಿದ್ದುಹೋದಳು.

ಒಡನೆ ವಿಶ್ವಾಮಿತ್ರರಿಗೆ ಜ್ಞಾನೋದಯವಾಯಿತು—'ಅಕ್ಕಟಾ, ಎಂತಹ ದುರ್ಗತಿಯಿದು! ಈ ಹಾಳು ಕೋಪಕ್ಕೆ ವಶನಾದ ನನ್ನಿಂದ ಎಂತಹ ಅನುಚಿತ ಕಾರ್ಯವು ಆಚರಿಸಲ್ಪಟ್ಟಿತು! ಈ ಶಾಪದಿಂದ ಪುನಃ ನನ್ನ ಈ ವರೆಗಿನ ತಪಸ್ಸೆಲ್ಲವೂ ವ್ಯರ್ಥವಾಯಿತಲ್ಲ' ಎಂದು ಮರುಗಿದರು. ತರುವಾಯ ಆ ಸ್ಥಳವನ್ನು ಬಿಟ್ಟು, ಹಿಮಾಚಲದ ಪೂರ್ವಭಾಗವನ್ನು ಆಶ್ರಯಿಸಿ, ಇನ್ನು ಕೋಪವನ್ನು ಸಂಪೂರ್ಣವಾಗಿ ಜಯಿಸಬೇಕು—ಎಂದು ದೃಢಸಂಕಲ್ಪಮಾಡಿ ಬಹುಕಾಲ ತಪಸ್ಸು ಮಾಡಿದರು. ಕೊನೆಗೆ ವ್ರತಸಮಾಪ್ತಿಯ ದಿನ ಎದ್ದು, ಅನ್ನ ಮಾಡಿಕೊಂಡು ಭುಜಿಸಲು ಪ್ರಯತ್ನಿಸುತ್ತಿದ್ದಾಗ, ಇಂದ್ರನು ವೃದ್ಧ ಬ್ರಾಹ್ಮಣನ ರೂಪಿನಿಂದ ಬಂದು ಯಾಚಿಸಿದನು. ವಿಶ್ವಾಮಿತ್ರರು ಮರುಮಾತಾಡದೆ, ತಾವು ಮಾಡಿಕೊಂಡಿದ್ದ ಅನ್ನವನ್ನೆಲ್ಲ, ಆ ಬ್ರಾಹ್ಮಣನಿಗೆ ಕೊಟ್ಟುಬಿಟ್ಟು, ಪುನಃ ತಪೋನಿರತರಾಗಿ ಕುಳಿತರು. ಈ ಬಾರಿ, ಮೌನ ವ್ರತವನ್ನು ಹಿಡಿದು ಉಚ್ಛ್ವಾಸ ನಿಶ್ವಾಸಗಳನ್ನೂ ತಡೆದು, ಮಹಾ ಘೋರವಾದ ತಪಸ್ಸನ್ನು ಮಾಡತೊಡಗಿದರು. ಅವರ ಆ ತಪಸ್ಸಿನ ಪ್ರಭಾವವೆಂಥಾದ್ದೋ! ಅವರ ನಡುನೆತ್ತಿಯಿಂದ ಒಂದು ಬಗೆಯ ಹೊಗೆಯು ಹೊರಡಲಾರಂಭಿಸಿತು. ಅದನ್ನು ಕಂಡು, ಇಂದ್ರಾದಿ ದೇವತೆಗಳು, ಇನ್ನು ಲೋಕಕ್ಕೆ ಉಳಿಗಾಲವಿಲ್ಲವೆಂದುಕೊಂಡರು. ಬ್ರಹ್ಮದೇವನ ಬಳಿಗೆ ಹೋಗಿ ಮೊರೆಯಿಟ್ಟುಕೊಂಡರು—'ಮಹಾತ್ಮಾ ವಿಶ್ವಾಮಿತ್ರರ ತಪಸ್ಸಿನಿಂದ ಚರಾಚರಾತ್ಮಕವಾದ ಈ ಸಕಲ ಸೃಷ್ಟಿಯೂ ನಾಶವಾಗುವ ಸ್ಥಿತಿಯು ಪ್ರಾಪ್ತಿಸಿರುವುದು. ಒಡನೆ ಆತನ ಇಷ್ಟವೇನೋ ಅದನ್ನು ಪೂರ್ಣಮಾಡಿ, ಲೋಕವನ್ನು ರಕ್ಷಿಸು' ಎಂದು ಪ್ರಾರ್ಥಿಸಿದರು. ಬ್ರಹ್ಮನು, ಅವರನ್ನು ಸಮಾಧಾನಗೊಳಿಸಿ, ವಿಶ್ವಾಮಿತ್ರರಲ್ಲಿಗೆ ಬಂದು—'ಎಲೈ ಬ್ರಹ್ಮರ್ಷಿಯೇ, ನಿನಗೆ ಸ್ವಾಗತವಾಗಲಿ. ನಿನ್ನ ಲೋಕೋತ್ತರವಾದ ಈ ತಪಸ್ಸಿಗೆ ಮೆಚ್ಚಿ, ನಿನಗೆ ಅಲಭ್ಯ ಬ್ರಹ್ಮರ್ಷಿಪದವಿಯನ್ನು ಕೊಟ್ಟಿರುವೆನು. ಇನ್ನು ತಪಸ್ಸನ್ನು ನಿಲ್ಲಿಸಿ ಶಾಂತನಾಗು. ನಿನ್ನೀ ತಪಸ್ಸಿನಿಂದ ಲೋಕವು ತತ್ತಳಿಸುತ್ತಿರುವುದು' ಎಂದನು. ಬ್ರಹ್ಮದೇವನಾಡಿದ ಆ ಮಾತು ವಿಶ್ವಾಮಿತ್ರರಿಗೆ ಪರಮ ಹರ್ಷವನ್ನುಂಟುಮಾಡಿತು. ಒಡನೆ ಅವರೆದ್ದು, ಬ್ರಹ್ಮದೇವನಿಗೂ ಇತರ ದೇವತೆಗಳಿಗೂ

ನಮಸ್ಕರಿಸಿ,—'ಓ ಪಿತಾಮಹ, ಎಲೈ ದೇವತೆಗಳಿರಾ, ನೀವು ಹಾಗೆ ನನಗೆ ಬ್ರಹ್ಮಣ್ಯ ಪದವಿಯು ಪ್ರಾಪ್ತವಾಗಿರುವುದೆಂದು ಒಪ್ಪಿರುವಿರಾದರೆ, ಓಂಕಾರ ವಷಟ್ಕಾರಾದಿಗಳೂ, ಸಕಲ ವೇದಶಾಸ್ತ್ರಗಳೂ, ಸಮಸ್ತ ವಿಧ ಮಂತ್ರಾಧಿ ದೇವತೆಗಳೂ ತಾವಾಗಿ ಬಂದು ನನಗೆ ವಶವಾಗಬೇಕು. ಅಷ್ಟುಮಾತ್ರವಲ್ಲ - ನಾನು ಯಾರ ಮೇಲೆ ಛಲ ತೊಟ್ಟು, ಈ ತಪೋನಿರತನಾದೆನೋ, ಆ ವಸಿಷ್ಠ ಮಹರ್ಷಿಯು ಬಂದು,—'ನೀನು ಬ್ರಹ್ಮರ್ಷಿಯಾದೆ' ಎಂದು ಹೇಳಬೇಕು. ಇಷ್ಟು ಕಾರ್ಯವನ್ನು ನೆರವೇರಿಸಿ. ನೀವು ಹೋಗಬಹುದು" ಎಂದು ನುಡಿದರು.

ವಿಶ್ವಾಮಿತ್ರರ ಆ ಅಪೇಕ್ಷೆಯನ್ನು ನೆರವೇರಿಸದಿದ್ದರೆ, ಮಹಾ ಛಲಗಾರರಾದ ಅವರು, ಪುನಃ ತಪಸ್ಸಿಗೆ ತೊಡಗಬಹುದೆಂದು ಭಯಗೊಂಡ ದೇವತೆಗಳು, ಬ್ರಹ್ಮರ್ಷಿ ಶ್ರೇಷ್ಠರಾದ ವಸಿಷ್ಠರ ಬಳಿಗೆ ನಡೆದು,—ವಿಶ್ವಾಮಿತ್ರರಲ್ಲಿಗೆ ಬಂದು, ಅವರನ್ನು ಬ್ರಹ್ಮರ್ಷಿಯೆಂದು ಸಂಬೋಧಿಸಿರೆಂದು ಪ್ರಾರ್ಥಿಸಿದರು. ಮಹಾನುಭಾವರಾದ ಅವರು ಸ್ವಲ್ಪವೂ ಕಳಂಕಗೊಳ್ಳದೆ, ದೇವತೆಗಳೊಂದಿಗೆ ಹೊರಟು ನಡೆದು,—'ಎಲೈ ಕುಶಿಕ ವಂಶೋತ್ಪನ್ನನಾದ ಗಾಧಿಪುತ್ರನೇ, ನಿನ್ನ ಅಗಾಧ ಪರಿಶ್ರಮವು ಇಂದು ಸಾರ್ಥಕವಾಯಿತು. ನೀನು ಬ್ರಹ್ಮರ್ಷಿಯಾದೆ. ಸಂದೇಹವಿಲ್ಲ. ಇನ್ನು, ಬ್ರಾಹ್ಮಣ್ಯ ಧರ್ಮಗಳಾದ ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹಾದಿ ಕರ್ಮಗಳೆಲ್ಲಕ್ಕೂ ನಿನಗೆ ಅಧಿಕಾರ ಪ್ರಾಪ್ತಿಯಾಯಿತು. ಶ್ರೇಯೋಸ್ತು' ಎಂದು ನುಡಿದರು. ತರುವಾಯ ವಿಶ್ವಾಮಿತ್ರರು, ಮಿತ್ರಭಾವದಿಂದ ವಸಿಷ್ಠರನ್ನು ಕಂಡು, ಬಹು ಬಗೆಯಿಂದ ಅವರನ್ನು ಗೌರವಿಸಿ, ಪೂಜಿಸಿದರು. ದೇವತೆಗಳೂ, ಅಂದಿಗೆ ಕೊನೆಗಂಡ, ಅವರ ಘೋರ ತಪಸ್ಸಿನಿಂದ ಮನಸ್ಸಮಾಧಾನ ಹೊಂದಿ, ತಮ್ಮ ಲೋಕಗಳಿಗೆ ಹೊರಟು ನಡೆದರು. ವಸಿಷ್ಠರೂ ವಿಶ್ವಾಮಿತ್ರರ ಅನುಜ್ಞೆ ಪಡೆದು, ತಮ್ಮಾಶ್ರಮಕ್ಕೆ ಪ್ರಯಾಣಮಾಡಿದರು. ಬ್ರಹ್ಮರ್ಷಿ ವಿಶ್ವಾಮಿತ್ರರು, ಹೀಗೆ ಕೃತಕೃತ್ಯರಾಗಿ, ಯಥೇಚ್ಛವಾಗಿ ಭೂಮಿಯಲ್ಲಿ ಸಂಚಾರ ಮಾಡತೊಡಗಿದರು.



# ಉ ಪ ಸಂ ಹಾ ರ

ಬ್ರಹ್ಮರ್ಷಿ ವಿಶ್ವಾಮಿತ್ರರು, ತರುವಾಯ ಲೋಕಾನುಗ್ರಹಾರ್ಥವಾಗಿ ಮಾಡಿದ ಕಾರ್ಯಗಳು, ಹರಿಶ್ಚಂದ್ರಾಖ್ಯಾನ, ಶ್ರೀರಾಮ ಚರಿತ್ರೆ ಮುಂತಾದ ಕಥಾಭಾಗಗಳಲ್ಲಿ ವಿಸ್ತಾರವಾಗಿ ವರ್ಣಿತವಾಗಿ, ಜನಜನಿತವಾಗಿರುವುದರಿಂದ ಅವುಗಳನ್ನು ಇಲ್ಲಿ ಹೇಳಬೇಕಾದುದು ಅಪ್ರಕೃತ. ಕ್ಷತ್ರಿಯ ಮಾತಾಪಿತೃಗಳ ದೆಸೆಯಿಂದ ಜನ್ಮಿಸಿದವರಾದರೂ, ಅವರ ಜನ್ಮಕ್ಕೆ ಋಚೀಕ ಮುನಿಯಿಂದ ಬ್ರಹ್ಮಮಂತ್ರಪೂತವಾಗಿ ಸಿದ್ಧವಾದ ಚರುವಿನ ಪ್ರಸಾದವೇ ಕಾರಣವಾದುದರಿಂದ ಕೌಶಿಕರು, ಬ್ರಹ್ಮರ್ಷಿ ಪದವಿಯನ್ನೇ ಸಾಧಿಸಿದರು. ವಿಶ್ವಾಮಿತ್ರರಲ್ಲಿ ಕ್ಷತ್ರಿಯ ಸಂಬಂಧವಾದ ಛಲವೂ, ಶೀಘ್ರ ಕೋಪವೂ, ಪುರುಷ ಪ್ರಯತ್ನದಿಂದಲೇ ಕಾರ್ಯಸಾಧನೆ ಮಾಡಬೇಕೆಂಬ ಕ್ಷಾತ್ರವೂ ಇದ್ದಂತೆಯೇ, ಬ್ರಹ್ಮಭಾವವೂ ಧರ್ಮಾಚರಣೆಯೂ, ಬ್ರಾಹ್ಮಣ ಸಾಮಾನ್ಯವಾದ ತಪಸ್ಸು ಇಂದ್ರಿಯನಿಗ್ರಹಾದಿ ಗುಣಗಳೂ ಸಮ್ಮಿಳಿತವಾಗಿದ್ದುವು. ದ್ವಿಜವರ್ಗದಿಂದ ಅತ್ಯಂತ ಪವಿತ್ರವಾದುದೆಂದು ಅಂಗೀಕರಿಸಲ್ಪಟ್ಟಿರುವ ಗಾಯತ್ರೀ ಮಂತ್ರರಾಜಕ್ಕೆ ಅವರೇ ಋಷಿಯಾಗಿಯೂ ಏರ್ಪಟ್ಟರು. ಮನುಷ್ಯನಾಗಿ ಜನ್ಮಿಸಿದವನಿಗೆ - ಧ್ಯೇಯ ಸಾಧನೆ ಮಾಡುವ ಇದಕ್ಕಿಂತಲೂ ಲಭಿಸಬೇಕಾದ ಮಹತ್ಸೌಭಾಗ್ಯವಿನ್ನಾವುದು ?

ಗ್ರಂಥಾದಿಯಲ್ಲಿ ಅದೃಷ್ಟ - ಪುರುಷ ಪ್ರಯತ್ನಗಳ ಬಲಾಬಲಗಳನ್ನು ಕುರಿತು, ಕೆಲವು ದೂರ ಚರ್ಚಿಸಿದ್ದೆವಲ್ಲವೆ? ಕೇವಲ ವಕ್ರವಾಗಿದ್ದ ದೈವಗತಿಯನ್ನು ಪುರುಷ ಪ್ರಯತ್ನದಿಂದ, ತಮ್ಮ ಇಷ್ಟಕ್ಕೆ ಒಳಪಡಿಸಿಕೊಂಡ ವಿಶ್ವಾಮಿತ್ರರಂತಹ ಅನೇಕ ಮಂದಿ ಪುರುಷಶ್ರೇಷ್ಠರು ಭಾರತದೇಶದಲ್ಲಿ ಜನ್ಮಿಸಿ, ಲೋಕಕ್ಕೇ ಅಸಾಧಾರಣವೆನ್ನಿಸುವಂತಹ ಹಲವು ಮಹತ್ಕಾರ್ಯಗಳನ್ನು ಸಾಧಿಸಿದ್ದಾರೆ. ಕೇವಲ ಪ್ರತ್ಯಕ್ಷ ಪ್ರಮಾಣವನ್ನು ಮಾತ್ರವೇ ನಂಬುತ್ತಿರುವ ಇಂದಿನ ಪಾಶ್ಚಾತ್ಯರು, ಭೌತಿಕ ವಿಜ್ಞಾನ ಶಾಸ್ತ್ರವನ್ನು ಮಾತ್ರ ಆಧಾರವಾಗಿಟ್ಟುಕೊಂಡು, ಅದರ ಬಲದಿಂದಲೇ ಅನೇಕ ನವೀನ ಸೃಷ್ಟಿಗಳನ್ನು ಮಾಡುತ್ತಿರುವರಷ್ಟೆ. ವಿಶ್ವಾಮಿತ್ರರಿಂದ ಬ್ರಹ್ಮಸೃಷ್ಟಿಗೆ ಪ್ರತಿಯಾಗಿ ಸೃಷ್ಟವಾದ ಜ್ಯೋತಿಶ್ಚಕ್ರಾದಿ ಅಗಾಧ ವಸ್ತುಗಳಿಗೂ, ಈಗಿನ

ಪಾಶ್ಚಾತ್ಯರ ಪ್ರಯತ್ನ ಸಾಧ್ಯವಾಗಿ ಹುಟ್ಟುತ್ತಿರುವ ವಸ್ತು ಸಾಮಗ್ರಿಗಳಿಗೂ ಹಸ್ತಿಮಶಕ ಸಾಮ್ಯವೂ ಉಂಟಾಗಲಾರದು. ಆದರೂ, ಇದನ್ನೂ ಅಲಕ್ಷ್ಯಮಾಡಲಾಗದು. ಈ ವಿಜ್ಞಾನ ಶಾಸ್ತ್ರಬಲದಿಂದಲೇ, ಅವರೂ ಸ್ವಾಭಾವಿಕ ದೃಷ್ಟಿಯಲ್ಲಿ ಸಿದ್ಧವಾಗಿ ಭೂಮಿಯಲ್ಲಿ ದೊರೆಯುವ ವಸ್ತುಗಳಿಗಿಂತಲೂ, ಭಿನ್ನವಾದ ಹಲವು ಲೋಹಗಳನ್ನೂ ವಸ್ತು ಸಾಮಗ್ರಿಗಳನ್ನೂ ತಯಾರಿಸುತ್ತಲಿರುವರು. ರೇಷ್ಮೆ, ರಬ್ಬರು, ಕೇಸರಿ, ಕರ್ಪೂರ, ವಜ್ರ ಕೆಂಪುಗಳು ಮುಂತಾದ ಯಾವುದೊಂದು ಪದಾರ್ಥವು ಸ್ವಾಭಾವಿಕವಾಗಿ ವನಸ್ಪತಿ ಮತ್ತು ಉದ್ಭಿಜಾದಿಗಳಿಂದ ಲಭಿಸುವುದೋ ಅದಕ್ಕೆ ಪ್ರತಿಯಾಗಿ, ರಾಸಾಯನಿಕ ಶಾಸ್ತ್ರರೀತ್ಯಾ ಒಂದು ಪದಾರ್ಥವು ಇಂದು ಸಿದ್ಧವಾಗಿರುವುದು. ವನಸ್ಪತಿಯಿಂದ ದೊರೆವ ಬಣ್ಣಗಳಿಗೆ ಪ್ರತಿಯಾಗಿ ರಾಸಾಯನಿಕ ಪ್ರಯೋಗದಿಂದ ಅನೇಕಾನೇಕ ವರ್ಣಗಳು ಸಿದ್ಧವಾಗಿವೆ. ಮಾತ್ರವಲ್ಲ-ಪ್ರಾಣಿಗಳು ವನಸ್ಪತಿಗಳು ಮುಂತಾದುವುಗಳಲ್ಲೂ ವೈಜ್ಞಾನಿಕರ ಬುದ್ಧಿಶಕ್ತಿಯ ಬಲದಿಂದ ಪುರುಷ ಪ್ರಯತ್ನ ಸಾಧ್ಯವಾಗಿ ಮಿಶ್ರಜಾತಿಗಳುಂಟಾಗಿರುವುದನ್ನೂ ಇಂದು ನೋಡಬಹುದು. ಇವೆಲ್ಲವುಗಳಿಗಿಂತಲೂ, ವಿದ್ಯುಚ್ಛಕ್ತಿ ಮತ್ತು ರೇಡಿಯಂ ಮುಂತಾದ ಅತ್ಯಂತ ತೀಕ್ಷ್ಣವಾದ ಶಕ್ತಿ ವಿಶೇಷಗಳನ್ನು ಸ್ವಾಧೀನಪಡಿಸಿಕೊಂಡು, ಪಾಶ್ಚಾತ್ಯ ವೈಜ್ಞಾನಿಕರು, ದಿನದಿನಕ್ಕೆ ಅನೇಕ ಹೊಸ ಹೊಸ ವಸ್ತು ಸಾಮಗ್ರಿಗಳನ್ನು ಕಂಡುಹಿಡಿಯುತ್ತಿರುವರು. ಯಂತ್ರ ನಿರ್ಮಿತನಾದ ಮನುಷ್ಯ ವ್ಯಕ್ತಿಯೊಂದರ ಮೂಲಕ ವಿದ್ಯುಚ್ಛಕ್ತಿಯ ಸಾಮರ್ಥ್ಯದಿಂದ ಕೆಲಸಗಳನ್ನು ಮಾಡಿಸುತ್ತಿರುವರೆಂದು, ಕೆಲವು ದಿನಗಳ ಹಿಂದೆ ಪ್ರಕಟವಾಗಿದ್ದ ಅಪೂರ್ವ ವಿಚಾರವನ್ನು ನಮ್ಮ ವಾಚಕಮಹಾಶಯರಲ್ಲಿ ಅನೇಕರು ಓದಿರಬಹುದು. ಇವೆಲ್ಲವೂ ನಿರಂತರ ಪುರುಷ ಪ್ರಯತ್ನದಿಂದಲ್ಲದೆ ಸಾಧ್ಯವಾಗುವುದೇ! 'ದೈವಂ ನಿಹತ್ಯ ಕುರು ಪೌರುಷಂ' ಎಂದು ದೃಢನಿಶ್ಚಯ ಮಾಡಿದ್ದ, ವಿಶ್ವಾಮಿತ್ರರ ಪಥಚಿಹ್ನೆಯನ್ನೇ-ತಪ್ಪು ಹೆಜ್ಜೆಯಿಂದಲಾದರೂ ನಡೆಯುತ್ತಿರುವ ಪಾಶ್ಚಾತ್ಯರು, ಈ ಪುರುಷ ಪ್ರಯತ್ನದ ಬಲದಿಂದಲೇ, ಇಂದು ಜಗತ್ತಿನಲ್ಲಿ ಮಹಾ ಪ್ರತಿಭಾಶಾಲಿಗಳಾಗಿ, ಪಂಚಖಂಡ ಪೃಥ್ವಿಯಲ್ಲಿ ಬಹು ಭಾಗವನ್ನು ಆಕ್ರಮಿಸು ತೇಜಸ್ವಿಗಳಾಗಿ ಆಧಿಪತ್ಯಮಾಡುತ್ತಿರುವರು.

ಪಾಶ್ಚಾತ್ಯರ ಧ್ಯೇಯವು ಮೇಲಿನ ಹೇಳಿಕೆಯಂತೆ ಉತ್ತಮವಾದುದೇ! ಅನುಕರಣ ಯೋಗ್ಯವಾದುದೇ! ಇಂದಿನ ಭಾರತೀಯರಿಗೆ ಒಂದು ದೃಷ್ಟಿಯಿಂದ ಮಾರ್ಗದರ್ಶಕವಾದುದೇ! ಆದರೆ ಅದರಲ್ಲಿ ಒಂದು ದೋಷವುಂಟು-ಒಂದು ಲೋಪವುಂಟು! ಲೋಕವು ಕೇವಲ ಭೌತಿಕ ವಸ್ತುಗಳ ಬಲದಿಂದಲೇ ನಿಂತಿಲ್ಲ. ಮನುಷ್ಯನು, ಭೌತಿಕ ವಸ್ತುಗಳಿಗಿಂತಲೂ, ಸಾಧಿಸಬೇಕಾದ ಇತರ ಅನೇಕ ಸಿದ್ಧಿಗಳು ಲೋಕದಲ್ಲುಂಟು. ಭೌತಿಕ ವಸ್ತು ಸಾಮಗ್ರಿಗಳು ಎಂದಿಗಿದ್ದರೂ ನಾಶಹೊಂದಲೇ ಬೇಕಾದುದು ಪ್ರಕೃತಿ ಧರ್ಮವು. ನಮ್ಮ ಕಥಾನಾಯಕರು, ಅದೃಷ್ಟ ಫಲವನ್ನು ನಂಬಿ ಕುಳಿತಿರದೆ, ಪೌರುಷದಲ್ಲೇ ಸ್ಥಿರನಂಬಿಕೆಯುಳ್ಳವರಾಗಿ, ಸರ್ವದಾ ಪ್ರಯತ್ನಶೀಲರಾಗಿ ಇದ್ದರಾದರೂ, ಅವರ ಧ್ಯೇಯವು ಇಂದಿನ ಪಾಶ್ಚಾತ್ಯರಂತೆ ಭೌತಿಕ ವಸ್ತುಗಳನ್ನು ಗಳಿಸುವುದಾಗಿರಲಿಲ್ಲವೆಂದು, ಪೌರ್ವಾತ್ಯರಾದ ನಾವು ಈ ಸಂದರ್ಭದಲ್ಲಿ ಗಮನಿಸಬೇಕಾಗಿದೆ.

ಹೀಗೆ ಅಗಾಧ ಪ್ರಯತ್ನಸಾಧ್ಯವಾಗಿ ಗಳಿಸಿದ ಬ್ರಹ್ಮತೇಜಸ್ಸಿನಿಂದಲೇ ನಮ್ಮ ಕಥಾನಾಯಕರಾದ ವಿಶ್ವಾಮಿತ್ರರು, ಇಂದು ಬ್ರಹರ್ಷಿ ಶ್ರೇಷ್ಠರೆಂದು ಲೋಕಪ್ರಸಿದ್ಧರಾಗಿದ್ದಾರೆ. ಇಂತಹ ಪುರುಷಶ್ರೇಷ್ಠರು ಆದರ್ಶಮೂರ್ತಿಗಳಾಗಿದ್ದು, ಭಾರತೀಯರಾದ ನಮ್ಮಲ್ಲಿ ಧೈರ್ಯ ಸ್ಥೈರ್ಯಗಳನ್ನೂ ಜಿತೇಂದ್ರಿಯತ್ವವನ್ನೂ, ಸ್ಥಿರಪ್ರಯತ್ನ ಮಗ್ನರಾಗುವಂತಹ ಮನೋದಾರ್ಢ್ಯವನ್ನೂ, ಜನ್ಮಸಾರ್ಥಕ್ಯಕ್ಕೆ ಸಹಕಾರಿಯಾಗುವ ದಿವ್ಯ ಜ್ಞಾನ ಬಲವನ್ನೂ ಪ್ರಸಾದಿಸಿ ರಕ್ಷಿಸಲಿ-ಇಂತು ಸರ್ವೇಶ್ವರನೂ ಅನುಗ್ರಹಿಸಲಿ.

ತಥಾಸ್ತು.



⊰ ಶ್ರೀರಾಮಸಹಾಯಂ ⊱

# ಸು ಬೋ ಧ ಕು ಸು ಮಾಂ ಜ ಲಿ ಗ್ರಂ ಥ ಮಾ ಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ :—**

ಶ್ರೀ ವಿಷ್ಣು ಭಕ್ತಾಗ್ರಣಿಯಾದ ಅಜಾಮಿಳನ ಚರಿತ್ರವು, ಭಗವನ್ನಾಮ ಮಹಿಮೆಯನ್ನು ಪ್ರದರ್ಶಿಸುವ ಅತ್ಯುತ್ಕೃಷ್ಟ ಸಾಧನವಾಗಿದೆ.

'ಧ್ಯಾಯನ್ ಕೃತೇ ಯಜನ್ ಯಜ್ಞೈಃ ತ್ರೇತಾಯಾಂ ದ್ವಾಪರೇಽರ್ಚಯನ್
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ‖ '

'ಸತ್ಯಯುಗದಲ್ಲಿ ಧ್ಯಾನ ಮಾಡುವಿಕೆಯಿಂದ, ತ್ರೇತಾಯುಗದಲ್ಲಿ ಯಜ್ಞ ಮಾಡುವಿಕೆಯಿಂದ, ದ್ವಾಪರಯುಗದಲ್ಲಿ ಪೂಜೆ ಮಾಡುವಿಕೆಯಿಂದ ಯಾವ ಫಲಪ್ರಾಪ್ತಿಯಾಗುತ್ತಿದ್ದಿತೋ ಅದೇ ಫಲವು ಕಲಿಯುಗದಲ್ಲಿ ಕೇಶವನ ನಾಮಸಂಕೀರ್ತನೆಯಿಂದ ಪ್ರಾಪ್ತವಾಗುತ್ತದೆ' ಎಂದು ಶ್ರೀ ವಿಷ್ಣು ಪುರಾಣವು ಉದ್ಘೋಷಿಸುತ್ತದೆ. ಎಂದರೆ ಕೃತ ತ್ರೇತಾ ದ್ವಾಪರಾದಿ ಯುಗಗಳಲ್ಲಿ ಧ್ಯಾನ, ಯಜ್ಞ, ಪೂಜಾದಿಗಳನ್ನು ಮಾಡಿ ಭಗವಂತನನ್ನು ಮೆಚ್ಚಿಸಿ, ಮೋಕ್ಷಾದಿ ಪರಮ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಲು ಸಾಧ್ಯವಿದ್ದಂತೆಯೇ, ಕಲಿಯುಗದಲ್ಲಿ ಕೇವಲ ನಾಮಸಂಕೀರ್ತನೆ ಮಾತ್ರದಿಂದಲೇ ಅವೇ ಮೋಕ್ಷಾದಿ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಲು ಸಾಧ್ಯವೆಂಬುದು ಇದರಿಂದ ಸಿದ್ಧವಾದಂತಾಯಿತು. ಹೀಗೆ ಕಲಿಯುಗದಲ್ಲಿ ಮುಕ್ತಿಸಾಧನೆಗೆ ಕೇವಲ ಹರಿನಾಮ ಸಂಕೀರ್ತನ ಮಾತ್ರವೇ ಸಾಕೆಂದು ಪುರಾಣ ಕರ್ತೃಗಳು ಹೇಳಿದುದಕ್ಕೆ ಕಾರಣವೂ ಇಲ್ಲದೆ ಇಲ್ಲ. ಮೇಲೆ ಹೇಳಿದ ಮೂರು ಯುಗಗಳಲ್ಲಿ ಅವಶ್ಯಕವೆಂದು ಹೇಳಿದಂತಹ ಧ್ಯಾನ ಯಜ್ಞ ಪೂಜಾದಿಗಳಲ್ಲಿ, ಧ್ಯಾನಕ್ಕೆ ಚಿತ್ತಸ್ಥೈರ್ಯ ಬೇಕು, ಅದಕ್ಕೆ ಸಾಧನವಾಗಿ ಇಂದ್ರಿಯನಿಗ್ರಹ ಮಾಡುವ ಸಾಮರ್ಥ್ಯ ಬೇಕು. ಯಜ್ಞಕ್ಕೆ ವಿಶೇಷ ಧನಬಲ ಜನಬಲಗಳಿರಬೇಕು. ಪರರಿಂದ ಪ್ರಾಪ್ತವಾಗಬಹುದಾದ ಉಪಹತಿಯನ್ನು ಸಹಿಸಿಕೊಂಡು ತಾನು ಕೈಕೊಂಡ ಆ ಯಜ್ಞ ಕಾರ್ಯವನ್ನು

ಸಾಂಗವಾಗಿ ನಿರ್ವಹಣ ಮಾಡುವಷ್ಟು ಶಕ್ತಿ ಸಾಹಸಗಳು ಬೇಕು. ಪೂಜೆ ಗಾದರೂ, ನಿತ್ಯವೂ ಆವಶ್ಯಕ ಉಪಕರಣಗಳನ್ನು ಒದಗಿಸಿಕೊಂಡು ನಿಯಮವನ್ನು ತಪ್ಪದಂತೆ, ಸ್ನಾನ ಸಂಧ್ಯಾದಿಗಳನ್ನು ಆಚರಿಸಿಕೊಂಡು, ಶಾಸ್ತ್ರೋಕ್ತ ಕ್ರಮವನ್ನನುಸರಿಸಿ, ಮಂತ್ರತಂತ್ರಾದಿಗಳಲ್ಲಿ ಲೋಪವಾಗಿಸದಂತೆ, ಜಾಗರೂಕನಾಗಿ ಚಿತ್ತೈಕಾಗ್ರತೆಯಿಂದ ಪೂಜಾ ವಿಗ್ರಹದಲ್ಲಿ ತನ್ನ ಇಷ್ಟದೈವವನ್ನು ಆವಾಹನೆಮಾಡಿ ಪೂಜಿಸುವಷ್ಟು, ತಾಳ್ಮೆಯೂ ಸಾಧನೆಯೂ, ನಿಯಮಬದ್ಧ ಜೀವನವೂ ಬೇಕು. ಆದರೆ ಕಲಿಯುಗದ ಮಾನವರಿಗೆ ದೇಹಮನೋಬುದ್ಧಿಗಳಲ್ಲಿ ಇರುವ ಅಶಕ್ತತೆಯೆಷ್ಟೆಂಬುದರ ಪ್ರಮಾಣವನ್ನು ಅರಿತ ಮಹಾನುಭಾವರು, ಈ ಕಾರ್ಯಗಳು ಸಾಧ್ಯವಿಲ್ಲದುದರಿಂದಲೂ, ಭಗವಂತನ ಕೃಪಾ ಸಂಪಾದನೆಗೆ ಬೇರೆ ಸಾಧನ ತಿಳಿಯದೆ ಹೋಗುವುದರಿಂದಲೂ ಕಲಿಯುಗದ ಜನರು ಪರಲೋಕ ಬಾಹಿರರಾಗಿ ನಾಶವಾಗುವರಲ್ಲಾ ಎಂದು ಕನಿಕರಪಟ್ಟು:

> ಹರೇರ್ನಾಮ ಹರೇರ್ನಾಮ ಹರೇರ್ನಾಮೈವ ಕೇವಲಮ್ |
> ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ||

ಎಂಬಂತೆ, ಕಲಿಯುಗದಲ್ಲಿ ಕಲ್ಯಾಣದಾಯಕವಾದ, ಮತ್ತು ಕಲ್ಮ ಪಾಪಹಾರಕವಾದ ವಸ್ತು ಹರಿನಾಮಕ್ಕಿಂತಲೂ ಭಿನ್ನವಾಗಿ ಮತ್ತಾವುದೂ ಇಲ್ಲವೇ ಇಲ್ಲವೆಂದು ಘಂಟಾಘೋಷವಾಗಿ ಹೇಳಿ, ಆರ್ತರಾದ ಪಾಪಿ ಜನಸಮೂಹಕ್ಕೆ ಮಾರ್ಗದರ್ಶಕರಾಗಿದ್ದಾರೆ.

ಈಗಿನ ಧರ್ಮಬಾಹ್ಯ ಭಕ್ತಿಬಾಹ್ಯ ಯುಗದಲ್ಲಿ, ಭಗವತ್ಸಂಬಂಧವಾದ - ಭಕ್ತ ಭಾಗವತರ ನುಡಿಗಳಿಗೆ ವಿಶೇಷ ಪುರಸ್ಕಾರವು ದೊರೆಯಲಾರದು. ಭಗವನ್ನಾಮವು-'ತನಗೆ ಯಾರಾದರೂ ಪುರಸ್ಕಾರ ಕೊಡುವರೋ' ಎಂದು ಕಾದು ಬಾಯಿಬಿಟ್ಟು ಕುಳಿತಿಲ್ಲ. ಗಂಗಾನದಿಯು ಪವಿತ್ರೋದಕವು,— ಯಾರಾದರೂ ಬಂದು ಕುಡಿದು ತನ್ನನ್ನು ಉದ್ಧಾರ ಮಾಡಿಯಾರೇ?' ಎಂದು ಬಾಯಿಬಿಟ್ಟು ಹಂಬಲಿಸಿಕೊಂಡು ಕುಳಿತಿಲ್ಲವಷ್ಟೆ! ಮಾನವನಿಗೆ ಬಾಯಾರಿಕೆಯಾಗಿದೆಯೇ' ಅವನು ಮಾತ್ರವೇ ನೀರಿನ ಬಳಿಗೆ ಹೋಗಿ ಪ್ರಯತ್ನಪೂರ್ವಕ ಬೊಗಸೆ ನೀರಿಂದೆತ್ತಿ, ಕುಡಿದು ತೃಪ್ತನಾಗಲು

ಸಾಧ್ಯವುಂಟು. ಹಾಗೆಯೇ ಭಗವನ್ನಾಮ ವಿಚಾರದಲ್ಲೂ ! ಯಾವನು ಮಾನವ ಜನ್ಮದ ಅನಿತ್ಯ ಸ್ಥಿತಿಯನ್ನು ತಿಳಿದು, ಶಾಶ್ವತಸ್ಥಾನವಾದ ಭಗವತ್ಸಾನ್ನಿಧ್ಯವನ್ನು ಅಪೇಕ್ಷಿಸುವನೋ ಅವನು ಮಾತ್ರವೇ ಹಿರಿಯರ ಮಾತುಗಳಿಗೆ ಕಿವಿಗೊಟ್ಟು, ತನ್ನ ಚಿತ್ತವೃತ್ತಿಯನ್ನು ಭಗವತ್ಪರವಾಗುವಂತೆ ತಿರುಗಿಸಿ, ನಾಮಸ್ಮರಣೆ ಭಜನೆ ಕೀರ್ತನೆಗಳಿಂದ ಸದ್ಗತಿಯ ಸೋಪಾನಗಳನ್ನು ಏರಿ ಮೋಕ್ಷ ಸಾಧನೆ ಮಾಡಿಕೊಳ್ಳುವನು. ಕಣ್ಣಿದ್ದೂ ಕುರುಡನಾಗಿ, ತರಣೋಪಾಯವು ಗೋಚರವಿದ್ದರೂ ಅದನ್ನನುಸರಿಸಿ ಸಾಧನೆ ಮಾಡಿಕೊಳ್ಳದೆ ಪ್ರಯತ್ನಪೂರ್ವಕ ಅಂಧಕೂಪದಲ್ಲಿ ಬೀಳುವವನಿದ್ದರೆ, ಅವನಿಗೆ ಯಾರು ತಾನೇ ಏನು ಮಾಡಲಾದೀತು ?

ನಮ್ಮ ಕಥಾನಾಯಕನು, ಮಹಾ ವಿಷ್ಣುಭಕ್ತನು. ಈತನ ಈ ಚರಿತ್ರೆಯೂ ನಮ್ಮ ವಾಚಕ ಮಹಾಶಯರಲ್ಲಿ ಭಗವದ್ಭಕ್ತಿ-ಶ್ರದ್ಧಾದಿಗಳನ್ನು ಹೆಚ್ಚಿಸಲು ಕಿಂಚನ್ಮಾತ್ರ ಸಹಕಾರಿಯಾಗಿ, ಅವರಿಗೆ ಗ್ರಂಥಮಾಲಾ ವಿಷಯದಲ್ಲಿ ಪ್ರೇಮೌದಾರ್ಯ ಭಾವಗಳನ್ನು ಹೆಚ್ಚಿಸಲು ಉಪಕರಣವಾಗುವಂತೆ ಅನುಗ್ರಹಿಸಬೇಕೆಂದು ಪರಾತ್ಪರನಾದ ಶ್ರೀಮನ್ನಾರಾಯಣನನ್ನು ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ,<br>ತಾ|| ೯-೩-೧೯೩೦.

ಇತಿ ಸುಜನ ವಿಧೇಯ,<br>**ಯಂ. ರಾಮರಾವ್,**



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ. --೧೯೩೦.--೩೦೦೦ ಪ್ರತಿಗಳು.

ಅಪಿ ಚೇತ್ಸು ದುರಾಚಾರೋ ಭಜತೇ ಮಾಮನನ್ಯ ಭಾಕ್ |
ಸಾಧುರೇವ ಸಮಂತವ್ಯಃ ಸಮ್ಯಗ್ವ್ಯವಸಿತೋಹಿ ಸಃ ||
ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ |
ಕೌಂತೇಯ ಪ್ರತಿಜಾನೀಹಿ ನಮೇ ಭಕ್ತಃ ಪ್ರಣಶ್ಯತಿ ||

"ಬಹು ಕೆಟ್ಟ ನಡತೆಯುಳ್ಳವನಾದರೂ ಯಾವನು ಪರಮಾತ್ಮನಾದ ನನ್ನನ್ನು, ನೀನೇಗತಿಯೆಂದು ಉಪಾಸನೆ ಮಾಡುತ್ತಾನೋ ಅವನು ಸದಾಚಾರವುಳ್ಳವನೇ ಎಂದು ತಿಳಿಯಬೇಕು. ಏಕೆಂದರೆ ಅವನು ಒಳ್ಳೆಯ ನಿಶ್ಚಯವನ್ನು ಮಾಡಿದವನಾಗಿರುವನು.

"ಈ ಕಾರಣದಿಂದ ಅವನು ಬಹು ಬೇಗ ಧರ್ಮಮಾರ್ಗದಲ್ಲಿ ಮನಸ್ಸುಳ್ಳವನಾಗುತ್ತಾನೆ. ಮತ್ತು ಎಂದಿಗೂ ನಾಶವಾಗದೆ ಇರುವಂಥ ಶಾಂತಿಯನ್ನು ಪಡೆಯುತ್ತಾನೆ. ಅರ್ಜುನನೆ ಹೇಳುತ್ತೇನೆ ಕೇಳು, ನನ್ನ ಭಕ್ತನು ಎಂದಿಗೂ ಕೆಟ್ಟುಹೋಗುವುದಿಲ್ಲ."

ಗೀತಾ. ಅ. ೯ ಶ್ಲೋ. ೩೦-೩೧

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ
ನಾರಾಯಣೇತಿ ವಾಗ್ವಲ್ಲೀ ಚತುರಕ್ಷರ ಪಲ್ಲವಾ |
ಧರ್ಮಾರ್ಥ ಕಾಮಮೋಕ್ಷಾಣಾಂ ಫಲದಾ ನಾತ್ರ ಸಂಶಯಃ |

---

'ನಾಮ್ನೋಹಿ ಯಾವತೀ ಶಕ್ತಿಃ ಪಾಪ ನಿರ್ಹರಣೇ ಹರೇಃ
ತಾವತ್ಕರ್ತುಂ ನಶಕ್ನೋತಿ ಪಾತಕಂ ಪಾತಕೀ ನರಃ ||'

'ಭಗವನ್ನಾಮಕ್ಕೆ ಎಷ್ಟು ಪಾಪಗಳನ್ನು ನಾಶಮಾಡುವ ಶಕ್ತಿಯಿದೆಯೋ ಅಷ್ಟು ಪಾಪವಾಗಲೀ, ಅಷ್ಟು ಪಾಪಗಳನ್ನು ಮಾಡಲು ಸಮರ್ಥನಾದ ಮನುಷ್ಯನಾಗಲಿ ಇಲ್ಲ.'

---

ಶ್ರೀರಾಮಸಹಾಯಂ

## ವಿಷ್ಣುಭಕ್ತಾಗ್ರಣಿ

# ಅಜಾಮಿಳ

**ಅಧ್ಯಾಯ ೧** **"ವಂಶೋದ್ಧಾರಕ ಸಂತತಿ"**

ಅನಾದಿ ಕಾಲದಿಂದ, ಸರ್ವೇಶ್ವರನ ಕೃಪಾಪಾತ್ರವಾದುದೆಂದು ಹೆಸರುಗೊಂಡಿರುವ ನಮ್ಮ ಮಾತೃಭೂಮಿಯಾದ ಈ ಭಾರತದೇಶದಲ್ಲಿ ಹಲವು ವಿಚಿತ್ರ ಸಂಗತಿಗಳು ನಡೆದಿವೆ. ಅವುಗಳು ವಿಚಿತ್ರ ಸಂಗತಿಗಳೇ ಆದರೂ ಕೇವಲ ವಿನೋದದಿಂದ ಪರಿಣಾಮವಾಗತಕ್ಕುವುಗಳಾಗಿಲ್ಲ. ಅವುಗಳಿಂದ ಲೌಕಿಕ ಮತ್ತು ಆಧ್ಯಾತ್ಮಿಕ ಜೀವಿತಗಳಿಗೆ ಸಂಬಂಧಪಟ್ಟ ಅನೇಕ ಗೂಢ ಪ್ರಶ್ನೆಗಳು ಬಿಡಿಸಲ್ಪಟ್ಟಿವೆ. ಲೋಕದಲ್ಲಿ ಪ್ರತಿಯೊಬ್ಬ ಮನುಷ್ಯಪ್ರಾಣಿಯ ಜೀವಿತದಲ್ಲೂ ಎರಡು ಮಹತ್ತರವಾದ ವಿಚಾರಗಳು ಸಂಭವಿಸುತ್ತವೆ. ಒಂದು ಜನನ-ಮತ್ತೊಂದು ಮರಣ. ಈ ಜನನ ಮತ್ತು ಮರಣವೆಂಬೆರಡು ಸಂಭವಗಳು, ಪ್ರಪಂಚದಲ್ಲಿ ಸರ್ವಸಾಮಾನ್ಯವಾಗಿ ನಿತ್ಯವೂ ಜರುಗುತ್ತಿರುವ ವಿಷಯಗಳಾಗಿರುವುದರಿಂದ, ನಮಗೆ ಅವು ಕೇವಲ ಸಾಮಾನ್ಯ ವಿಚಾರಗಳೆಂಬಂತೆಯೇ ದೃಷ್ಟಿಗೋಚರವಾಗುತ್ತವೆ. ಆದರೆ ಜನನ-ಮತ್ತು ಮರಣ ಈ ಸಂಭವಗಳನ್ನು ಕುರಿತು ಸ್ವಲ್ಪ ದೀರ್ಘವಾಗಿ ವಿಚಾರ ನಡಿಸುವುದಾದರೆ, ಅನೇಕ ಗಭೀರ ವಿಚಾರಗಳು ಹೊರಪಡುವುವು. ಜನನವಾದ ಒಬ್ಬ ಪ್ರಾಣಿಯು ಬಂದುದೆಲ್ಲಿಂದ? ಏಕೆಬಂದ? ಹೇಗೆಬಂದ? ಇಲ್ಲಿರುವುದು ಯಾವ ಉದ್ದೇಶಕ್ಕಾಗಿ? ಆ ಉದ್ದೇಶ ಸಾಧನೆಯಿಂದ ಪ್ರಾಪ್ತವಾಗುವ ಪ್ರಯೋಜನವೇನು? ತರುವಾಯ, ಹೋಗು

ವುದೆಲ್ಲಿಗೆ ? ಏಕೆ, ಹೇಗೆ ? ಇವು ನಿಜವಾಗಿಯೂ ವಿಚಾರಣೀಯ ಸಂಗತಿಗಳಲ್ಲವೆ ! ಜನನ ಮತ್ತು ಮರಣ ಈ ಎರಡು ಗಭೀರ ಸಂಭವಗಳಿಗೆ ಸಂಬಂಧಪಟ್ಟ ಸಂಗತಿಗಳನ್ನು ವಿಚಾರಿಸುವ ಶಕ್ತಿಯನ್ನೂ ಬುದ್ಧಿ ಸಾಮರ್ಥ್ಯವನ್ನೂ ದಯಾನಿಧಿಯಾದ ಸರ್ವೇಶ್ವರನು ಅನಂತಕೋಟಿ ಜೀವರಾಶಿಗಳಲ್ಲಿ ಸೃಷ್ಟಿಶ್ರೇಷ್ಠನಾದ ಮಾನವನಿಗೆ ಮಾತ್ರವೇ ಪ್ರಸಾದಿಸಿರುತ್ತಾನೆ. ಹೀಗೆ ಶ್ರೇಷ್ಠಜೀವಿಯಾದ ಮಾನವನೂ ಈ ವಿಚಾರಗಳನ್ನು ಕುರಿತು ಯೋಚಿಸದಿದ್ದಲ್ಲಿ, ಏನು ಕತ್ತೆ ಕುದುರೆಗಳೂ-ಕಾಗೆ ಕೋಳಿಗಳೂ, ಹಂದಿ ನಾಯಿಗಳೂ, ವಿಚಾರಿಸಿ ವಿಮರ್ಶೆ ನಡಿಸಿ, ಜನ್ಮಸಾರ್ಥಕತೆಗಾಗಿ ಪ್ರಯತ್ನಿಸಬಲ್ಲುವೆ ?

ಈ ಎರಡು ದೊಡ್ಡ ವಿಚಾರಗಳಲ್ಲಿ ಜನನವೆಂಬುದೊಂದು ನಮ್ಮಗಳ ಜನ್ಮದಲ್ಲಿ ಸಂಭವಿಸಿದುದಾಯಿತು. ಇನ್ನು ಮಿಕ್ಕಿರುವುದು ಎರಡನೆಯದು ಅದು ಹೇಗೆ ಸಂಭವಿಸುವುದೆಂಬುದೂ, ಅದರ ತರುವಾಯ ಪ್ರಾಪ್ತವಾಗಿರುವ ಸ್ಥಿತಿ ಎಂಥದೆಂಬುದೂ, ನಮ್ಮ ಸ್ವಾಧೀನದಲ್ಲಿರುವ ಈ ಎರಡರ ಮಧ್ಯಕಾಲವನ್ನು ಹೇಗೆ ವಿನಿಯೋಗಿಸುವೆವು ಎಂಬುದನ್ನು ಅವಲಂಬಿಸಿರುವುದು. ಮರಣಕಾಲವು ಸುಖಕರವಾದುದೂ, ಶಾಂತಯುತವಾದುದೂ, ಮರಣಾನಂತರದ ಸ್ಥಿತಿಯು ಸುಖದಾಯಕವಾದುದೂ ಆಗಬೇಕೆಂಬುದು ನಮ್ಮ ಇಷ್ಟದಲ್ಲಿರುವುದಾದರೆ ಅದಕ್ಕೂ ತಕ್ಕಷ್ಟು ಪ್ರಯತ್ನವು ಈ ಅವಧಿಯಲ್ಲೇ ನಡೆಯಬೇಕಾಗಿರುವುದು. 'ಹಗಲು ಕಷ್ಟಪಟ್ಟು ಕೆಲಸಮಾಡಿದವನು, ರಾತ್ರಿ ಸುಖವಾಗಿ ನಿದ್ರೆಮಾಡುವನು' ಎಂಬುದು, ಎಷ್ಟು ಸ್ಪಷ್ಟವಾಗಿರುವುದೋ, ಇದೂ ಅಷ್ಟೇ ಸ್ಪಷ್ಟವಾಗಿರುವುದಾದುದರಿಂದ ಇದನ್ನು ಸಿದ್ಧಮಾಡಿಕೊಡಲು ಯಾವ ಪ್ರತ್ಯಕ್ಷ ಪ್ರಮಾಣವನ್ನೂ ಕೊಡಬೇಕಾದುದಿಲ್ಲ. ಅನುಗಾಲವೂ, ಸತ್ಯಧರ್ಮಪರನಾಗಿ, ನ್ಯಾಯನಿಷ್ಠನಾಗಿ, ಪರೋಪಕಾರಪರಾಯಣನೂ ಪಾಪಭೀತನೂ, ಭಗವದ್ಭಕ್ತನೂ ಆಗಿದ್ದ ಒಬ್ಬನು ಸದಾಕಾಲವೂ ಶಾಂತಯುತ ಮನೋಭಾವದಿಂದಲೇ ಸಂತೋಷಚಿತ್ತದಿಂದಲೇ ಇರುವನಾದುದರಿಂದ ಅವನಿಗೆ ಕೊನೆಗಾಲದಲ್ಲಾದರೂ ಚಿತ್ತವಿಭ್ರಮಣೆಯುಂಟಾಗಲೂ, ಭಯ ಭೀತಿಗಳುಂಟಾಗಲೂ ಕಾರಣವೇ ಇರುವುದಿಲ್ಲ. ಹಾಗಲ್ಲದೆ ಯಾವನು, ಸದಾ ಕೋಪತಾಪಗಳಿಂದ ಕುದಿಯುತ್ತಾ, ಪರಸ್ವಾ

ಪಹಾರ ಪರಹಿಂಸೆಗಳಲ್ಲಿ ನಿರತನಾಗಿ, ಲೇಶಮಾತ್ರವೂ ಶಾಂತತೆ ಸಮಾಧಾನಗಳೆಂಬುವಿಲ್ಲದೆ ಕಠಿನಸ್ವಭಾವ ಯುಕ್ತನಾಗಿರುವನೋ ಅವನಿಗೆ ಕೊನೆಗಾಲದಲ್ಲಿ ಮಾತ್ರ ಸಮಾಧಾನ ಒದಗಬೇಕೆಂದರೆ ಅದು ಹೇಗೆ ಸಾಧ್ಯವಾದೀತು? ಹೀಗೆ ಇದು ಮಧ್ಯಾಹ್ನದ ಬೆಳಕಿನಂತೆ ಸ್ಪಷ್ಟತರವಾಗಿರುವುದರಿಂದ ಯಾವನೊಬ್ಬನಿಗೆ ಶಾಂತತಾ ಪೂರ್ವಕವಾದ ಮರಣ ಪ್ರಾಪ್ತವಾಗಬೇಕೆಂದು ಇಚ್ಛೆಯಿದ್ದರೆ, ಮೃತ್ಯುವನ್ನು ಅನುಸರಿಸಿಕೊಂಡೇ ಸಾಗುತ್ತಿರುವ ನಮ್ಮ ಈ ನಿತ್ಯ ಜೀವಿತದ ಒಂದೊಂದು ಗಳಿಗೆಯನ್ನೂ ಶಾಂತಿಯಿಂದ, ಸಮಾಧಾನದಿಂದ, ಸದ್ಯೋಚನೆಗಳಿಂದ, ನ್ಯಾಯನಿಷ್ಠತೆಯಿಂದ ಕಳೆಯಲು ಪ್ರಯತ್ನಿಸುತ್ತಿರಬೇಕಾದುದೇ ಪ್ರಥಮೋಪಾಯವೆಂದರೆ ಸಾಕಾಗಿರುವುದು.

ಹೀಗೆ ಸನ್ಮಾರ್ಗದಲ್ಲಿ ಸಾಗಿಸುವ ನಿಯಮಬದ್ಧ ಜೀವನದಿಂದ ಪ್ರಾಪ್ತವಾಗುವ ಪ್ರಯೋಜನವು ಅಷ್ಟುಮಾತ್ರವಲ್ಲ-ಇದರಿಂದ ಅಗಾಧವಾದ ಮತ್ತೊಂದು ಪ್ರಯೋಜನವೂ ಉಂಟಾಗುವುದೆಂದು ಪ್ರಾಜ್ಞರ ಹೇಳಿಕೆಯುಂಟು. ಇಹಜನ್ಮದ ಅಂತ್ಯಕಾಲದಲ್ಲಿ ಮನಸ್ಸಿನಲ್ಲಿ ಯಾವ ಭಾವ, ಯಾವ ಆಶಯ, ಯಾವ ವಾಸನೆಗಳಿರುವುವೋ, ಅವೇ ಭಾವ ಆಶಯ ವಾಸನೆಗಳನ್ನು ಅವಲಂಬಿಸಿದ ಸಂಕಲ್ಪವೇ-ಮರಣಾನಂತರ ಪ್ರಾಪ್ತವಾಗುವ ಮುಂದಿನ ಜನ್ಮಕ್ಕೂ ಬೀಜರೂಪವಾಗುವುದೆಂಬುದು ಅವರ ಅಭಿಪ್ರಾಯ! ಈ ಅಭಿಪ್ರಾಯವನ್ನು 'ಬಣಮಾತು - ಪುರಾಣಕಾರರ ಕೆಲಸಕ್ಕೆ ಬಾರದ ಹರಟೆ' ಎಂದು ಹಳಿಯುವಂತಹ ಪ್ರಜ್ಞಾನಿಧಿಗಳಿಗಾಗಿ ಇಲ್ಲಿ ನಾವು ಈ ವೃತ್ತಾಂತವನ್ನು ಹೇಳುತ್ತಿಲ್ಲ. ಅಂತಹವರಿಗೆ ಇಹಜೀವಿತವನ್ನು ನ್ಯಾಯಮಾರ್ಗದಲ್ಲಿ ಸಾಗಿಸುವ ವಿಷಯದಲ್ಲಿ ಎಷ್ಟುಮಟ್ಟಿನ ಶ್ರದ್ಧಾಭಕ್ತಿಗಳುಂಟೋ. ಪರಜನ್ಮದ ಸುಸ್ಥಿತಿಯ ವಿಚಾರವಾಗಿ ಅದಕ್ಕಿಂತಲೂ ಹೆಚ್ಚಾದ ಶ್ರದ್ಧಾಭಕ್ತಿಗಳಿರಲಾರವಾದುದರಿಂದ ಅವರನ್ನು ಕುರಿತ ಪ್ರಸಂಗವು ಇಲ್ಲಿ ಅನವಶ್ಯಕ! ಈ ಸಂಗತಿಯನ್ನು ಅತಿ ಸ್ಪಷ್ಟರೀತಿಯಿಂದ ಶ್ರೀಕೃಷ್ಣ ಪರಮಾತ್ಮನು *ಭಗವದ್ಗೀತಾ ಗ್ರಂಥರತ್ನದಲ್ಲಿ ಉಪದೇಶಿಸಿರುವನು.

---

*ಶ್ಲೋಕ:---ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಮ್ |
ತಂ ತಮೇವೈತಿ ಕೌಂತೇಯ ಸದಾ ತದ್ಭಾವ ಭಾವಿತಃ ||

ತಾ|| ಎಲೈ ಕುಂತೀ ಪುತ್ರನೇ, ಯಾವ ವಸ್ತುವನ್ನೇ ಯಾವಾಗಲೂ ಚಿಂತಿಸುತ್ತಾ,

ಇದನ್ನು ಕೇವಲ ಗ್ರಂಥಸ್ಥ ವಾಕ್ಯವೆಂಬಂತಿಲ್ಲ! *ಭರತ ಮಹರ್ಷಿಯ ಜೀವಿತದಲ್ಲಿ ಈ ಸಂಗತಿಯು ಯಥಾಸ್ಥಿತವಾಗಿ ತೋರ್ಪಟ್ಟಿದೆ.

ಹೀಗೆ ಜನನ, ಜೀವನ, ಮರಣ, ಮರಣಾನಂತರ ಸ್ಥಿತಿ ಇವುಗಳೆಲ್ಲವೂ ಮನುಷ್ಯನ ಭಾವ ಆಶಯ ವಾಸನೆ ಇವುಗಳ ಪ್ರವೃತ್ತಿಯನ್ನು ಅನುಸರಿಸಿಯೇ ನಡೆಯುವುವು ಎಂದಾದಮೇಲೆ, ಮನುಷ್ಯನು ಸತ್ಯ ಧರ್ಮ ನ್ಯಾಯ ಮಾರ್ಗಗಳನ್ನು ಅನುಸರಿಸಿ ನಡೆಯುತ್ತಿರುವವರೆಗೂ ತನಗೆ ದುರ್ಗತಿಯು ಪ್ರಾಪ್ತವಾಗುವುದೆಂದು ಅಂಜಲು ಕಾರಣವೇ ಇಲ್ಲ. ಸರ್ವಶ್ರೇಷ್ಠ ನ್ಯಾಯಮೂರ್ತಿಯಾದ ಭಗವಾನನ ರಾಜ್ಯಭಾರದಲ್ಲಿ ನಿರಪರಾಧಿಗೆ ಶಿಕ್ಷೆಯೂ, ಅಪರಾಧಿಗೆ ಪುರಸ್ಕಾರವೂ ಎಂದಿಗೂ ದೊರೆಯಬಾರದು. ಸನ್ಮಾರ್ಗಾಚರಣೆಗೆ ತಕ್ಕ ಸತ್ಫಲವೂ, ದುರ್ಮಾರ್ಗಾಚರಣೆಗೆ ತಕ್ಕ ದುಷ್ಫಲವೂ, ದೇಹವನ್ನನುಸರಿಸಿಕೊಂಡು ಬರುವ ನೆರಳಿನಂತೆ ಆಯಾ ಮನುಷ್ಯನ ಬೆನ್ನಟ್ಟಿಯೇ ಬರುವುವೆಂಬುದರಲ್ಲಿ ಲೇಶಮಾತ್ರವೂ ಸಂದೇಹವಿಲ್ಲ. ಅವನವನ ಕರ್ಮಾನುಸಾರ ದೊರೆವ ಸತ್ಫಲ ದುಷ್ಫಲಗಳು ಬೇಡವೆಂದರೂ ತಪ್ಪುವಂತಿಲ್ಲ. ಸತ್ಕರ್ಮಾಚರಣೆಯಲ್ಲೇ ನಿರತನಾಗಿದ್ದವನು, ಅಕಸ್ಮಾತು ಪುರಾಕೃತ ಕರ್ಮಪಾಶ ಒದ್ದಸಾಗಿ ಒಂದುವೇಳೆ ದುಷ್ಕಾರ್ಯದಲ್ಲಿ ಪ್ರವೇಶಿಸಿ ಮಾರ್ಗತಪ್ಪಿದ್ದರೂ, ದಯಾನಿಧಿಯಾದ ಸರ್ವೇಶ್ವರನು, ಅವನನ್ನು ಅನಾದರ ಮಾಡದೆ, ಕಾಪಾಡುವನೆಂಬ ಸಂಗತಿಯು ನಮ್ಮ ಕಥಾನಾಯಕನ ಜೀವಿತದಿಂದ ಬಹು ಚೆನ್ನಾಗಿ ವ್ಯಕ್ತವಾಗುತ್ತದೆ. ವಾಚಕಮಹಾಶಯರು ಸಾವಧಾನ ಚಿತ್ತರಾಗಿ ಮುಂದರಿಸಬೇಕು.

ಹಿಂದೆ ಪುರಾಣಯುಗದಲ್ಲಿ ಉತ್ತರಭಾರತದಲ್ಲಿ ಕನ್ಯಾಕುಬ್ಜವೆಂಬೊಂದು ಪಟ್ಟಣವು ಸರ್ವಸಂಪತ್ಪರಿಪೂರ್ಣವಾಗಿ, ಭೂಲೋಕದ ಅಮರಾವತಿಯೋ ಎಂಬಂತೆ ಕಂಗೊಳಿಸುತ್ತಿದ್ದಿತು. ಅಲ್ಲಿ ವೇದಶಾಸ್ತ್ರ ಪಾರಂಗತನೂ

---

ಅಂತ್ಯಕಾಲದಲ್ಲಿ ಯಾವ ವಸ್ತುವನ್ನು ದೃಢವಾಗಿ ಸ್ಮರಿಸುತ್ತಾ-ಮನುಷ್ಯನು ದೇಹವನ್ನು ಬಿಡುವನೋ, ಆಯಾ ಸ್ಥಿತಿಯನ್ನೇ ತಪ್ಪದೆ ಹೊಂದುವನು. ಅ. ೮ ಶ್ಲೋ. ೬

* 'ಜಡಭರತ ಮಹರ್ಷಿ' ಈ ಜೀವಿತವು ಗ್ರಂಥಮಾಲೆಯ ೮೫ನೆಯ ಕುಸುಮವಾಗಿ ಪ್ರಕಟವಾಗಿದೆ.

ಸಚ್ಛೀಲ ಸಂಪನ್ನನೂ ಆದ ಬ್ರಾಹ್ಮಣನೊಬ್ಬನು, ತನ್ನ ಧರ್ಮಪತ್ನಿಯೊಡಂದಿಗೆ ವಾಸಮಾಡಿಕೊಂಡಿದ್ದನು. ಆತನು ಸತ್ಯ ಶಾಂತತೆ ವಿನಯ ಪರೋಪಕಾರ ಭೂತದಯೆ ಮುಂತಾದ ದಿವ್ಯ ಗುಣಗಳಿಂದ ಶೋಭಿತನಾಗಿ,-*ಯಜನ ಯಾಜನ ಅಧ್ಯಯನ ಅಧ್ಯಾಪನ, ದಾನ ಪ್ರತಿಗ್ರಹ ಎಂಬ ಷಟ್ಕರ್ಮನಿರತನಾಗಿ, ಶುಚಿರ್ಭೂತನಾಗಿ, ಸಕಲರ ಗೌರವಕ್ಕೂ ಪಾತ್ರನಾಗಿ ಸುಖಿನಾಗಿದ್ದನು. ಹೀಗೆ ಬಹುಕಾಲ ಸಂಸಾರ ಯಾತ್ರೆಯನ್ನು ಸಾಗಿಸಿದಮೇಲೆ ಆತನ ಧರ್ಮಪತ್ನಿಯು ಗರ್ಭಧಾರಣವಾಗಿ ನವಮಾಸಪೂರ್ಣವಾದ ತರುವಾಯ ಒಂದು ದಿನ ಒಂದು ಪುರುಷ ಶಿಶುವನ್ನು ಪ್ರಸವಿಸಿದಳು. ಆ ಶಿಶುವಿಗೆ ಅಜಾಮಿಳನೆಂದು ನಾಮಕರಣವಾಗಿ, ಆ ಬ್ರಾಹ್ಮಣೋತ್ತಮನು ಬಹು ಸಂತೋಷದಿಂದ, ಎಂದಿನಂತೆ ಗೃಹಸ್ಥಧರ್ಮನಿರತನಾಗಿ ಕಾಲಯಾಪನೆ ಮಾಡುತ್ತಿದ್ದನು.

ಶಿಶುತನದಲ್ಲಿ ಅಜಾಮಿಳನು, ತನ್ನ ಸುಸ್ಮಿತಮುಖವಾದ ಎಳೆನೋಟ, ಕಳಕಳೆಯಿಂದ ಪ್ರಕಾಶಮಾನವಾದ - ಮುಗುಳ್ನಗುವಿನಿಂದ ಕೂಡಿದ ಮುದ್ದುಮುಖ, ದುಂಡುದುಂಡಾದ ಮೈಕೈಗಳು, ಇವುಗಳಿಂದ ನೋಡಿದವರಿಗೆ ಆನಂದವನ್ನುಂಟುಮಾಡುತ್ತಾ ಬೆಳೆದನು. ಮುಂದೆ ಬಾಲ್ಯದ ವಿವಿಧ ಆಟಪಾಟಗಳು ತಾಯಿತಂದೆಗಳಿಗೂ ನೆರೆಹೊರೆಯವರಿಗೂ ಕಣ್ಣಿಗೆ ಹಬ್ಬವನ್ನುಂಟುಮಾಡುವುವು. ಅಂಬೆಗಾಲು ತಪ್ಪು ಹೆಜ್ಜೆ ತೊದಲು ಮಾತುಗಳಿಂದ ಬಾಲಕ ಅಜಾಮಿಳನು ಸಕಲರ ಪ್ರೇಮಕ್ಕೂ ಪಾತ್ರನಾಗಿ ದಿನದ ಬೆಳವಣಿಗೆಯನ್ನು ಕ್ಷಣದಲ್ಲಿ ತೋರಿಸುತ್ತಾ, ರೋಗರುಜಿನೆಗಳಿಲ್ಲದೆ, ಪುಷ್ಟ ದೇಹದಿಂದ ತೇಜಸ್ವಿಯಾಗಿ ಬೆಳೆದು ಆರೇಳು ವರ್ಷಗಳ ಬಾಲಕನಾದನು. ತಂದೆಯು ಪರಮನಿಷ್ಠನಾದ ಬ್ರಾಹ್ಮಣನಾದುದರಿಂದ ಸಾವಕಾಶಮಾಡದೆ ಗರ್ಭಾಷ್ಟಮದಲ್ಲೇ ಉಪನಯನ ಕರ್ಮವನ್ನು ನೆರವೇರಿಸಿ ಬ್ರಹ್ಮೋಪದೇಶ ಮಾಡಿ, ತರುವಾಯ ಕ್ರಮವಾಗಿ ವಿದ್ಯಾಭ್ಯಾಸ ಮಾಡಿಸಲಾರಂಭಿಸಿ

---

*ಯಜನ = ಯಾಗವನ್ನು ಸ್ವತಃ ತಾನು ಮಾಡುವಿಕೆ. ಯಾಜನ = ಪರರಿಂದ ಯಾಗ ಮಾಡಿಸುವಿಕೆ. ಅಧ್ಯಯನ = ತಾನು ಗ್ರಂಥಗಳನ್ನು ಅಭ್ಯಾಸ ಮಾಡುವಿಕೆ. ಅಧ್ಯಾಪನ = ಪರರಿಗೆ ಪಾಠ ಹೇಳುವಿಕೆ. ದಾನ = ತಾನು ಪರರಿಗೆ ದ್ರವ್ಯಾದಿ ದಾನಗಳನ್ನು ಕೊಡುವಿಕೆ. ಪ್ರತಿಗ್ರಹ = ಪರರಿಂದ ದ್ರವ್ಯಾದಿಗಳನ್ನು ಸ್ವೀಕರಿಸುವಿಕೆ.

ದನು. ಬಾಲಕನು ತಂದೆಯಿಂದ ಪಡೆದ ಕ್ರಮ ಶಿಕ್ಷಣದಲ್ಲಿ ಕಾವ್ಯ ನಾಟಕ ಅಲಂಕಾರಾದಿ ಶಾಸ್ತ್ರಗಳನ್ನೂ, ನಾಲ್ಕು ವೇದಗಳು ಆರು ಶಾಸ್ತ್ರಗಳು ಪುರಾಣೇತಿಹಾಸಗಳು ಮೊದಲಾದ ಸಮಸ್ತ ವೈದಿಕ ಲೌಕಿಕ ಗ್ರಂಥರಾಶಿಯನ್ನೂ ಅಧ್ಯಯನಮಾಡಿ ಮುಗಿಸಿ ವಿದ್ಯಾನಿಧಿಯಾದನು. ತರ್ಕವೇದಾಂತಾದಿ ವಿಷಯ ಚರ್ಚೆಗಳಲ್ಲಿ ಸಭೆಗಳನ್ನು ಪ್ರವೇಶಿಸಿ, ದಿಗ್ದಂತಿ ಪಂಡಿತರೊಂದಿಗೆ ವಾದಮಾಡಿ ಜಯಶೀಲನಾಗುವಂತಹ ಪ್ರತಿಭೆಯನ್ನು ಗಳಿಸಿದನು. ಸಕಲ ಶಾಸ್ತ್ರಸಾರವನ್ನೂ ಒಳಕೊಂಡು, ಮನೋಹರ ಪದಪುಂಜರಂಜಿತವಾಗಿ-ಸಭಿಕರನ್ನು ತಲೆದೂಗಿಸುವಂತಹ ವಾಕ್ಸರಣಿಯಿಂದ ಉಪನ್ಯಸಿಸುವಂತಹ ಸಾಮರ್ಥ್ಯವನ್ನೂ ಪಡೆದನು. ಹೀಗೆ ಸಿದ್ಧನಾಗಿ ವಂಶ ಗೌರವವನ್ನು ಪಾಲನೆಮಾಡಲು ತಕ್ಕವನಾದ ತನ್ನ ಆ ಏಕಮಾತ್ರ ಪುತ್ರನನ್ನು ನೋಡಿ, ಬ್ರಾಹ್ಮಣೋತ್ತಮನ, ಪರಮ ಸಂತೋಷದಿಂದ 'ಸಂಸಾರವು ದುಃಖಮಯವಾದುದು' ಎಂಬ ವಿಚಾರವೇ ಮರೆತುಹೋಗಲು, ಕೆಲಕಾಲ ಸುಖದಿಂದಿದ್ದನು.

ಅಜಾಮಿಳನು, ತುಂಬು ಯೌವನದಿಂದ ಧೃಷ್ಟ ಪುಷ್ಟ ದೇಹದಿಂದ ತೇಜಸ್ವಿ ನೇತ್ರಗಳಿಂದ, ಸುಂದರ ವದನದಿಂದ ನೋಡಿದವರಿಗೆ ಮನಶ್ಚಾಂಚಲ್ಯವನ್ನುಂಟುಮಾಡುವಂತಹ ದೇಹಸಂಪತ್ತಿಯನ್ನು ಗಳಿಸಿ ಪಿತೃಶುಶ್ರೂಷಾ ನಿರತನಾಗಿದ್ದನು. ತಮ್ಮ ಮಗನಿಗೆ ಪ್ರಾಯ ಬಂದಿತೆಂದು ತಿಳಿದ ಆ ವೃದ್ಧ ದಂಪತಿಗಳು, ಒಂದು ಯೋಗ್ಯ ಕುಟುಂಬದಲ್ಲಿ ಜನಿಸಿದ ಸುಶೀಲಳೂ, ಅನುರೂಪಳೂ ಆದೊಬ್ಬ ಕನ್ಯಾರತ್ನವನ್ನು ತಂದು ವಿವಾಹ ಮಾಡಿದರು. ವಿವಾಹಿತನಾದಮೇಲೂ ಅಜಾಮಿಳನು, ಎಂದಿನಂತೆ, ಸ್ನಾನ ಸಂಧ್ಯಾದಿ ಕರ್ಮನಿಷ್ಠನಾಗಿ ಯಜನ ಯಾಜನಾದಿ ಕಾರ್ಯಗಳಲ್ಲಿ ತನ್ನ ತಂದೆಗೆ ಸಹಾಯಕನಾಗಿ ಸಜ್ಜನ ಶಿರೋಮಣಿಯೆಂದು ಸಕಲರ ಪ್ರಶಂಸೆ ಮಾಡುತ್ತಿರಲು ಸುಖನಾಗಿದ್ದನು. ವಂಶೋದ್ಧಾರಕ ಸಂತಾನವನ್ನು ಪಡೆದು ಧನ್ಯನಾದೆನೆಂದು ಆ ವೃದ್ಧ ಬ್ರಾಹ್ಮಣನು ಕಡುಸಂತುಷ್ಟನಾಗಿದ್ದನು.



## ಅಧ್ಯಾಯ ೨ "ಕಾಮಾಂಧೋ ನೈವಪಶ್ಯತಿ"

ಬ್ರಾಹ್ಮಣೋತ್ತಮನಾದ ಅಜಾಮಿಳನು, ಪ್ರಾಯಸಮರ್ಥನಾಗಿದ್ದರೂ ಹಸುಗೂಸಿನಂತೆ ದಂಭರಹಿತನಾಗಿದ್ದನು. ಸಕಲ ಶಾಸ್ತ್ರಪಾರಂಗತನಾಗಿದ್ದರೂ, ಅಹಂಕಾರ ಮಮಕಾರಗಳನ್ನರಿಯದೆ ಸಾಧು ಸ್ವಭಾವಶೀಲನಾಗಿದ್ದನು. ತಂದೆಯಂತೆಯೇ ಸದಾಚಾರನಿರತನಾಗಿ, ಶಮದಮಾದಿ ಗುಣವಿಶಿಷ್ಟನಾಗಿದ್ದನು. ಬ್ರಹ್ಮಚರ್ಯ ವ್ರತನಿಷ್ಠನಾಗಿ, ಸ್ತ್ರೀಯರ ಮುಖದರ್ಶನ ಮಾಡದೆ, ಲೋಕದಲ್ಲಿನ ಸ್ತ್ರೀಯರೆಲ್ಲರೂ, ಮಾತೆಯರು - ಅಕ್ಕತಂಗಿಯರು ಎಂಬ ಭಾವನೆಯಿಂದ ಬಹು ನಿಯಮಬದ್ಧ ಜೀವನವನ್ನು ಕೈಕೊಂಡಿದ್ದನು. ಮನಸ್ಸನ್ನು ಇಂದ್ರಿಯಾದಿಗಳ ಸೆಳೆತಕ್ಕೆ ಬಿಡದೆ,- ಬಲಶಾಲಿಯಾದ ಸಾರಥಿಯು ತನ್ನ ಸ್ವಾಧೀನದಲ್ಲಿರುವ ಕುದುರೆಗಳ ಕಡಿವಾಣಗಳನ್ನು ಭದ್ರವಾಗಿ ಹಿಡಿದು, ಅವುಗಳನ್ನು ಯುಕ್ತಮಾರ್ಗದಲ್ಲಿ ನಡೆಯಿಸುವಂತೆ,- ಆತನೂ ಬಹು ಜಾಗರೂಕತೆಯಿಂದ ನಡೆಯುತ್ತಾ, ದಿನದಿನಕ್ಕೆ ಇಂದ್ರಿಯ ಜಯವನ್ನು ಸಂಪಾದಿಸುತ್ತಾ ಸಾಗಿದ್ದನು. ಮಹಾ ದಯಾಳುವಾಗಿ, ಪ್ರಾಣಿಮಾತ್ರಕ್ಕೆ ಹಿಂಸೆಯನ್ನುಂಟುಮಾಡದೆ, ದುಃಖಪಡುತ್ತಿದ್ದವರು ಯಾರಾದರೂ ಹಿಂದೆ ಮುಂದೆ ನೋಡದೆ ತನ್ನ ಶಕ್ತಿ ಮೀರಿ ಸಹಾಯ ಮಾಡುತ್ತಿದ್ದನು. ಮಾತುಕಥೆಗಳಲ್ಲೂ ಯಾರ ಮನಸ್ಸನ್ನೂ ನೋಯಿಸದೆ, ಯಾರಿಗೂ ಕೇಡೆಣಿಸದೆ, ಸರ್ವದಾ ಮನಸ್ಸು ವಾಕ್ಕು ಕಾಯಗಳಿಂದಲೂ ಜಗತ್ತಿನ ಸಮಸ್ತ ಪ್ರಾಣಿವರ್ಗದ ಮೇಲ್ಮೆಯನ್ನೇ ಕೋರುತ್ತಾ, ಹಿತವನ್ನೇ ಸಾಧಿಸುತ್ತಾ ಧರ್ಮಮಾರ್ಗತತ್ಪರನಾಗಿದ್ದನು. ಆತನು ಮಿತಭಾಷಿಯಾಗಿದ್ದುದರಿಂದ ಆತನ ಬಾಯಿಂದ ಅನವಶ್ಯಕವಾದ ಭಾಷಣಗಳಾಗಲೀ, ಸುಳ್ಳುಮಾತುಗಳಾಗಲೀ ಎಂದೂ ಹೊರಟುದಿಲ್ಲ. ಸರ್ವಕಾಲದಲ್ಲೂ, ಸರ್ವಭೂತ ಹಿತಸಾಧಕವಾದ ಸತ್ಯವಾದ ಪ್ರಿಯವಾದ ಹಿತವಾದ ಮೃದುಭಾಷಣದಿಂದ ಸರ್ವರ ಮನರಂಜನೆ ಮಾಡುವನು. ಸ್ನಾನಸಂಧ್ಯಾದಿ ವಿಧ್ಯುಕ್ತ ಆಚರಣೆಗಳಿಂದ ಸದಾ ಶುಚಿರ್ಭೂತನಾಗಿ ಆ ಅಜಾಮಿಳನು ಪರಿಪೂರ್ಣ ಯೌವನಾವಸ್ಥೆಯಲ್ಲಿದ್ದರೂ ದಂಭ ಮದ ಮೋಹ ಕಾಮ ಮುಂತಾದ ದುಷ್ಟ ಸಂಗತಿಗಳ ಸುಳಿವಿಲ್ಲದೆ, ಋಷಿ ಸಹಜವಾದ

ಜೀವನದಿಂದ, ನೋಡಿದವರಿಗೆ ಪರಮಾಶ್ಚರ್ಯವನ್ನುಂಟುಮಾಡುತ್ತ, ಮಾತಾಪಿತೃ ಶುಶ್ರೂಷೆಯಲ್ಲಿ ನಿರತನಾಗಿದ್ದನು.

ಮನುಷ್ಯನ ಲೌಕಿಕ ಜೀವಿತ ಯಾತ್ರೆಯು ಒಂದು ವಿಚಿತ್ರ ಕ್ರಮವನ್ನು ಅನುಸರಿಸಿ ಸಾಗುತ್ತಿರುವಂತೆ ತೋರುವುದು. ಮನುಷ್ಯನು, ಗೊತ್ತಾದ ಒಂದು ಪ್ರಮಾಣದಲ್ಲಿ ಸ್ವಾತಂತ್ರ್ಯವನ್ನು ಹೊಂದಿ, ಅದನ್ನು ತನ್ನ ಪುರುಷ ಪ್ರಯತ್ನದಲ್ಲಿ ಉಪಯೋಗಿಸಿ ಹಲವುವೇಳೆ ಅಗಾಧ ಕಾರ್ಯ ಸಾಧನೆ ಮಾಡುತ್ತಿರುವಂತೆ ನಮಗೆ ಕಾಣುತ್ತಿದ್ದರೂ, ಅವನು ಅನೇಕ ಸಂದರ್ಭಗಳಲ್ಲಿ, ತನ್ನ ಪುರುಷ ಪ್ರಯತ್ನ ಆಶಯ-ಯೋಜನೆಗಳಿಗೆ ಲೇಶ ಮಾತ್ರವೂ ಸಂಬಂಧವಿಲ್ಲದ ಪರಿಸ್ಥಿತಿಗಳ ಮಧ್ಯೆ ಸಿಕ್ಕಿ ಬೀಳಬೇಕಾಗುವುದು. ಆ ಸಂದರ್ಭದಲ್ಲಿ ಆತನು ಎಷ್ಟು ಬುದ್ಧಿಶಾಲಿಯಾಗಿದ್ದರೂ, ಕರ್ತೃತ್ವ ಶಾಲಿಯಾಗಿದ್ದರೂ, ಆತನ ಪ್ರಯತ್ನಗಳಿಂದೂ ಸಾಗದೆ, ಅವಶನಾಗಿ-ಅಗಾಧ ಪ್ರವಾಹದಲ್ಲಿ ತೇಲಿಕೊಂಡು ಹೋಗುತ್ತಿರುವವನಂತೆಯೂ - ಯಾವುದೋ ಒಂದು ಅದೃಶ್ಯ ಶಕ್ತಿಯಿಂದ ಸೆಳೆಯಲ್ಪಟ್ಟು ಹೋಗುತ್ತಿರುವವನಂತೆಯೂ ತೋರುವನು. ಇದು ಕೇವಲ ವರ್ಣನೆ ಮಾತ್ರವಲ್ಲ. ನಮ್ಮ ಇಷ್ಟವಿಲ್ಲದಿದ್ದರೂ, ಅನೇಕ ವೇಳೆ ನಮ್ಮ ಇಚ್ಛೆಗೆ ವಿರುದ್ಧವಾದ ಹಲವು ಕಾರ್ಯಗಳನ್ನು ನಮ್ಮಿಂದ ಬಲವಂತವಾಗಿಯೇ ಮಾಡಿಸಿಬಿಡುವಂತಹ ಸಂಭವಗಳು ನಮ್ಮ ಜೀವಿತಗಳಲ್ಲಿ ಪ್ರಾಪ್ತವಾದುದು ಸಕಲರ ಅನುಭವಕ್ಕೂ ಒಂದಲ್ಲ - ಒಂದು ಕಾಲದಲ್ಲಿ ಬಂದಿರಬಹುದು. ಈ ಸಂಭವಕ್ಕೆ ಕಾರಣವೂ ಇಲ್ಲವೆಂದಲ್ಲ; ಇದೆ. ಆದರೆ ಅದನ್ನು ಸಾವಧಾನ ಚಿತ್ತದಿಂದ ವಿಮರ್ಶಿಸಬೇಕಾಗಿದೆ ಮಾತ್ರ!

ಹಿಂದೆ ಒಂದೆಡೆಯಲ್ಲಿ— 'ನಮ್ಮ ಮುಂದಿನ ಜೀವನವು, ಇಹಜನ್ಮದಲ್ಲಿ ನಮ್ಮಲ್ಲುಂಟಾಗುವ ಯೋಚನೆ ಆಶಯ ವಾಸನೆಗಳನ್ನು ಅನುಸರಿಸಿ ಏರ್ಪಡುತ್ತವೆ' ಎಂದು ಹೇಳಿದ್ದೇವಲ್ಲವೆ! ಹೀಗೆ ಮುಂದಿನ ಜನ್ಮದಲ್ಲಿ ನಮಗುಂಟಾಗುವ ಜನನ ಜೀವನಸ್ಥಿತಿಗಳಿಗೆ ಈ ಜನ್ಮದ ಆಶಯ ವಾಸನೆಗಳು ಬೀಜರೂಪವಾಗುವಂತೆಯೇ, ನಮ್ಮ ಈ ಜನ್ಮದ ಸ್ಥಿತಿಗತಿಗಳಿಗೂ ಹಿಂದಿನ ಜನ್ಮದಲ್ಲಿ ನಮ್ಮ ಮನಸ್ಸಿನಲ್ಲುಂಟಾದ ಯೋಚನೆ ಆಶಯ ವಾಸನೆಗಳೇ ಕಾರಣಗಳಾಗಿರುವುವು.—ಯಾವ ಆಶಯವು, ಯಾವ ಯೋಚನೆಯು ಅತ್ಯಂತ

ತೀವ್ರವಾಗಿದ್ದು, ನಮ್ಮ ಮನಸ್ಸಿನಮೇಲೆ ಸರ್ವಾಧಿಪತ್ಯವನ್ನೂ ಮಾಡು ತ್ತಿರುವುದೋ ಅದನ್ನನುಸರಿಸಿಯೇ ಈ ಜೀವನವು ಸಾಗುತ್ತಿರುವುದು. ಒಬ್ಬನು. ಅಧಿಕ ಧನ ಸಂಗ್ರಹಣದಲ್ಲೇ ತೀವ್ರವಾದ ಯೋಚನೆ ಮಾಡು ತ್ತಿರುವನೆಂದು ಭಾವಿಸೋಣ. ಅದೇ ಯೋಚನೆಯೇ ಅವನ ಜನ್ಮಾಂತ್ಯದ ವರೆಗೂ ಅವನನ್ನು ಎಡೆಬಿಡದೆ ಸಾಗಿಬಂದು ಮರಣ ಕಾಲದಲ್ಲಿ ಸಹ ಅವನು, 'ಹಣ ಹಣ, ದ್ರವ್ಯ ದ್ರವ್ಯ' ಎಂಬ ಹಂಬಲನ್ನು ಬಿಡಲಾರದೆ,— 'ಅಯ್ಯೋ ನನ್ನಜನ್ಮವು ವ್ಯರ್ಥವಾಯಿತಲ್ಲಾ, ನನ್ನ ಮನಸಾರೆ ದ್ರವ್ಯಸಂಪಾ ದನೆ ಮಾಡಿ ನೋಡಿ ಸಂತೋಷಪಡಲಿಲ್ಲವಲ್ಲಾ' ಎಂಬ ಯೋಚನೆಯಲ್ಲೇ ಮಗ್ನನಾಗಿ ಪ್ರಾಣ ಬಿಡುವನು. ಹೀಗೆ ಅದೇ ಯೋಚನೆಯಿಂದ ಇದ್ದ ಅವನಿಗೆ, ಮರಣವಾಗಿ ಪುನಃ ಜನ್ಮಪ್ರಾಪ್ತವಾಗುವ ಸ್ಥಿತಿಯುಂಟಾದಾಗ ಅವನು, ವಿಶೇಷ ಧನ ಸಂಗ್ರಹಣ ಮಾಡಲು ಸಾಧಕವಾದ ಪರಿಸ್ಥಿತಿಯು ಳ್ಳವರ ವಂಶದಲ್ಲೇ ಜನ್ಮಗ್ರಹಣ ಮಾಡುವನು. ಹಾಗೂ ಮಿತಿಯಿಲ್ಲದಷ್ಟು ಧನವನ್ನು ಗಳಿಸುವನು. ಆದರೇನು! ಅವನ ಆಸೆಯೆಲ್ಲವೂ ಧನಸಂಗ್ರಹಣ ಮಾಡಬೇಕೆಂಬುದರಲ್ಲಿದ್ದಿತಲ್ಲದೆ ಅದರಿಂದ ಸುಖಪಡಬೇಕೆಂಬುದಾಗಲೀ, ದಾನ ಧರ್ಮ ಪರೋಪಕಾರಾದಿಗಳನ್ನು ಮಾಡಿ ಜನ್ಮಸಾರ್ಥಕ ಮಾಡಿಕೊಳ್ಳ ಬೇಕೆಂಬುದಾಗಲೀ ಅಲ್ಲವಾದುದರಿಂದ, ಅವನು ಅಗಾಧ ಪರಿಶ್ರಮಪಟ್ಟು ಅನ್ನನೀರುಗಳನ್ನೂ ಕಾಣದೆ ದುಡಿದು, ಹೊಟ್ಟೆಬಟ್ಟೆಗಳನ್ನು ಅರಿಸದೆ-ಧನ ವನ್ನೇನೋ ಸಂಗ್ರಹಿಸುವನು. ಅವನಿಗೆ ಅಷ್ಟುಮಾತ್ರವೇ ಪ್ರಾಪ್ತಿಯುಂಟು. ಅದರ ಅನುಭವವಲ್ಲ.—ಇನ್ನೊಬ್ಬನು, ಇವನಂತೆ ಧನಸಂಗ್ರಹಣ ಮಾಡ ಬೇಕೆಂದು ಇಚ್ಛಿಸಿರುವುದಿಲ್ಲ - ಆದರೆ ಅಗಾಧ ಸುಖಸಂತೋಷಗಳನ್ನು ಅನುಭವಿಸಬೇಕೆಂಬುದು ಅವನ ತೀವ್ರ ಆಶಯ. ಅದೂ ಪೂರ್ಣವಾಗ ಬೇಕಷ್ಟೆ! ಅದಕ್ಕೆ ತಕ್ಕಂತೆಯೇ, ಅವನು ಕ್ಷುದ್ರ ದಾರಿದ್ರ್ಯಾವಸ್ಥೆಯಲ್ಲಿ ಜನ್ಮವೆತ್ತಿದ್ದರೂ, ಏನೋ ಒಂದು ಪರಿಸ್ಥಿತಿಯೊದಗಿಬಂದು ಅವನು ಇಂದ್ರಭೋಗಗಳಿಗೆ ಸಮಾನವಾದ ಸುಖಸಂತೋಷಗಳನ್ನು ಅನುಭವಿಸು ವನು. ನಾಟಕಾದಿಗಳಲ್ಲಿ ರಾಜತ್ವವೇ ಮುಂತಾದ ಪದವಿಗಳನ್ನು ಪಡೆವವರ ಜೀವಿತಗಳನ್ನು ಇದಕ್ಕೆ ಹೋಲಿಸಬಹುದು. ಹಾಗಲ್ಲದೆ, ಕೇವಲ ಆಶಯ ಮಾತ್ರವಲ್ಲ - ತೀವ್ರವಾದ ಯೋಚನೆ ವಾಸನೆಗಳಿಂದ ಕೂಡಿದ್ದವರಾದರೆ,

ಅಂಥವರು ನಿಜವಾಗಿಯೂ ಹಲವು ಸುಖಸಂತೋಷಗಳಿಗೆ ಭಾಗಿಗಳಾಗಿಯೇ ಆಗುವರು. ಇನ್ನು ಕೆಲವರು ನಿರ್ಧನರಾಗಿ ಜನ್ಮಿಸಿ, ನಿತ್ಯಜೀವಿತಕ್ಕೇ ಬಹು ಕಷ್ಟಪಡುತ್ತಿರುವರಾದರೂ ಅವರಿಂದ ಅಗಾಧ ಅನ್ನದಾನ ವಸ್ತ್ರದಾನ ಪರೋಪಕಾರದ ಕಾರ್ಯಗಳು ನಡೆದುಹೋಗುವುವು. ಮತ್ತೆ ಕೆಲವರು ವಿಶೇಷ ಧನಧಾನ್ಯ ಸಮೃದ್ಧಿಯುಳ್ಳವರಾಗಿದ್ದರೂ ಅವರ ಧನಧಾನ್ಯಗಳು ಅವರಿಗೂ ಪ್ರಯೋಜನವಿಲ್ಲದೆ ಪರೋಪಕಾರಕ್ಕೂ ಉಪಯೋಗವಾಗದೆ ಅರಣ್ಯದಲ್ಲಿ ಬಿದ್ದ ಬೆಳದಿಂಗಳಂತೆ ವ್ಯರ್ಥವಾಗುವುವು. ಕೆಲವರು ಅಗಾಧ ವಿದ್ಯಾವಂತರಾಗಿರುವರು. ಅವರು ಜನ್ಮಾಂತರದಲ್ಲಿ ತೀವ್ರವಾದ ಯೋಚನೆಯಿಂದ ಬಯಸಿಕೊಂಡಿದ್ದುದಷ್ಟೆ! ಆ ತೀವ್ರವಾದ ವಾಸನಾಪೀಡಿತವಾದ ಬುದ್ಧಿಯು, ಅದಕ್ಕೆ ತಕ್ಕಂತೆಯೇ ಅವರಿಗೆ ವಿದ್ಯಾಸಂಪತ್ತನ್ನು ಉಂಟುಮಾಡಿತು. ಆದರೇನು? ಅದು ಸರ್ಪದ ಹೆಡೆಯಲ್ಲಿನ ಮಣಿಯಂತೆ ಅವರಿಗೇನೋ ಒಂದು ಬಗೆಯಿಂದ ಭೂಷಣವಾಗಿದೆ ಮಾತ್ರ! ಆದರಿಂದ ಲೋಕಕ್ಕೊಂದು ಪ್ರಯೋಜನವಿಲ್ಲ. ಮಾತ್ರವಲ್ಲ! ಅನೇಕ ಸಂದರ್ಭಗಳಲ್ಲಿ ಅವರ ವಿದ್ಯೆಯು ಪರರಿಗೆ ಉಪದ್ರವಕಾರಿಯೂ ಭಯಪ್ರದವೂ ಆಗಿರುವುದು. ಇಂತಹ ಅನೇಕಾನೇಕ ಪರಿಸ್ಥಿತಿಗಳು ಪ್ರಪಂಚದಲ್ಲುಂಟು. ಅವೆಲ್ಲವೂ ಏನೋ ಹೇಗೋ ಅಕಾರಣವಾಗಿ ಇವೆಯೆಂದು ತಿಳಿಯಬಾರದು. ಒಂದೊಂದಕ್ಕೂ ಕಾರಣವುಂಟು. ಸೂಕ್ಷ್ಮವಾಗಿ ವಿಚಾರಮಾಡಿ ನೋಡಿದರೆ, ಅವು ಅವನವನ ಜನ್ಮಾಂತರಾರ್ಜಿತ ವಾಸನಾಬಲದಿಂದ ಪ್ರೇರಿತವಾದುವೆಂದು ಕಂಡುಬಾರದಿರವು. ಹಾಗಲ್ಲದಿದ್ದರೆ ಜೇರೊಬ್ಬನು, ಅದನ್ನು ಪರಿಹರಿಸಲು ಸಾಧ್ಯವಾಗುವುದಿಲ್ಲವೇಕೆ? ಅವನಿಗೇ ತನ್ನ ಆಚರಣೆಯ ಕೆಲವು ಸಂಗತಿಗಳು ತಪ್ಪೆಂದು ತೋರಿದರೂ ಅವನು ಅದನ್ನು ಬಿಡಲು ಶಕ್ತನಾಗುವುದಿಲ್ಲವೇಕೆ? —

ಬ್ರಾಹ್ಮಣೋತ್ತಮನಾದ ಅಜಾಮಿಳನು, ನಿತ್ಯವೂ ಬ್ರಾಹ್ಮೀ ಮುಹೂರ್ತಕ್ಕೆ ಸರಿಯಾಗಿ ಹಾಸಿಗೆಯಿಂದೆದ್ದು, ಶೀತೋದಕದಲ್ಲಿ ಸ್ನಾನಮಾಡಿ, ಸಂಧ್ಯಾವಂದನಾದಿ ವಿಧ್ಯುಕ್ತ ಕ್ರಿಯೆಗಳನ್ನು ತೀರಿಸಿಕೊಂಡು, ತರುವಾಯ ತನ್ನ ತಂದೆಯ ದೇವತಾರ್ಚನೆಗಾಗಿ ತುಲಸೀ ಪುಷ್ಪಾದಿಗಳನ್ನು ತಂದಿತ್ತು, ತರುವಾಯ ಕೆಲಕಾಲ ಗ್ರಂಥವ್ಯಾಸಂಗಮಾಡಿ, ಅಮೇಲೆ ಗೃಹಕೃತ್ಯ

ವನ್ನು ಗಮನಿಸಿ, ಅತಿಥಿ ಅಭ್ಯಾಗತರ ಸೇವೆ ಮಾಡಿ, ಎಲ್ಲರೊಂದಿಗೆ ಶುದ್ಧಾನ್ನ ಭೋಜನ ಮಾಡುವನು. ಮಧ್ಯಾಹ್ನದಲ್ಲಿ ಪುರಾಣ ಪುಣ್ಯ ಕಥಾ ವರ್ಣನೆಯಿಂದ ಹಲವರಿಗೆ ಧರ್ಮಬೋಧೆ ಮಾಡುತ್ತ, ಹೀಗೆ ಸದಾ ಸದ್ವ್ಯಾಸಂಗದಲ್ಲೇ ಕಾಲಯಾಪನೆ ಮಾಡುವನು. ಈ ಪ್ರಕಾರವಾಗಿ ಬಹಳ ಕಾಲ ನಡೆದು ಬಂತು. ಅಜಾಮಿಳನು ಇಪ್ಪತ್ತು-ಇಪ್ಪತ್ತೆರಡು ವಯಸ್ಸಿನ ತುಂಬುಪ್ರಾಯದವನಾದನು. ಆಗಲೊಂದು ದಿನ ಭೋಜನೋತ್ತರದಲ್ಲಿ ಆತನು, ಸಮಿತ್ತು ಕುಶಾದಿಗಳನ್ನು ತರಬೇಕೆಂದು ತನ್ನ ತಂದೆಯಿಂದ ಆಜ್ಞಪ್ತನಾಗಿ ವನಕ್ಕೆ ಹೊರಟನು.

ವನದಲ್ಲಿ ಸ್ವಲ್ಪ ಹೊತ್ತು ಸಂಚಾರಮಾಡಿ ಆ ಪದಾರ್ಥಗಳನ್ನು ಸಂಗ್ರಹ ಮಾಡಿಕೊಂಡು, ಅಲ್ಲಿಂದ ಹಿಂದಿರುಗಿ ಗೃಹಾಭಿಮುಖನಾಗಿ ಹೊರಟನು. ಅಷ್ಟರಲ್ಲಿ ಅವನ ಪ್ರಾರಬ್ಧ ಕರ್ಮಶೇಷವೇ ಮೂರ್ತೀಭವಿಸಿ ಬಂದಿತೋ ಎಂಬಂತೆ ಅದೊಂದು ಸಂಭವವೊದಗಿತು. ಆ ಕಾಡಿನಲ್ಲಿ ಮದ್ಯಪಾನಮತ್ತನಾದ ಶೂದ್ರನೊಬ್ಬನು, ಕಾಮಾಂಧನಾಗಿ ತನ್ನ ಪ್ರೇಯಸಿಯಾದ ಶೂದ್ರಸ್ತ್ರೀಯೊಡನೆ ತಿರುಗುತ್ತಿದ್ದುದನ್ನು ಅಜಾಮಿಳನು ಕಂಡನು. ಅವನು ಮಿತಿಮೀರಿ ಮಧುಪಾನ ಮಾಡಿದ್ದುದರಿಂದ ದೇಹದಮೇಲೆ ಸ್ಮೃತಿ ತಪ್ಪಿತ್ತು. ಕಣ್ಣುಗಳು ಕೆಂಪಾಗಿ ಭಯಂಕರವಾಗಿ ತೋರುತ್ತಿದ್ದುವು. ದೃಢವಾಗಿ ಹೆಜ್ಜೆಯಿಟ್ಟು ನಡೆಯಲೂ ಸಾಧ್ಯವಿಲ್ಲದೆ, ಅವನು ಓಲಾಡುತ್ತಾ, ಆಗಾಗ ಏಳುತ್ತಾ ಬೀಳುತ್ತಾ, ಮನಸ್ಸಿಗೆ ತೋರಿದಂತೆ ಅಭದ್ರ ನುಡಿಗಳನ್ನು ಬಾಯಿಂದ ನುಡಿಯುತ್ತ, ನಡೆದು ಬರುತ್ತಿದ್ದನು. ಅವನ ಉಪಪತ್ನಿಯಾದ ಆ ಶೂದ್ರಸ್ತ್ರೀಯೂ ಸಹ ಅವನಂತೆಯೇ ಮಿತಿಮೀರಿ ಮದ್ಯಪಾನ ಮಾಡಿದ್ದುದರಿಂದ ದೇಹದಮೇಲೆ ಗಮನವೇ ಇಲ್ಲದೆ, ಲಜ್ಜಾವಿಹೀನಳಾಗಿ, ಜಾರಿ ಹೋಗುತ್ತಿದ್ದ ಎದೆಯ ಮೇಲಿನ ಮತ್ತು ಮೈಮೇಲಿನ ಬಟ್ಟೆಯನ್ನು, ಪುನಃ ದೇಹದಮೇಲೆ ಧರಿಸಿಕೊಳ್ಳಬೇಕೆಂಬಷ್ಟು ಪ್ರಜ್ಞೆಯೂ ಇಲ್ಲದೆ, ವಿಕಾರ ಸ್ವರದಿಂದ ಏನೋ ಹಾಡಿಕೊಳ್ಳುತ್ತ, ಆಗಾಗ ತನ್ನ ಉಪಪತಿಯಾದ ಆ ಶೂದ್ರನನ್ನು ಸಮೀಪಿಸಿ, ಅವನಮೇಲೆ ಬೀಳುತ್ತಿದ್ದಳು. ಮೊದಲೇ ಕಾಮಾಂಧನಾಗಿದ್ದ ಅವನನ್ನು ಕೇಳುವುದೇನು? ಹಾಗೆ ಲಜ್ಜಾಹೀನಳಾಗಿ ಬಂದು ಮೇಲೆ ಬೀಳುತ್ತಿದ್ದ ಆ ಸ್ತ್ರೀಯಳನ್ನು

ಅವನು ಎರಡು ಕೈಗಳಿಂದಲೂ ಬಾಚಿ ತಬ್ಬಿಕೊಳ್ಳುವನು. ಮದೋನ್ಮತ್ತತೆಯಿಂದ ಗಾಢಾಲಿಂಗನ ಮಾಡಿಕೊಳ್ಳುವನು. ಮುಖಕ್ಕೆ ಮುಖವಿಕ್ಕಿ ಮುತ್ತಿಡುವನು. ಆ ಮಧ್ಯೆ ಕಳಚಿ ಹೋಗುತ್ತಿದ್ದ ತನ್ನ ಉಟ್ಟ ವಸ್ತ್ರದ ಮೇಲೂ ಗಮನವಿಲ್ಲದೆ ಆ ಕಾಮಾಂಧನು, ಗ್ರಾಮ್ಯಪಶುವೋ ಎಂಬಂತೆ ತನ್ನಾ ಸ್ತ್ರೀಯೊಂದಿಗೆ ಆ ಬಹಿರಂಗ ಸ್ಥಳದಲ್ಲೇ ಶ್ವಾನಗಾರ್ದಭಾದಿಗಳಂತೆ ಕ್ರೀಡಿಸಲಾರಂಭಿಸಿದನು. ಆ ಮಾರ್ಗವಾಗಿಯೇ, ಸಮಿತ್ಪುಷ್ಪಾದಿಗಳನ್ನು ಹೊತ್ತು ನಡೆದು ಬರುತ್ತಿದ್ದ ಅಜಾಮಿಳನು, ಈ ವಿಚಿತ್ರ ಸ್ಥಿತಿಯನ್ನು ಅಕಸ್ಮಾತ್ತಾಗಿ ನೋಡಿಬಿಟ್ಟನು. ಕೇವಲ ಸಾತ್ವಿಕನೂ ಬ್ರಹ್ಮಚರ್ಯ ವ್ರತನಿಷ್ಠನೂ ಜಿತೇಂದ್ರಿಯನೂ ಆಗಿದ್ದ ಆ ನವ್ಯಸ್ನಾತಕನ ಕಣ್ಣಿಗೆ ಆ ವಿಚಿತ್ರದೃಶ್ಯವು ಗೋಚರವಾದುದೊಂದೇ ಸಾವಕಾಶವು. ಅದಾವ ಜನ್ಮದ ಪಾಪಶೇಷವೋ! ಮತ್ತೆ ದೃಷ್ಟಿಯನ್ನು ಅಲ್ಲಿಂದ ಕೀಳಲು ಅವನಿಗೆ ಶಕ್ಯವಾಗಲಿಲ್ಲ. ಅವನಿಗೆ ವಿಷಯೇಂದ್ರಿಯಾದಿಗಳ ಸ್ವೇಚ್ಛಾಪ್ರವರ್ತನೆಗೆ ಲೇಶಮಾತ್ರವೂ ಎಡೆಗೊಡದೆ ರಕ್ಷಿಸಿಕೊಂಡು ಬಂದ ಆತನಿಗೆ ಆ ದುಷ್ಟವಸ್ತುವಿನ ಸಂಗವು ಕಣ್ಣಿಗೆ ಬಿದ್ದೊಡನೆಯೇ, ಅದು ಆತನ ಚಿತ್ತವನ್ನು ಅಪಹಾರಮಾಡಿ, ಆ ಕಡೆಗೆ ಎಳೆಯಿತು. ಮಹಾ ಶಾಸ್ತ್ರಜ್ಞನಾದ ಆತನಿಗೆ ಆ ಅಸತ್ಪ್ರವರ್ತನೆಯು ಪಾಪಕಾರಿಯೆಂಬ ಸಂಪೂರ್ಣ ಪರಿಜ್ಞಾನವಿದ್ದರೂ, 'ಬುದ್ಧಿಃ ಕರ್ಮಾನುಸಾರಿಣೀ' ಎಂಬ ಪ್ರಾಜ್ಞವಚನಾನುಸಾರವಾಗಿ, ಆ ಯೋಚನೆಯನ್ನು ತಪ್ಪಿಸಿ ತನ್ನ ಚಿತ್ತವೃತ್ತಿಯನ್ನು ಬೇರೆಡೆಗೆ ತಿರುಗಿಸಲು ಅಸಮರ್ಥನಾದನು. ಗುರುಮುಖದಿಂದ ತಾನು ಕೇಳಿದ್ದ ಹಲವು ನೀತಿವಾಕ್ಯಗಳೂ, ವೈರಾಗ್ಯಪರ ವಚನಗಳೂ ಸ್ಮೃತಿಪಥಕ್ಕೆ ಬರುತ್ತಿದ್ದುವಾದರೂ, ಕಾಮಪೀಡಿತವಾದ ಆ ಮನಸ್ಸು ಅವುಗಳಿಗೊಂದಿಷ್ಟೂ ಆಸ್ಪದ ಕೊಡದೆ, ಸಮಸ್ತ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನೂ ತನ್ನ ಹಿಡಿತದಲ್ಲಿ ತೆಗೆದುಕೊಂಡು ಆ ಬಡ ಅಜಾಮಿಳನನ್ನು ಸೂತ್ರದ ಬೊಂಬೆಯಂತೆ ಮಾಡಿ ಕುಣಿಸಲಾರಂಭಿಸಿಬಿಟ್ಟಿತು. ಅಜಾಮಿಳನು ತನ್ನನ್ನು ತಾನು ಸಂಪೂರ್ಣ ಮರೆತುಬಿಟ್ಟನು. ತನ್ನ ಸತ್ಕುಲಪ್ರಸೂತಳಾದ ಸ್ವರೂಪಿ ಭಾರ್ಯೆಯು ಅವನಿಗೆ ಸ್ಮರಣೆಗೆ ಬರಲಿಲ್ಲ. ಮಹಾನಿಷ್ಠನೂ, ವಿಪ್ರಶ್ರೇಷ್ಠನೂ ಆದ ತನ್ನ ತಂದೆಯ ಜ್ಞಾಪಕ ಬರಲಿಲ್ಲ.

ಮಹಾ ಪತಿವ್ರತೆಯೂ ವೃದ್ಧಳೂ ಆದ ತನ್ನ ಪ್ರಿಯ ಮಾತೃವಿನ ನೆನಹುಂಟಾಗಲಿಲ್ಲ. ಬ್ರಾಹ್ಮಣನಾಗಿ ಜನಿಸಿ ವೇದಶಾಸ್ತ್ರಾಧ್ಯಯನ ಮಾಡಿದ ಸದಾಚಾರಶೀಲನಾದ ತನ್ನ ಆವರೆಗಿನ ಆಚರಣೆಯೂ, ಉತ್ತಮ ವಂಶೀಯನಾದ ತನ್ನ ವಂಶಗೌರವ ಕುಲಗೌರವಗಳೂ ಮರೆತುಹೋದುವು. ತಾನು ಪ್ರತ್ಯಕ್ಷ ಕಣ್ಣಿಂದ ನೋಡಿದ ಆ ಶೂದ್ರ ದಂಪತಿಗಳ ಪಶುಕ್ರೀಡೆಯ ಕ್ಷಣಮಾತ್ರದ ದರ್ಶನವು, ಅವನ ಆದ್ಯಂತ ಜೀವಿತವನ್ನೇ ತಲೆಕೆಳಗಾಗುವಂತೆ ಮಾಡಿಬಿಟ್ಟಿತು. ದುಷ್ಟ ಸಾಂಗತ್ಯದಿಂದ ಇದಕ್ಕಿಂತಲೂ ಅಧಿಕವಾಗಿ ಪ್ರಾಪ್ತವಾಗುವ ಕೇಡು ಲೋಕದಲ್ಲುಂಟೆ ? —

ಇಷ್ಟಾದುದೊಂದೇ ಸಾವಕಾಶವು! ಮುಂದೆ ಅಜಾಮಿಳನ ಸ್ಥಿತಿಯು ಬಹು ಶೋಚನೀಯವಾಗಿ ಪರಿಣಮಿಸಿತು. ಆ ಶೂದ್ರಿತಿಯಾದರೂ ತಕ್ಕಷ್ಟು ಮಟ್ಟಿಗೆ ಸ್ಫುರದ್ರೂಪಿಯೇ ಆಗಿದ್ದಳು. ಆ ಸ್ತ್ರೀಯಲ್ಲೇ ನಟ್ಟಮನಸ್ಸುಳ್ಳವನಾಗಿ, ಅವರಿಬ್ಬರೂ ಒಬ್ಬರನ್ನೊಬ್ಬರು ಅಗಲಿದ ತರುವಾಯ, ಅವಳ ಅನುಗ್ರಹ ಸಂಪಾದನೆ ಮಾಡಬೇಕೆಂದು ಯೋಚಿಸಿಕೊಂಡು ಸಮೀಪದಲ್ಲೇ ಇದ್ದ ಒಂದು ತೊರೆಯ ಬಳಿ ಕಾದಿದ್ದನು. ಇತ್ತ ಸ್ವಲ್ಪ ಹೊತ್ತಿನ ಮೇಲೆ ತಮ್ಮ ಕಾಮಕ್ರೀಡೆಯು ತೀರಿ ಮದ್ಯಪಾನ ಸಂಬಂಧವಾದ ಮದೋನ್ಮತ್ತತೆಯೂ ಇಳಿಯಲು, ಆ ಶೂದ್ರ ಮಿಥುನವು ಬೇರೆಬೇರೆಯಾಗಿ ತಮ್ಮ ಮಾರ್ಗವನ್ನನುಸರಿಸಿ ಹೊರಟು ನಡೆದರು. ಅವರಿಬ್ಬರಲ್ಲಿ ಆ ಸ್ತ್ರೀಯಳು ಕಾಲಕರ್ಮ ಯೋಗವು ಸೇರಿ ಬರಲು, ಆ ಬ್ರಾಹ್ಮಣ ಯುವಕನು ಕಾದಿದ್ದ ನದಿಯ ಬಳಿಗೇ ಬಂದಳು. ಅವಳನ್ನು ಕಂಡೊಡನೆಯೇ, ಅಜಾಮಿಳನು ಮುಕ್ತಿಕಾಂತೆಯೇ ಹಸ್ತಗತಳಾದಳೋ ಎಂಬಷ್ಟು ಮಟ್ಟಿನ ಆನಂದೋದ್ರೇಕದಿಂದ ಮುಂದರಿದು ಹೋಗಿ, ಮಂದಸ್ಮಿತ ಮುಖಾರವಿಂದದಿಂದ ಆಕೆಯ ಎದುರಿಗೆ ಎರಡು ಹಸ್ತಗಳನ್ನೂ ಚಾಚಿಕೊಂಡು, ಅಂಗಲಾಚಿಗೊಳ್ಳುವ ಭಾವ ಭಂಗಿಯಿಂದ-'ಎಲೌ ಸುಂದರಾಂಗೀ, ನಿನ್ನ ಈ ರೂಪೂ, ಯೌವನವೂ ನನ್ನನ್ನು ಸಂಪೂರ್ಣವಾಗಿ ಮೋಹಗೊಳಿಸಿಬಿಟ್ಟಿವೆ. ನಾನು ನಿನ್ನಲ್ಲಿ ಸಂಪೂರ್ಣವಾಗಿ ಅನುರಕ್ತನಾಗಿದ್ದೇನೆ. ನನ್ನನ್ನು ವರಿಸಿ ಕಾಪಾಡು. ನೀನು ದಯೆಮಾಡಿ ಈ ದೀನನಿಗೆ ನಿನ್ನ ಹೃದಯದಲ್ಲಿ ಆಶ್ರಯಕೊಡದೆ ಇದ್ದರೆ ನನ್ನ ಪ್ರಾಣಗಳು ಉಳಿಯುವಂತಿಲ್ಲ" ಎಂದು

ಬೇಡಿಕೊಂಡನು. ಮಹಾತೇಜಸ್ವಿಯೂ ಸಲ್ಲಕ್ಷಣ ಸಂಪನ್ನನೂ ಆದ ಬ್ರಾಹ್ಮಣನು ಆ ರೀತಿ ತನ್ನನ್ನು ಪ್ರಾರ್ಥಿಸುತ್ತಿದ್ದುದನ್ನು ಕಂಡ ಆ ಸ್ತ್ರೀಯು ಗಾಬರಿಗೊಂಡವಳಾಗಿ, ಹಿಂದು ಹಿಂದಕ್ಕೆ ಸರಿಯುತ್ತಾ ನಡೆದು,-'ಸ್ವಾಮಿಾ, ಇದೇನನ್ಯಾಯ? ತಾವು ಬ್ರಾಹ್ಮಣರಲ್ಲವೆ? ಮಹಾ ಪರಿಶುದ್ಧರಾದ ತಾವು ನೀಚಕುಲಸ್ಥಳಾದ ನನ್ನನ್ನು ಇಚ್ಛಿಸುವುದು ನ್ಯಾಯವೇ? ಬೇಡ, ಬೇಡ' ಎಂದು ಎಷ್ಟೋಬಗೆಯಿಂದ ಹೇಳಿ ತಡೆಯಲು ಯತ್ನಿಸಿದಳು. ಆದರೆ ಆಕೆಯ ಉಪದೇಶಗಳಲ್ಲೊಂದೂ ಆತನ ತಲೆಗೆ ಏರಲಿಲ್ಲ. ಮನ್ಮಥ ಪಿಶಾಚಾವೇಶಿತನಾದ ಅವನಿಗೆ ಯುಕ್ತಾಯುಕ್ತ ಪರಿಜ್ಞಾನವು ಶುದ್ಧವಾಗಿ ಲೋಪಿಸಿಹೋಗಿದ್ದುದರಿಂದ, ತನ್ನ ಇಷ್ಟಾರ್ಥವನ್ನು ಕಾಣೇನೆಂದು ಆಕೆಯ ಪಾದಗಳಿಗೆ ಅಡ್ಡಬೀಳುವುದೂ ಅನುಚಿತವೆನ್ನಿಸಲಿಲ್ಲ. ಅವನಿಗೆ ತನ್ನಲ್ಲಿ ಖಂಡಿತವಾದ-ಗಾಢವಾದ ಅನುರಾಗವು ಉಂಟಾಗಿರುವುದು ಎಂಬುದನ್ನು ತಿಳಿದ ಮೇಲೆ ಆ ಶೂದ್ರಿತಿಯು-'ಹಾಗಾದರೆ, ಸ್ವಾಮಿಾ, ಇಲ್ಲೇ ಸಮಿಾಪದಲ್ಲೇ ನನ್ನ ತಾಯಿತಂದೆಗಳಿದ್ದಾರೆ. ಅವರನ್ನೂ ಒಂದುಮಾತು ಕೇಳಿಬಿಟ್ಟು, ತರುವಾಯ ನಾವಿಬ್ಬರೂ ಒಂದಾಗೋಣ! ತರುವಾಯ ನಮ್ಮಿಬ್ಬರ ಸಂಬಂಧಕ್ಕೆ ಯಾವ ಪ್ರತಿಬಂಧಕವೂ ಉಳಿದಂತೆ ಇರುವುದಿಲ್ಲ' ಎಂದಳು.

ಕಾಮಾಂಧನಾದ ಆ ಅಜಾಮಿಳನು ಅದಕ್ಕೂ ಬೇಡವೆನ್ನಲಿಲ್ಲ. ಇಬ್ಬರೂ ಬೇಗಬೇಗನೆ ನಡೆಯುತ್ತಾ ಅಲ್ಲೇ ಸಮಿಾಪದಲ್ಲಿದ್ದ ಆ ಶೂದ್ರಿತಿಯ ವಾಸಸ್ಥಳವಾದ ಹುಲ್ಲಿನ ಗುಡಿಸಿಲನ್ನು ಸೇರಿದರು. ಅವಳು ತನ್ನ ವೃದ್ಧರಾದ ತಾಯಿತಂದೆಗಳಿಗೆ ಆ ಸಂಗತಿಯನ್ನು ತಿಳಿಸಿದಳು. ಅವಳು ಒಳಗೆ ಹೇಳಿ ಅವರ ಅನುಮತಿ ಪಡೆಯುವವರೆಗೂ ಸಾವಕಾಶಮಾಡುವುದನ್ನು ಸಹಿಸಲಾರದೆ, ಅಜಾಮಿಳನು, ಒಡನೆ ತಾನೂ ಒಳಕ್ಕೆ ನುಗ್ಗಿ, ಆ ವೃದ್ಧ ಶೂದ್ರದಂಪತಿಗಳಿಗೆ ಪ್ರಣಾಮಮಾಡಿ, ಅವಳನ್ನು ತನಗೆ ಪತ್ನಿಯಾಗುವಂತೆ ಒಪ್ಪಿಸಿಕೊಟ್ಟು ತನ್ನನ್ನು ರಕ್ಷಿಸಬೇಕೆಂದು ಬೇಡಿಕೊಂಡನು. ಆ ವೃದ್ಧರು ಆತನ ದಿವ್ಯ ದೇಹಸೌಂದರ್ಯವನ್ನೂ, ತೇಜಸ್ಸನ್ನೂ ನೋಡಿ ಚಕಿತರಾದರೂ ಬೇರೆ ಉಪಾಯತೋರದೆ-ಅವಳನ್ನು ಎಂದಿಗೂ ಕೈಬಿಟ್ಟು ತೊಲಗುವುದಿಲ್ಲವೆಂದು-ಆತನಿಂದ ವಾಗ್ದಾನಮಾಡಿಸಿಕೊಂಡು, ಅವರಿಬ್ಬರೂ ಪತಿ ಪತ್ನಿಯರಂತೆ ಒಂದಾಗಿರಬಹುದೆಂದು ಸಮ್ಮತಿಸಿದರು. ಅಷ್ಟರಮಟ್ಟಿನ ಸಮ್ಮ

ತಿಯನ್ನೇ ಎದುರುನೋಡಿಕೊಂಡಿದ್ದ ಆತನು ಕಾಮಾತುರತೆಯಿಂದ ಆ ತನ್ನ ಪ್ರೇಯಸಿಯನ್ನು, ಅಲ್ಲೇ ಗಾಢಾಲಿಂಗನವಮಾಡಿ ಸ್ವರ್ಗವೇ ಹಸ್ತಗತವಾದ ಷ್ಟು ಆನಂದಾನುಭವ ಮಾಡಿದನು. 'ಕಾಮಾಂಧೋ ನೈವಪಶ್ಯತಿ' ಎಂಬ ಆರ್ಯವಾಕ್ಯವು ಎಂದಿಗಾದರೂ ವ್ಯರ್ಥವಾದೀತೆ ?



## ಅಧ್ಯಾಯ ೩ " ನಾ ರಾ ಯ ಣ "

'ಬುದ್ಧಿಃ ಕರ್ಮಾನುಸಾರಿಣಿ' ಎಂಬ ಪ್ರಾಜ್ಞವಾಕ್ಯವು ಶತಶಃ ನಿಶ್ಚಯವಾದುದು. ನಮ್ಮ ಕಥಾನಾಯಕನಾದ ಅಜಾಮಿಳನೇನು ವಿದ್ಯಾವಂತನಲ್ಲವೆ? ಯುಕ್ತಾಯುಕ್ತ ವಿವೇಚನೆಯುಳ್ಳವನಾಗಿರಲಿಲ್ಲವೆ? ಪ್ರಾರಂಭದಿಂದಲೂ ಬ್ರಹ್ಮಚರ್ಯ ವ್ರತನಿಷ್ಠನೂ, ಸತ್ಕರ್ಮನಿರತನೂ ಆಗಿರಲಿಲ್ಲವೆ ? ಆದರೂ ಮಾಡುವುದೇನು ! ಪ್ರಾರಬ್ಧಕರ್ಮವು ಪ್ರಬಲವಾಗಿ ಆತನ ಬುದ್ಧಿಯನ್ನು ಸಂಪೂರ್ಣವಾಗಿ ಅಪಹರಿಸಿಬಿಟ್ಟಿರಲು, ಸೂತ್ರದ ಬೊಂಬೆಯಂತಿದ್ದ ಆತನು ಇನ್ನೇನು ತಾನೇ ಮಾಡಬಲ್ಲನು? ಮುಂದೆ ಆತನ ಚರ್ಯೆಗಳೇ ವಿಪರೀತವಾದುವು. ಆಕೆಯನ್ನು ಕ್ಷಣಮಾತ್ರವೂ ಅಗಲಿರಲು ಇಷ್ಟಪಡದೆ ಸದಾ ಅವಳ ದೇಹಸ್ಪರ್ಶಮಾಡಿಕೊಂಡೇ ಇರುತ್ತಾ, ಆಗಾಗ ಅವಳನ್ನು ಅಪ್ಪಿಕೊಳ್ಳುತ್ತಾ, ಅಧರಚುಂಬನ ಮಾಡುತ್ತಾ, ಶಿರವನ್ನು ಮುಂಡಾಡುತ್ತಾ,-'ನನ್ನ ರತ್ನವೇ-ನನ್ನ ಪ್ರಾಣಮಣಿಯೇ, ಕಾಮಿನೀ ತಿಲಕವೇ' ಎಂದು ಮೋಹಾವೇಶ ಪರವಶನಾಗಿ - ಎಷ್ಟು ಮುದ್ದಿಸಿದರೂ, ಎಷ್ಟುಬಾರಿ ಆಲಂಗಿಸಿದರೂ, ಎಷ್ಟುಬಾರಿ ರಮಿಸಿದರೂ ತಣಿವುಂಟಾಗದೆ ಆ ಮೋಹ ಶರಧಿಯಲ್ಲೇ ಮುಳುಗಿಹೋಗಿದ್ದನು. ಇಷ್ಟಾದಮೇಲೆ, ಇನ್ನು ಸಕಾಲಕ್ಕೆ ಆಚರಿಸಬೇಕಾದ ಸ್ನಾನ ಸಂಧ್ಯಾದಿಗಳೂ ಜಪ ದೇವತಾರ್ಚನೆಗಳೂ ಏನುಗತಿ ಹೊಂದಿದುವೆಂದು ಹೇಳಬೇಕಾದುದೇನು ? ಸಕಲವೂ ನಿಂತುಹೋದುವು. ಅವಳೊಂದಿಗೆ ವೃತ್ತಿ ವಿಹೀನನಾಗಿ ಸಾಗಿಸುತ್ತಿದ್ದ ಆ ಜೀವನಕ್ಕೆ ಬೇಕಾದ ದವಸಧಾನ್ಯ ದ್ರವ್ಯಾದಿಗಳಿಗೆ ಮಾತ್ರ ಆಗಾಗ ತಮ್ಮ ತಂ

ದೆಯ ಮನೆಗೆ ಹೋಗಿ ಒಡವೆ ವಸ್ತ್ರ, ಪಾತ್ರೆ ಪದಾರ್ಥಗಳೆಂದು ಲೆಕ್ಕಿಸದೆ ಕೈಗೆ ದೊರೆತುದನ್ನು ಎತ್ತಿಕೊಂಡೊಯ್ಯುವನು. ಅದನ್ನು ಮನಸ್ಸಿಗೆ ಬಂದಷ್ಟು ದ್ರವ್ಯಕ್ಕೆ ಮಾರುವನು. ಅದರಿಂದ ಅವಳಿಗೆ ಅಪೇಕ್ಷಿತವಾದ ವಸ್ತು ಸಾಮಗ್ರಿಗಳನ್ನು ತಂದಿತ್ತು ಅವಳ ಮನರಂಜನೆಮಾಡಿ ರಮಿಸುವನು. ಅವಳು ಏನು ಅಪೇಕ್ಷಿಸಿದರದನ್ನು-ಕ್ಷಣಮಾತ್ರವೂ ಸಾವಕಾಶ ಮಾಡದೆ ತಂದಿತ್ತು, ಅವಳನ್ನು ಸಂತೋಷಪಡಿಸುವನು. ಅವಳು ತನ್ನ ಕಡೆಗೆ ತಿರುಗಿ ನೋಡಿದರೆ ಸಾಕು! ಪ್ರೇಮಕಟಾಕ್ಷವನ್ನು ಬೀರಿದರೆ ಸಾಕು! ಒಂದುಬಾರಿ ಮಂದಹಾಸವನ್ನು ಸೂಸಿ-'ಪ್ರಿಯಾ, ಮನೋಹರ' ಎಂದು ಸಂಬೋಧಿಸಿದರೆ ಸಾಕು' ಎಂದು ಸದಾ ಅವಳ ಅನುಗ್ರಹ ಸಂಪಾದನೆಯಲ್ಲೇ ನಿರತನಾಗಿ ಮಿಕ್ಕ ಸಕಲವನ್ನೂ ಮರೆತುಬಿಟ್ಟನು. ವೃದ್ಧರಾದ ಆತನ ಮಾತಾಪಿತೃಗಳು, ತಮ್ಮ ಮಗನು ಹೀಗೆ ಮನೆಬಿಟ್ಟು ಸರ್ವದಾ ಹೊರಗೇ ಇದ್ದು ಕಾಲಕಳೆಯುತ್ತಿದ್ದುದರ ಕಾರಣವನ್ನು ತಿಳಿಯದೆ, ಕೆಲವು ದಿನಗಳ ಪರ್ಯಂತ ಮನೆಯ ಆ-ಈ ಕೆಲಸಗಳು ಆಗಲಿಲ್ಲವೆಂದು ಗೊಣಗಿಕೊಳ್ಳುತ್ತಿದ್ದರು. ಮುಂದೆ ಕೆಲವು ದಿನಗಳೊಳಗಾಗಿಯೇ, ನೆರೆಹೊರೆಯವರಿಂದ ತಮ್ಮ ಮಗನ ಚರ್ಯೆಗಳನ್ನು ಕೇಳಿ, ಸಿಡಿಲು ಬಡಿದಂತಾಗಿ-ಪಾಪ, ಧರ್ಮಮಾರ್ಗ ತತ್ಪರರಾದ ಆ ವೃದ್ಧರು, ಸಹಿಸಲಾರದೆ ಅನೇಕ ಬಗೆಯಿಂದ ಶೋಕಿಸಿದರು. ಮಗನು ಧನಸಂಗ್ರಹಣಕ್ಕಾಗಿ ಮತ್ತೊಮ್ಮೆ ಮನೆಗೆ ಬಂದಾಗ್ಗೆ, ಗಲ್ಲವನ್ನು ಹಿಡಿದು ಮುದ್ದಿಸಿ-'ಅಪ್ಪಾ, ವೃದ್ಧಾಪ್ಯದಲ್ಲಿ ನಮ್ಮನ್ನು ಈ ದುರ್ಗತಿಗೆ ಒಳಪಡಿಸಿ ನೀನೂ ಹೀಗೆ ಧರ್ಮಬಾಹಿರನಾಗಿ ಹೋಗುವುದು ನ್ಯಾಯವೇ! ಪೂರ್ವಾಚಾರವನ್ನು ತೊರೆದು ಮುಪ್ಪಿನಿಂದ ನೊರಗಿದ ನಮ್ಮನ್ನೂ ಕೈಬಿಡಬೇಡವೋ!' ಎಂದು ಎಷ್ಟೋಬಗೆಯಲ್ಲಿ ಅಂಗಲಾಚಿ ಬೇಡಿಕೊಂಡರು. ಆದರೂ ಏನೂ ಸಾರ್ಥಕವಾಗಲಿಲ್ಲ. ಅಚಾಮಿಳನು ಅವರ ಮಾತಿಗೆ ಕಿವಿಗೊಡಲೇ ಇಲ್ಲ. ಅವರ ಪ್ರಾರ್ಥನೆ ಪರಿತಾಪಗಳೊಂದೂ ಅವನ ಕಿವಿಗೇ ಬೀಳಲಿಲ್ಲ. ಈ ವಿಚಾರವು ಆವನ ಪತ್ನಿಯ ಮನೆಯವರಿಗೆ ತಿಳಿಯಿತು. ಅವರೂ ಬಹು ಗಾಬರಿಗೊಂಡವರಾಗಿ, ಸ್ಫುರದ್ರೂಪಿಯಾದ ಆತನ ಪತ್ನಿಯನ್ನು ಕರೆತಂದು ಎದುರಿಗೆ ನಿಲ್ಲಿಸಿ, ಆ ಬಾಲೆಯ ಜೀವಿತವನ್ನು ಮಣ್ಣುಪಾಲು ಮಾಡದೆ ಮನೆಯಲ್ಲಿದ್ದುಕೊಂಡು ಬಾಳ್ವೆ

ಮಾಡೆಂದು ಎಷ್ಟೋಬಗೆಯಿಂದ ಹೇಳಿಕೊಂಡರು. ನಯ ಭಯ ಧರ್ಮ ಕರ್ಮ ಮುಂತಾದ ಯಾವ ಮಾತುಗಳೂ ಅತನ ಮನಸ್ಸಿನಮೇಲೆ ಪರಿಣಾ ಮವುಂಟುಮಾಡಲಿಲ್ಲ. ಮನೆಯಲ್ಲಿ ತಂದೆಯಿಂದ ಸಂಪಾದಿತವಾಗಿದ್ದ ಧನ ಕನಕಾದಿಗಳೆಲ್ಲ ಮುಗಿದುವು. ಅಜಾಮಿಳನು ಮುಂದೆ ಮನೆಗೆ ಬರು ವುದನ್ನೇ ಬಿಟ್ಟು, ತನ್ನ ಮತ್ತು ಅವಳ ಉದರ ನಿರ್ವಹಣಕ್ಕಾಗಿ ಉಚ್ಚ ನೀಚ ವೆಂಬ ಭಾವನೆಯಿಲ್ಲದೆ ವಿವಿಧ ಉದ್ಯೋಗಗಳಿಗೆ ಪ್ರವೇಶಿಸಿ ಧನವನ್ನಾರ್ಜಿ ಸಿದನು. ಇತ್ತ ಅವನ ಮಾತಾಪಿತೃಗಳು, ಈ ದುಃಖದಲ್ಲೇ ಕೊರಗಿ ಕೊರಗಿ ಎಂದೋ ಒಂದುದಿನ ಮೃತರಾದರು. ರಜಸ್ವಲೆಯಾಗದ ಮುಂಚೆಯೇ ಮೇಲ್ಕಂಡಂತೆ ಪತಿ ವಿರಹಿತಳಾದ ಅವನ ಪತ್ನಿಯೂ ಮುಂದೆ ಉಪಾಯ ಕಾಣದೆ ಆತ್ಮಹತ್ಯಮಾಡಿಕೊಂಡಳು. ಹೀಗೆ ಬ್ರಾಹ್ಮಣ್ಯ ಸಂಬಂಧವಾದ ಬಾಂಧವ್ಯ ಪಾಶಗಳೆಲ್ಲವೂ ಒಂದೊಂದಾಗಿ ಕತ್ತರಿಸಿಹೋಗಲು, ಅಜಾಮಿ ಳನು ಲೇಶಮಾತ್ರವೂ ಪಂತಾಪವೆಂಬುದಿಲ್ಲದೆ, ತನ್ನವುಟ್ಟಿಗೆ ತಾನು, ಅವಳ ಸಹವಾಸದಲ್ಲಿ ಮಿಕ್ಕ ಪ್ರಪಂಚವನ್ನೇ ಮರೆತು ಉನ್ಮತ್ತನಂತೆ ಕೆಲವು ದಿನ ಗಳ ಇದ್ದುಬಿಟ್ಟನು.

ಮಾತಾಪಿತೃಗಳು ಮೃತರಾದುದರಿಂದ, ತನ್ನ ಪಿತ್ರಾರ್ಜಿತವಾದ ಮ ನೆಯ ಮೇಲೆ ಅವನಿಗೆ ಸಂಪೂರ್ಣಾಧಿಕಾರವು ಪ್ರಾಪ್ತವಾಗಲು, ಅಲ್ಲಿಗೆ ಬಂ ದು ವಿಸ್ತಾರವಾದ ಆ ಮನೆಯಲ್ಲಿ ತನ್ನಾನೂತನ ಪತ್ನಿಯೊಂದಿಗೆ ವಾಸಿಸ ಬಹುದೆಂದು ಯೋಚಿಸಿದನು. ಆದರೆ ಕುಲಹೀನನಾದ ಅವನು ಅಲ್ಲಿ ವಾಸ ಮಾಡಿಕೊಂಡಿರಲು, ಶ್ರೋತ್ರಿಯರಾದ ನೆರೆಹೊರೆಯ ಇತರ ಬ್ರಾಹ್ಮಣ ಸಂಸಾರಗಳು ಒಪ್ಪಲಿಲ್ಲ. ಬಹು ಕಠಿಣವಾಗಿ ಪ್ರತಿಭಟಿಸಿದರು. ಆದುದ ರಿಂದ ಪಿತ್ರಾರ್ಜಿತವಾದ ಆ ಮನೆಯನ್ನು ಅಧಿಕ ದ್ರವ್ಯಕ್ಕೆ ಮಾರಿಬಿಟ್ಟು, ತನ್ನ ಪತ್ನಿ ಶೂದ್ರಿತಿಯ ಹುಲ್ಲು ಗುಡಿಸಿಲನ್ನೇ ದೊಡ್ಡ ಮನೆಯನ್ನಾಗಿ ಕಟ್ಟಿಸಿ, ಮಿಕ್ಕ ಹಣದಿಂದ ಲಾಭಕರವಾದ ಉದ್ಯೋಗಮಾಡುತ್ತ ದಿನ ದಿನಕ್ಕೆ ವಿಶೇಷ ಧನ ಕನಕಗಳನ್ನು ಗಳಿಸಿದನು. ಕಾಲಕ್ರಮದಲ್ಲಿ ಆ ಪತ್ನಿ ಯಲ್ಲಿ ಅವನಿಗೆ ಹತ್ತುಮಂದಿ ಮಕ್ಕಳೂ ಆದರು. ಕೊನೆಯ ಮಗನಿಗೆ ವಿಧಿ ಪ್ರೇರಿತನಾಗಿಯೋ ಎಂಬಂತೆ, ಅತನು 'ನಾರಾಯಣಾ' ಎಂದು ಹೆಸರಿ ಟ್ಟಿದ್ದನು. ಹೀಗೆ ಅನೇಕ ಸಂವತ್ಸರಗಳು ಕಳೆದುವು.

ಸಂತಾನವೂ ಸಂಪತ್ತೂ ಅಭಿವೃದ್ಧಿಯಾಗುತ್ತಾ ಸಾಗಿದಂತೆಲ್ಲಾ ದಿನದಿನಕ್ಕೆ ಅಜಾಮಿಳನ ಮೋಹವೂ ಮದವೂ ಕಾಮವೂ ಕಡಮೆಯಾಗುತ್ತ ಬಂದುವು. ಪ್ರಾಯದ ಕಾಮಾಂಧತೆಯು ಸ್ವಲ್ಪ ಸ್ವಲ್ಪವಾಗಿ ಇಳಿಯು ಸಾಗಿತು. ದಡಮೀರಿ ಹರಿಯುವ ಹುಚ್ಚು ಹೊಳೆಯಂತೆ ಯಾರಲಕ್ಷ್ಯವೂ ಇಲ್ಲದೆ, ಮದಿಸಿದ ಕೋಣನಂತೆ ನಡೆಯುತ್ತಿದ್ದ ಆತನ ನಡೆವಳಿಕೆಯು ತನ್ನ ಉಗ್ರತೆಯನ್ನು ನೀಗಿಕೊಂಡು ನಿಧಾನವಾಗಿ ಶಾಂತಭಾವವನ್ನೈದಸಾಗಿತು. ಅವನ ಪ್ರೇಯಸಿಯಾಗಿ ಆ ದುರ್ದೈವಿಯು ಸಕಲವಿಧ ಅವನತಿಗಳಿಗೂ ಮೂಲಕಾರಣಳಾಗಿದ್ದ ಆ ಶೂದ್ರಸ್ತ್ರೀಗೂ ವಯಸ್ಸು ಗಳಿತವಾಗುತ್ತಾ ಬಂದಂತೆಲ್ಲ ದೇಹಸೌಂದರ್ಯವಳಿದು, ಅವಳು ಮುಂದೆ ಅವನನ್ನು ಮೋಹಗೊಳಿಸಲಾರದಂತಾದಳು. ಅಂದಿನ ಆ ದಂಭ ದರ್ಪಗಳೂ, ಧರ್ಮ ಕರ್ಮಗಳ ಲಕ್ಷ್ಯವಿಲ್ಲದೆ ಪವಿತ್ರವಾದ ಬ್ರಾಹ್ಮಣ್ಯವನ್ನು ನೀಗಿಕೊಂಡು, ವಿಷಯ ಸುಖಕ್ಕೆ ದಾಸನಾಗಿ ತಾನು ಮಾಡಿಟ್ಟುಕೊಂಡ ಅನರ್ಥ ಪರಂಪರೆಯೂ ಅಜಾಮಿಳನ ದೃಷ್ಟಿಪಥಕ್ಕೆ ಬರತೊಡಗಿತು. ಅಷ್ಟುಕಾಲದಮೇಲೆ ಆಗ ಅವನು ಕಣ್ಣುತೆರೆದು ತಾನು ಎಲ್ಲಿದ್ದೇನೆಂದು ನೋಡಿಕೊಳ್ಳತೊಡಗಿದನು. ತಾನು ಜನಿಸಿದ ಪವಿತ್ರವಾದ ಬ್ರಾಹ್ಮಣಕುಲ, ಮಹಾ ಕರ್ಮನಿಷ್ಠರೂ, ಧರ್ಮತತ್ಪರರೂ ಆದ ತನ್ನ ಮಾತಾಪಿತೃಗಳು, ಸದಾಚಾರ ಸಂಪನ್ನನಾಗಿ, ವೇದಶಾಸ್ತ್ರಾಧ್ಯಯನ ಮಾಡಿ, ಷಟ್ಕರ್ಮ ನಿರತನಾಗಿದ್ದ ತನ್ನ ಬ್ರಾಹ್ಮಣ ಜೀವನ ಇವುಗಳೆಲ್ಲವೂ ಸಾವಧಾನವಾಗಿ ಮನಸ್ಸಿನಲ್ಲಿ ದೃಷ್ಟಿಪಥಕ್ಕೆ ಒಂದೊಂದಾಗಿ ಬರುತ್ತಿದ್ದುವು. ಸಾಧ್ವಿಯೂ, ಸುಂದರಳೂ ಉತ್ತಮವಂಶ ಸಂಭೂತಳೂ ಆದ ತನ್ನ ಸಹಧರ್ಮಿಣಿ, ಸರ್ವಸಂಪತ್ತುಗಳಿಂದಲೂ ಪರಿಪೂರ್ಣವಾಗಿದ್ದ ತನ್ನ ಮನೆ ಇವೂ ಸ್ಮರಣೆಗೆ ಬಂದುವು. ಒಂದಿಗೇ, ಇತ್ತ ಶ್ವಪಚಳೂ ಕುಲಹೀನಳೂ ಮದ್ಯಪಾನ ಮಾಂಸಾಹಾರಾಸಕ್ತಳೂ, ಲಜ್ಜಾಹೀನಳಾಗಿ ಮದ್ಯಪಾಯಿಯಾದ ಆ ಶೂದ್ರನೊಂದಿಗೆ ಪಶುವೃತ್ತಿಯನ್ನಾಚರಿಸಿದ ವ್ಯಭಿಚಾರಿಣಿಯೂ ಆದ ಶೂದ್ರಸ್ತ್ರೀ. ಅವಳ ಹೇಯವಾದ ಕ್ಷುದ್ರ ಹುಲ್ಲುಗುಡಿಸಲು ಅದರಲ್ಲಿ ಧರ್ಮಬಾಹಿರರಾದ ಅವಳ ಮಾತಾಪಿತೃಗಳು. ಅವಳ ಅಸಹ್ಯ ಜೀವನ ಇವುಗಳೂ ಕಣ್ಣಿಗೆ ಕಟ್ಟಿದಂತೆ ತೋರಿಬಂದು ಮರೆಯಾದುವು. ತರುವಾಯ, ತಾನು ಕಾಮಾಂಧನಾಗಿ ಅವಳನ್ನು ಯಾಚಿಸಿದುದು

ಅವಳ ಪ್ರಾಪ್ತಿಗಾಗಿ ಕುಲಹೀನರಾದ ಅವಳ ಮಾತಾಪಿತೃಗಳಿಗೆ ಅಡ್ಡ ಬಿದ್ದು ಬೇಡಿದ ದೀನಭಾವ. ಅತ್ತ ತನಗಿದ್ದ ಪಿತ್ರಾರ್ಜಿತವಾದ ಅಪಾರ ಆಸ್ತಿ. ವೃದ್ಧರಾಗಿ ದಿಕ್ಕುಕಾಣದೆ,-'ಅಪ್ಪಾ, ವೃದ್ಧಾಪ್ಯದಲ್ಲಿ ನಮ್ಮನ್ನು ಕೈಬಿಡಬೇಡವೋ' ಎಂದು ಅಂಗಲಾಚಿ ಬೇಡಿಕೊಂಡ ತನ್ನ ಮುಪ್ಪಿನ ಮಾತಾಪಿತೃಗಳು. ಈ ದೃಶ್ಯಗಳೂ ಅವನ ದೃಷ್ಟಿಪಥವನ್ನು ಹಾಯ್ದು ಹೋದುವು. ಒಂದಿಗೇ ಇತ್ತ ಅಪಾರವಾಗಿ ಬೆಳೆದುಹೋದ ಕುಟುಂಬ, ಹತ್ತುಮಂದಿ ಮಕ್ಕಳು. ಅವರ ಪತ್ನಿಯರು, ಪುತ್ರರು. ತನ್ನಾ ಪತ್ನಿಯ ಜನನೀ ಜನಕರು. ಅವರ ಇತರ ಬಂಧುಗಳು. ಹೀಗೆ ಅನೇಕ ಸಂಗತಿಗಳು ದೃಕ್ಪಥದಲ್ಲಿ ಹಾಯ್ದು ಹೋಗುವು. ಮನಸ್ಸಿಗೆ ವಿಶೇಷ ಪರಿತಾಪವುಂಟಾಯಿತು. 'ಅಕ್ಕಟಾ, ಕೆಟ್ಟೆನಲ್ಲಾ-ವಿಷಯಾಂಧನಾಗಿ ಜನ್ಮವನ್ನೇ ನಿರರ್ಥಕಮಾಡಿಕೊಂಡೆನಲ್ಲಾ' ಎಂದು ಮನಸ್ಸಿನಲ್ಲೇ ವಿಶೇಷ ಸಂಕಟಪಟ್ಟನು. ಆದರೆ, ಈಗ ಏನು ಮಾಡಲು ಸಾಧ್ಯ? ತನ್ನ ಪೂರ್ವದ ಮಾರ್ಗವನ್ನು ತಪ್ಪಿ ವಿಶೇಷದೂರ ಬಂದುಬಿಟ್ಟಿದ್ದ ಈಗಿನ ಸ್ಥಿತಿಯಲ್ಲಿ ಪುನಃ ಹಿಂದಕ್ಕೆ ಹೋಗಲು ಸಾಧ್ಯವುಂಟೆ? ಒಂದುವೇಳೆ, ಈಗಿನ ಈ ಶೂದ್ರಸ್ತ್ರೀಯ ಸಂಬಂಧದಿಂದ ಪ್ರಾಪ್ತವಾದ ಬಂಧುವ ಪರಿವಾರಗಳನ್ನೆಲ್ಲಾ ನೀಗಿಬಿಡಬಹುದೆಂಬೋಣ! ಅದರಿಂದ ಉಂಟಾಗುವ ಪ್ರತಿಫಲವಾದರೂ ಏನು! ವೃದ್ಧಾಪ್ಯ, ನೇತ್ರಪಾಟವವು ಕಡಮೆಯಾಯಿತು. ದೇಹವು ಕುಗ್ಗಿತು. ಶಕ್ತಿ ಲೋಪವಾಯಿತು. ಇನ್ನು ಮುಂದೆ ಪರಸಹಾಯವಿಲ್ಲದೆ ಬದುಕುವುದೇ ಶ್ರಮವೆನ್ನಿಸುವಂತಿರುವುದು. ಇಂತಹ ವೇಳೆಯಲ್ಲಿ ಈವರೆಗೆ ನಡೆದುಬಂದ ಬಾಂಧವ್ಯ ಪ್ರೇಮದಿಂದ ದೇಹಪೋಷಣೆಗಾದರೂ ಲೇಶಮಾತ್ರ ಆಧಾರ ಭೂತರಾಗಿರುವ ಅವರನ್ನೂ ತೊರೆದು ಮುಂದೆ ಮಾಡುವುದೇನು? ಈಗ ಹಿಂದಿನ ಮಾರ್ಗಕ್ಕೆ ಪುನಃ ಹೋಗಲು ಅವಕಾಶವುಂಟೆ? ಹೋದರೂ ಅಲ್ಲಿ ಪ್ರವೇಶಸಿಕ್ಕೀತೆ? ಈ ಬಗೆಯ ಅನೇಕಾನೇಕ ಯೋಚನೆಗಳು ವೃದ್ಧನಾದ ಅಜಾಮಿಳನ ಮನಸ್ಸನ್ನು ಆಕ್ರಮಿಸಿ ಆಧಿಪತ್ಯ ಮಾಡತೊಡಗಿದುವು. ಈ ಹಲವು ವಿಚಾರಗಳ ಗಲಭೆಯಲ್ಲಿ, ಅವನು ಇದು ಸರಿ, ಹೀಗೆ ಮಾಡಬೇಕು ಎಂದು ನಿರ್ಧರಿಸಲಾರದ ಅಶಕ್ತ ಮನೋಭಾವದಿಂದ ದಿಕ್ಕು ತೋರದಂತಾಗಿ ಕೆಲಕಾಲವನ್ನು ನೂಕಿದನು.

ಲೋಕದಲ್ಲಿ ಬಾಳ್ವೆ ಮಾಡುವುದಕ್ಕಾಗಿ ಉದ್ಭವಿಸುವ ಮಾನವನ ಮನಸ್ಥಿತಿಯನ್ನು ಒಂದು ಪ್ರವಾಹಕ್ಕೆ ಹೋಲಿಸಬಹುದು. ಪ್ರವಾಹವು ಎಲ್ಲೋ ಗುಡ್ಡ ಬೆಟ್ಟಗಳಲ್ಲಿ ಬಹು ಅಲ್ಪವಾಗಿ ಪ್ರಾರಂಭಿಸಿ ಕಲ್ಲು ಬಂಡೆಗಳ ಮಗ್ಗುಲಲ್ಲಿ ಸುತ್ತಿ ಪ್ರವಹಿಸಿ ಸಣ್ಣ ಪಾತ್ರವನ್ನುಂಟಾಗಿ, ಎಡಬಲ ಪಕ್ಕಗಳಿಂದ ಬಂದು ಸೇರಿದ ಸಣ್ಣ ಸಣ್ಣ ಕಾಲುವೆಗಳಿಂದ ಪೋಷಿತವಾಗಿ ನಿಧಾನವಾಗಿ ಹರಿದು ಮುಂದರಿಯುವುದು. ಹೀಗೇ ಮಾರ್ಗವು ಸಾಗಿದಂತೆಲ್ಲ, ಪಾರ್ಶ್ವಗಳಿಂದ ಬಂದು ಸೇರುವ ಮಳೆಗಾಲದ ಹಳ್ಳಕೊಳ್ಳಗಳಿಂದ ವಿಶೇಷ ನೀರು ಶೇಖರವಾಗಲು ಅದರ ಪಾತ್ರವೂ ವಿಸ್ತರಿಸುವುದು. ಆ ಸ್ಥಿತಿಯಲ್ಲಿ ಅದು ಕೆಲವು ಸ್ಥಳಗಳಲ್ಲಿ ವಿಶೇಷ ಎತ್ತರದಿಂದ ಧುಮುಕುತ್ತ, ಎರಡು ದಡಗಳನ್ನೂ ಕೊರೆದು ಮೇಲೆ ಬೀಳಿಸಿಕೊಳ್ಳುತ್ತ ಕಲ್ಲು ಮಣ್ಣು ಕಸಕಡ್ಡಿ ಮರಗಿಡಗಳೆಂಬ ಲಕ್ಷ್ಯವಿಲ್ಲದೆ ತೇಲಿಸಿಕೊಂಡು ಹೋಗುತ್ತ ಬಹು ಬಗ್ಗಡವಾಗಿ ತಾನು ತುಂಬಿ ಹರಿಯುತ್ತಿರುವುದಾದರೂ ಸ್ನಾನಪಾನಾದಿಗಳಿಗೆ ವಿಶೇಷ ಪ್ರಯೋಜನಕಾರಿಯಾಗದೆ ನೋಡುವವರಿಗೆ ಒಂದುವೇಳೆ ಪ್ರಾಣಾಪಾಯವನ್ನುಂಟುಮಾಡುವುದೋ ಎಂಬಂತೆ ಭಯಪ್ರದವಾಗಿರುವುದು. ಅದರಲ್ಲಿ ಅಲ್ಲಲ್ಲಿ ಇರುವ ಬಂಡೆಗಳು ಮುಳುಗಿ ಅವುಗಳ ಬಳಿ ಅಗಾಧವಾದ ಮಡುವುಗಳೇರ್ಪಟ್ಟು, ಭಯಂಕರವಾದ ಸುಳಿಗಳಿಂದ ಕೂಡಿ ಒಳಿಗೆ ಬಂದವರನ್ನು ಮುಳುಗಿಸಿ ಪಾತಾಳಕ್ಕೆ ಒಯ್ಯುವಂತೆ ಅಪಾಯಕಾರಿಗಳಾಗಿರುವುವು. ಸಾಲದುದಕ್ಕೆ ದಾಹಗೊಂಡು ಸಮೀಪಕ್ಕೆ ಬಂದವರನ್ನು ಒಳಕ್ಕೆ ಎಳೆದೊಯ್ದು ಕಿತ್ತು ತಿನ್ನುವ ಮೊಸಳೆಗಳೂ, ಮತ್ಸ್ಯಾದಿಗಳೂ ಅಲ್ಲಿ ತುಂಬಿರುವುವು. ಮಹಾ ರಭಸದಿಂದ ಹರಿಯುತ್ತಿರುವ ಅದರೆದುರಿಗೆ ಆನೆಯೂ ನಿಲ್ಲಲಾರದಂತಿರಲು, ಆ ಹೆಮ್ಮೆಯಿಂದಲೋ ಎಂಬಂತೆ ಅದು ಭೋರ್ಗರೆಯುತ್ತ, ಬಿಳಿಯ ನೊರೆಯನ್ನುಕ್ಕಿಸಿ ನೋಡುವವರಿಗೆ ಭಯ ಆಶ್ಚರ್ಯಗಳನ್ನು ಉಂಟುಮಾಡುತ್ತಿರುವುದು. ಮುಂದೆ ಕೆಲವು ದಿನಗಳು ಕಳೆವ ವೇಳೆಗೆ ಪ್ರವಾಹ ರಭಸವು ತಗ್ಗುವುದು. ಕ್ರಮ ಕ್ರಮವಾಗಿ ವೇಗವು ಕಡಮೆಯಾಗುವುದು. ಬಗ್ಗಡವಾಗಿದ್ದ ನೀರು ತಿಳಿಗಟ್ಟುವುದು. ಅದರಲ್ಲಿದ್ದ ಕಲ್ಮಷಗಳು ತಳಕ್ಕಿಳಿದು ಕೂಡುವುವು. ದಡಗಳು ಶಾಂತವಾದ ಪ್ರವಾಹದಿಂದ ಸುರಕ್ಷಿತವಾಗಿರುವುವು. ಅದರಲ್ಲಿ ಇಳಿದು ಜನಗಳು ಶುದ್ಧ

ವಾದ ಆ ನೀರನ್ನು ಸ್ನಾನಪಾನಗಳಿಗಾಗಿ ನಿರ್ಭಯರಾಗಿ ಉಪಯೋಗಿಸುವರು. ಆಗ ಆ ಪ್ರವಾಹದಿಂದ ಯಾರಿಗೂ ಭಯವುಂಟಾಗಲು ಅವಕಾಶವಿಲ್ಲವಾಗಿ ಜನಗಳು ದೋಣಿಗಳನ್ನು ಬಿಟ್ಟುಕೊಂಡೂ ಈಜಿಕೊಂಡೂ ನಿರ್ಭಯರಾಗಿ ಆ ಪ್ರವಾಹವನ್ನು ದಾಟುವರು. ನೀರೂ ಲೇಶಮಾತ್ರವೂ ಕೊಳೆಯಿಲ್ಲದೆ ಸ್ಫಟಿಕ ಮಣಿಯಂತೆ ಪರಮ ಪರಿಶುದ್ಧವಾಗಿರುವುದು. ಹಾಗೆ ಸರ್ವಜನೋಪಕಾರಿಯಾಗಿ ಹರಿವ ಆ ನದಿಯ ಪಾತ್ರವು ಮುಂದೆ ವಿಶೇಷ ವಿಸ್ತಾರವಾಗಿ, ಕೊನೆಗೆ ಸಮುದ್ರವನ್ನು ಸೇರುವುದು. ಇದು ನದಿಯ ಜೀವಿತ. ಮನುಷ್ಯನ ಮನಸ್ಸಾದರೂ ಈ ಪ್ರವಾಹದಂತೆಯೇ ಇದೇ ಕ್ರಮವನ್ನೇ ಅನುಸರಿಸಿ ಸಾಗುವುದೆಂಬುದನ್ನು ವಿಚಾರಶೀಲರು ಗ್ರಹಿಸುವರು. ಬಾಲ್ಯದಲ್ಲಿ ಕೇವಲ ಅಜ್ಞಾವಸ್ಥೆಯಲ್ಲಿ ವಿಶೇಷ ಅನುಭವವಿಲ್ಲದೆ ಅಲ್ಪವಾಗಿರುವ ಮನಸ್ಸು, ಅವರಿವರಿಂದ ಕಲಿವ ಹಲವು ವಿಚಾರಗಳಿಂದ ದಿನದಿನಕ್ಕೆ ಬಲಗೊಂಡು ಕ್ರಮಕ್ರಮವಾಗಿ ವಿಸ್ತಾರವಾಗುತ್ತ, ಹಾಗೆ ಕಲಿವ ಆ ವಿಚಾರಗಳಿಂದ ಲೌಕಿಕ ಲಾಭಸಂಪಾದನೆಗಾಗಿ ಪ್ರಯತ್ನಿಸಿ ಎದ್ದು ಬಿದ್ದು ಸಾಗುತ್ತಾ ಕೆಲವು ದೂರ ಹೋಗುವುದು. ಮುಂದೆ ಯೌವನ ಪ್ರಾರಂಭ ಕಾಲದಲ್ಲ ಅದಕ್ಕೆ ಪ್ರಾಪ್ತವಾಗುವ ಸ್ಥಿತಿಯು ಮಳೆಗಾಲದ ನದಿಯ ಪ್ರವಾಹವನ್ನು ಸ್ಮರಣೆಗೆ ತರುವಂತೆ ಇರುವುದು. ಪ್ರಾಯಮದದಿಂದ ಕೊಬ್ಬಿದ ಆ ವ್ಯಕ್ತಿಯ ಉನ್ಮತ್ತತೆಯ ಎದುರಿಗೆ ಆಗ ಯಾರೂ ನಿಲ್ಲಲರಿಯರು. ಅವನಿಗೆ ಯಾರ ಲಕ್ಷ್ಯವೂ ಇರದು. ತನ್ನ ಅಹಂಕಾರ ಮಮಕಾರಗಳಿಂದ - ದಡಗಳನ್ನು ಒತ್ತಿ ಹರಿದು ಮೇಲುರುಳಿಸಿಕೊಳ್ಳುವ ನದಿಯಂತೆ - ಅವನು ಅವರಿವರ ಲಕ್ಷ್ಯವಿಲ್ಲದೆ ಮನಬಂದಂತೆ ನುಡಿದು, ಅವರಿವರನ್ನು ಆಕ್ಷೇಪಿಸಿ, ಅಹಂಕಾರದಿಂದ ನಿಂದಿಸಿ ಹೋರಾಡಿ, ಎಲ್ಲರ ದ್ವೇಷವನ್ನೂ ಸಾಧಿಸಿಕೊಳ್ಳುವನು. ಆ ಸ್ಥಿತಿಯಲ್ಲಿ ಅವನಲ್ಲಿರುವ ವಿದ್ಯೆಯೂ ಧನವೂ ಅನುಭವವೂ, ಸಾತ್ವಿಕರಾಗಿ ಸಹಾಯಾಪೇಕ್ಷೆಯಿಂದ ಬರುವ ಯಾರಿಗೂ ಪ್ರಯೋಜನಕಾರಿಯಾಗದಿರುವುದಂತಿರಲಿ, ಭಯಪ್ರದವಾಗಿಯೂ ಅಪಾಯಕಾರಿಯಾಗಿಯೂ ಇರುವುದು. ಪ್ರವಾಹದಲ್ಲಡಗಿರುವ ಬಂಡೆಗಳಂತೆ, ಅವನ ಮನಸ್ಸಿನಲ್ಲಿ ಅಡಗಿ ವ್ಯಕ್ತವಾಗದಿರುವ ಗಭೀರವಾದ ಹಲವು ಉದ್ದೇಶಗಳಿಂದ-ಯಾವ ಸಮಯದಲ್ಲಿ ಯಾ

ರಿಗೆ ಏನು ಅಪಾಯವುಂಟಾಗುವುದೆಂಬುದರ ನಿಯಮವಿಲ್ಲ. ಅವುಗಳನ್ನು ತಿಳಿಯದೆ ಅವನ ಬಳಿಯಲ್ಲಿ ಸೇರಿದ ಸರಳ ಸ್ವಭಾವದ ಮಿತ್ರರು, ಪ್ರವಾಹದ ಗತಿಯನ್ನು ತಿಳಿಯದೆ ನೀರಿಗಿಳಿದವರು ಸುಳಿಯಲ್ಲಿ ಸಿಕ್ಕು ಪಾತಾಳಕ್ಕೆ ಸೇರುವಂತೆ. ಯಾವ ಗತಿಯನ್ನು ಹೊಂದುವರೆಂಬುದನ್ನು ತಿಳಿಯುವುದು ಅಸಾಧ್ಯ! ಈ ಸ್ಥಿತಿಯಲ್ಲಿ ಅವನಿಗೆ ಪಾಪಪುಣ್ಯಗಳು, ಧರ್ಮಕರ್ಮಗಳು, ನ್ಯಾಯಾನ್ಯಾಯಗಳು ಮುಂತಾದ ಯಾವುವೂ ದೃಷ್ಟಿಗೋಚರವಾಗಲಾರವು. ಯಾರ ಲಕ್ಷ್ಯವೂ ಇಲ್ಲದೆ ಅವನು ಸರ್ವಭಕ್ಷಕನಾಗಿ, ಮದೋನ್ಮತ್ತವಾದ ಆನೆಯಂತೆ ಸಕಲವನ್ನೂ ನಿರ್ಮೂಲಗೊಳಿಸುತ್ತಾ ಸ್ವಾರ್ಥಸಾಧನೆಯಲ್ಲಿ ಮಗ್ನನಾಗಿ ಓಡುತ್ತಿರುವನು. ಆದರೆ ಮಾನವನ ಮನಸ್ಥಿತಿಯು ಹೀಗೆಯೇ ಇರಲಾರದು. ಮುಂದೆ ವಯಸ್ಸು ಗಳಿತವಾಗುತ್ತಾ ಗುತ್ತ. ಪ್ರಪಂಚ ವಿಚಾರವು ಹೆಚ್ಚು ಹೆಚ್ಚಾಗಿ ಗೋಚರವಾದಂತೆಲ್ಲ, ಅದು ಸಮಾಧಾನ ಸ್ಥಿತಿಗೆ ಬರುತ್ತ ಲೋಕಸ್ಥಿತಿಯು ಸಹಜ ದೃಷ್ಟಿಯಿಂದ ಕಾಣಿಸುವುದು. ಆಗ ಅವನ ಮನಸ್ಸಿನಲ್ಲಿ ಬಗ್ಗಡದಲ್ಲಿನ ಮಣ್ಣು ಕೆಳಕ್ಕೆ ನಿಂತ ತರುವಾಯ ತಿಳಿಗಟ್ಟಿದ ನೀರಿನಂತೆ - ಸ್ವಚ್ಛತೆಯುಂಟಾಗುವುದು. ಪಾಪಪುಣ್ಯಗಳು - ಧರ್ಮಕರ್ಮಗಳೆಂಬ ತಿಳಿವು ಉಂಟಾಗಿ ಜನರು ನಿರ್ಭಯವಾಗಿ ಅವನ ಸಮೀಪಕ್ಕೆ ಬರಲು ಅವಕಾಶವೊದಗುವುದು. ಆವರೆಗೆ ಪಟ್ಟ ಹಲವು ಬಗೆಯ ಅನುಭವಗಳಿಂದ, ಆತನು ವಿಶಾಲ ಮನೋಭಾವದಿಂದ ಪರರಿಗೆ ತನ್ನಲ್ಲಿದ್ದುದನ್ನು ಕೊಟ್ಟು ಶಕ್ತ್ಯನುಸಾರ ಉಪಕಾರ ಮಾಡುವುದಕ್ಕೆ ಹಿಂದು ಮುಂದು ನೋಡದೆ ಇರುವನು. ಅಲ್ಲದೆ, ದಿನದಿನಕ್ಕೆ ಹೀಗೆ ಬೆಳೆದು ಬಂದ ಲೌಕಿಕ ಮತ್ತು ಪಾರತ್ರಿಕ ಜ್ಞಾನಜಲವು ಆತನ ಜೀವನ ಪ್ರವಾಹದಲ್ಲಿ ಹರಿಯ ಹತ್ತಲು ಆತನು ಮುಂದೆ ಕಾಲಾನುಸಾರವಾಗಿ ಜ್ಞಾನರತ್ನಾಕರನಾದ ಪರಮಾತ್ಮನ ಸಾನ್ನಿಧ್ಯವನ್ನು ಸೇರುವುದಕ್ಕೆ ಏನೂ ಸಂದೇಹವಿರದು! ಮನುಷ್ಯನಾಗಿ ಜನ್ಮಿಸಿದ ಪ್ರಾಣಿಯು, ತನ್ನ ಬಂಧನ ಮತ್ತು ಮೋಕ್ಷಗಳಿಗೆ ಮನಸ್ಸೇ ಕಾರಣವೆಂಬುದನ್ನು ಅರಿತು, ಅದರ ಪ್ರವಾಹಕ್ಕೆ ಸಿಕ್ಕಿ ಹುಚ್ಚು ಹೊಳೆಯಲ್ಲಿ ಬಿದ್ದ ಪಾತ್ರೆಯಂತೆ ದಿಕ್ಕೆಟ್ಟು ಹೋಗದೆ, ಅದನ್ನು ತನ್ನ ಸ್ವಾಧೀನಕ್ಕೆ ತಂದುಕೊಂಡು, ತನಗೆ

ಬೇಕಾದಂತೆ ಆದರ ಪ್ರವಾಹವನ್ನು ಉಪಯೋಗಿಸಿಕೊಂಡು ತನ್ಮೂಲಕ ಉತ್ತಮ ಗತಿಯನ್ನು ಸಾಧಿಸಿಕೊಳ್ಳತಕ್ಕದು ಕರ್ತವ್ಯವಲ್ಲವೆ ?

ಪ್ರಾಯದ ಮದದಿಂದ ಬುದ್ಧಿಹೀನನಾಗಿ ಮಾರ್ಗತಪ್ಪಿದ ತನ್ನ ಜನ್ಮವು ನಿರರ್ಥಕವಾಯಿತಲ್ಲಾ ಎಂಬ ಚಿಂತೆಯು ಅಜಾಮಿಳನ ಮನಸ್ಸಿಗೆ ಹತ್ತಿತು. ಆ ಚಿಂತೆಯೇ ಚಿತೆಯಾಗಿ ಸದಾಕಾಲವೂ ಯೋಚನೆಗೆ ಕಾರಣವಾಗಿ, ಆತನನ್ನು ಬಹುಮಟ್ಟಿಗೆ ಪಶ್ಚಾತ್ತಾಪಕ್ಕೀಡುಮಾಡಿತು. ಅಜಾಮಿಳನು, ಆಗಿನ ಸಂದರ್ಭದಲ್ಲಿ "ಏನು ಮಾಡಲು ಸಾಧ್ಯ! ನನಗೆ ಮುಂದೇನು ಗತಿ! ಅಗಾಧ ಪಾಪಮಾಡಿದ ನನಗೆ ಎಂತಹ ದುರ್ಗತಿಯು ಕಾದಿರುವುದೋ! ಏನು ಮಾಡಲಿ? ಯಾರಲ್ಲಿ ಹೇಳಿಕೊಳ್ಳಲಿ? ನನ್ನ ಈಗಿನ ಸಹವಾಸಿಗಳೆಂದರೆ ಅಜ್ಞಾನಿಗಳೂ ಕುಸಂಸ್ಕಾರಿಗಳೂ, ಮದ್ಯಪಾಯಿಗಳೂ ಮಾಂಸಭಕ್ಷಕರೂ, ಆದ ಈ ಅನ್ಯಾಯಕಾರಿಗಳೇ! ಇವರೆದುರಿಗೆ ನನ್ನ ಈ ಪರಿತಾಪವನ್ನು ಹೇಳಿಕೊಂಡರೆ ಪ್ರಯೋಜನವೇನು? ದೇವಾ, ಏನು ಮಾಡಲಿ? ಪುನಃ ದೈವಭಕ್ತರೂ, ಸತ್ಯ ಶೌಚ ನ್ಯಾಯ ಧರ್ಮ ಪರೋಪಕಾರಶೀಲರೂ, ಸಂಯಮಿಗಳೂ ಆದ ಭೂಸುರರ ಸಾಮೀಪ್ಯವೂ ಸಮಾಗಮವೂ ನನಗೆ ದೊರೆಯುವುವೇ! ಅಕ್ಕಟಾ, ಮಹಾಪಾಪಿಯಾದ ನಾನೆಲ್ಲಿ? ಅಂತಹ ಪುಣ್ಯಶೀಲರ ಸಮಾಗಮವೆಲ್ಲಿ! ಉತ್ತಮವಾದ ಬ್ರಹ್ಮಕುಲದಲ್ಲಿ ಹುಟ್ಟಿದ ನಾನು ಅಧಃಪತಿತನಾಗಿ ಇಂತಹ ದುರ್ಗತಿಗೀಡಾದೆನಲ್ಲಾ! ಅಯ್ಯೋ! ನನ್ನ ಉದ್ಧಾರಕ್ಕೆ ಮುಂದೆ ಮಾರ್ಗವೇನು? ಪರಮ ಪುರುಷನ ಪಾವನವಾದ ಶಿರಮುಡಿಯಮೇಲೆ ಏರಬೇಕಾದ ಪದ್ಮಪುಷ್ಪವು ಆಯತಪ್ಪಿ ಅಮೇಧ್ಯದಲ್ಲಿ ಬಿದ್ದಂತಾಯಿತಲ್ಲಾ ನನ್ನ ಬಾಳು! ಅಕ್ಕಟಾ ಹತವಿಧಿಯೇ!" ಎಂದು ಹಲವು ಬಗೆಯಲ್ಲಿ ಹಂಬಲಿಸಿಕೊಂಡು ಇದ್ದಂತೆಯೇ, ಅವನಿಗೆ ಆಕಸ್ಮಾತ್ತಾಗಿ ಮೃತ್ಯುಸನ್ನಿಹಿತವಾಯಿತು. ಒಂದಾನೊಂದುದಿನ ದೇಹಕ್ಕೆ ಸ್ವಲ್ಪ ಅಸೌಖ್ಯ ತೋರಿತು. ಹಾಸಿಗೆ ಹಿಡಿದು ಮಲಗಿದನು. ಹಾಗೇ ಒಂದೆರಡು ದಿನಗಳು ಕಳೆದುವು. ಅಷ್ಟರಲ್ಲೇ ಅವನ ದೇಹದಮೇಲೆ ಸ್ಮೃತಿ ತಪ್ಪಿದಂತಾಯಿತು. ಒಡನೆ ಅವನ ಪಾಪಿದೃಷ್ಟಿಗಳ ಎದುರಿಗೆ ಅತಿ ಭಯಂಕರವಾದ-ವಿಕಾರ ರೂಪದ ಮೂರು ಮಂದಿ ದೂತರು ಪಾಶ ಖಡ್ಗ ದಂಡ ಮುಂತಾದ ಆಯುಧಗಳನ್ನು ಧರಿಸಿ ಗೋಚರರಾದರು. ಅವರನ್ನು ಕಂಡೊಡ

ನೆಯೋ ಅಜಾಮಿಳನ ಮೈಯಲ್ಲಿ ನಡುಕವುಂಟಾಯಿತು. ಭಯದಿಂದ ಮೈಮೇಲಿನ ರೋಮಗಳೆಲ್ಲವೂ ನೆಟ್ಟಗೆ ಎದ್ದು ನಿಂತುವು. ಬಾಯಲ್ಲಿನ ದ್ರವ ವಾರಿ ಹೋಯಿತು. ಕಣ್ಣಿಗೆ ಕತ್ತಲೆ ಕವಿದಂತಾಯಿತು. ತನ್ನ ಸಹಾಯಕ್ಕಾಗಿ ಆ ಅಪಾಯ ವೇಳೆಯಲ್ಲಿ ಯಾರನ್ನು ಕೂಗಿ ಕರೆಯುವುದೆಂದು ತೋರಲಿಲ್ಲ. ಅದು ತನ್ನ ಮರಣ ವೇಳೆಯೆಂದೂ, ಅವರು ಯಮಭಟರೆಂದೂ ಮನಸ್ಸಿಗೆ ಬೋಧವಾಯಿತು. ತಾನು ಮಾಡಿದ ಅಗಾಧ ಪಾಪಗಳಿಗಾಗಿ ನರಕದಲ್ಲಿ ತನಗೆ ದುರಂತ ಶಿಕ್ಷೆಯಾಗುವುದೆಂಬುದಾದರೂ ಅವನಿಗೆ ಸಂಜ್ಞಾನವಿದ್ದಿತು. ಆದರೆ ಆಗಿನ ಸಂದರ್ಭದಲ್ಲಿ ಏನು ಮಾಡಲು ಸಾಧ್ಯ? ಈಚೆಗೆ ಅವನಿಗೆ ತನ್ನ ಮಾರ್ಗವು ತಪ್ಪೆಂದು ತೋರಿ ಪಶ್ಚಾತ್ತಾಪವುಂಟಾದ ಕಾಲದಿಂದ, ಬಹಿರಂಗವಾಗಿ ಮತ್ತಾವ ವ್ರತನಿಯಮ, ಪೂಜೆ ಪುರಸ್ಕಾರ ಮುಂತಾದ ಸತ್ಕಾರ್ಯಗಳನ್ನು ಮಾಡಲು ಅವಕಾಶವೂ ಅನುಕೂಲ್ಯವೂ ಇಲ್ಲದಿದ್ದರೂ, ಪರಮ ಪಾಪಿಯಾದ ತನ್ನನ್ನು ಸರ್ವೇಶ್ವರನೂ ಪಾಪವಿದೂರನೂ ಭಕ್ತವತ್ಸಲನೂ ಆದ ಶ್ರೀಮನ್ನಾರಾಯಣನಲ್ಲದೆ ಮತ್ತಾರೂ ಕಾಪಾಡತಕ್ಕವರಿಲ್ಲವೆಂಬುದೊಂದು ಆಶೋತ್ತರವು ಮನಸ್ಸಿಗೆ ಉಂಟಾಗಿದ್ದಿತು. ಪರಮ ಪಾವನವಾದ ಆ ನಾಮವನ್ನು ಮನಸ್ಸಿನಲ್ಲೇ ಸದಾ ಜಪಿಸಿಕೊಳ್ಳುತ್ತಾ ಕೇವಲ ಸೂತ್ರಚಾಲಿತವಾದ ಬೊಂಬೆಯಂತೆ ದಿನದ ಕೆಲಸ ಕಾರ್ಯಗಳನ್ನು ಸಾಗಿಸಿಕೊಳ್ಳುತ್ತಿದ್ದನು. ಈಗ ಯಮಭಟರ ದರ್ಶನವಾಗಿ, ತನಗೆ ಮರಣವೂ ತರುವಾಯ ದುರಂತ ನರಕ ಶಿಕ್ಷೆಯೂ ಪ್ರಾಪ್ತವಾಗುವವೆಂದು ತಿಳಿದೊಡನೆಯೇ, ಆ ಸರ್ವೇಶ್ವರನ ಮರೆಹೊಗುವುದೊಂದಲ್ಲದೆ ಮತ್ತಾವ ಉಪಾಯವೂ ಆಗ ಪ್ರಯೋಜನಕಾರಿಯಲ್ಲವೆಂಬುದು, ಅವನ ಮನಸ್ಸಿಗೆ ಹೊಳೆಯಿತು. ಆದರೆ, ಆ ವಿಕಾರ ರೂಪಿನ ಯಮಭಟರನ್ನೂ, ಅವರ ಕೈಗಳಲ್ಲಿದ್ದ ಭಯಂಕರ ಆಯುಧ ಮತ್ತು ಪಾಶಗಳನ್ನೂ ಕಂಡುದರಿಂದ ಉಂಟಾದ ಭೀತಿಯಲ್ಲಿ 'ನಾರಾಯಣ' ನೆಂಬ ಸರ್ವೇಶ್ವರನ ಆ ನಾಮವು ಅವನಿಗೆ ಮರೆತುಹೋಯಿತು. ತನ್ನನ್ನು ಈ ಸಂಕಟದಿಂದ ಪಾರು ಮಾಡತಕ್ಕವನು ದೇವರೇ ಎಂಬ ಯೋಚನೆಯು ಮನಸ್ಸಿಗೆ ಹೊಳೆಯುತ್ತಿದೆ! ಆದರೆ, ಆ ಆಪದ್ಬಂಧುವನ್ನು ಯಾವ ಹೆಸರಿನಿಂದ ಕೂಗಿ ಕರೆಯಬೇಕೆಂಬುದು ಮರೆತುಹೋಗಿದೆ. ಎಷ್ಟೆಷ್ಟೋ ಜ್ಞಾಪಿಸಿಕೊಂಡನು.

ಪ್ರಯೋಜನವಾಗಲಿಲ್ಲ. ಹಾಗೆ ಹೀಗೆ ಹೊರಳಾಡಿದನು. ತನ್ನ ದುರ್ವಿಧಿಗಾಗಿ ತಲೆಯನ್ನು ಎತ್ತಿ ಎತ್ತಿ ನೆಲಕ್ಕೆ ಕುಕ್ಕಿದನು. ಪ್ರಯೋಜನವಿಲ್ಲ. ಕೈಕಾಲುಗಳಿಂದ ಒದೆದಾಡಿದನು, ಉಪಯೋಗವಿಲ್ಲ. ಯಮಭಟರ ರೂಪವು ಬಹು ಸ್ಪಷ್ಟವಾಗಿ ಗೋಚರವಾಗುತ್ತಿದೆ. ಒಂದೊಂದಾಗಿ ಇಂದ್ರಿಯಗಳು ಸ್ವಾಧೀನ ತಪ್ಪುತ್ತಿವೆ! ನಾಲಿಗೆಯು ಏನೋ ಹೇಳಬೇಕೆಂದು ಹೋಗಿ ತೊದಲುತ್ತಿದೆ. ಕಣ್ಣಾಲಿಗಳು ಉದ್ದೇಶರಹಿತವಾಗಿ ತಿರುಗುತ್ತವೆ.— 'ಅಕ್ಕಟಾ, ತಂದೆಯೇ ಕಾಪಾಡು' ಎಂದು ಕೂಗಿ ಕರೆದು ಜನ್ಮಸಾರ್ಥಕ ಮಾಡಿಕೊಳ್ಳಲು, ಆ ದೇವದೇವನ ಪಾವನ ನಾಮವು ಜ್ಞಾಪಕಕ್ಕೆ ಬಾರದಲ್ಲಾ ಎಂದು ಮನಸ್ಸು ತಲ್ಲಣಿಸುತ್ತಿದೆ. ಅಜಾಮಿಳನ ಸ್ಥಿತಿಯು ಹೀಗೆ ಶೋಚನೀಯವಾಗಿದ್ದ ವೇಳೆಯಲ್ಲಿ ಅತ್ತ ಮನೆಯವರೆಲ್ಲರೂ ದೂರದಲ್ಲೇ ಕುಳಿತು ಕೆಲವರು ವ್ಯಸನ ಪಡುತ್ತಲೂ ಕೆಲವರು ಉದಾಸೀನ ಭಾವದಿಂದ ನೋಡುತ್ತಲೂ ಇದ್ದುದು ಅವನಿಗೆ ಕಾಣಿಸಿತು. ಅಷ್ಟರಲ್ಲಿ ಎಲ್ಲೋ ಆಡಲು ಹೋಗಿದ್ದ ಅವನ ಚಿಕ್ಕ ಮಗನಾದ ನಾರಾಯಣನೆಂಬ ಬಾಲಕನು ಅಲ್ಲಿಗೆ ಒಂದು ತನ್ನ ತಂದೆಯ ಪ್ರಾಣೋತ್ಕ್ರಮಣಕಾಲದ ವಿಚಿತ್ರ ಅವಸ್ಥೆಯನ್ನು ನೋಡುತ್ತಾ ನಿಂತನು. ಮರಣ ವೇದನೆಯಿಂದ ಅತ್ತಿತ್ತ ಹೊರಳುತ್ತಾ, ತಲೆಯನ್ನು ತಿರುಗಿಸುತ್ತಾ ಸಂಕಟಪಡುತ್ತಿದ್ದ ಅಜಾಮಿಳನು, ಅಕಸ್ಮಾತ್ತಾಗಿ ಒಮ್ಮೆ ತಿರುಗಿದಾಗ ಆ ಬಾಲಕನು ದೃಷ್ಟಿಗೋಚರನಾದನು. ಒಡನೆ ಅವನು ತನ್ನ ಮಗನೆಂಬ ಭಾವವು ಮನಸ್ಸಿಗೆ ಗೋಚರವಾಯಿತು. ಅವನ ಹೆಸರು 'ನಾರಾಯಣಾ' ಎಂಬ ಸಂಗತಿಯೂ ಸ್ಮರಣೆಗೆ ಬಂದಿತು. ಒಡನೆ ಮರೆತುಹೋಗಿದ್ದ, ಪಾಪವಿದೂರನೂ ಭಕ್ತವತ್ಸಲನೂ ಆಪದುದ್ಧಾರಕನೂ ಆದ ಸರ್ವೇಶ್ವರನ ಶ್ರೀಮನ್ನಾರಾಯಣ ನಾಮವು ಎಂಬ ವೃತ್ತಾಂತವೂ ಸ್ಮೃತಿಪಥಕ್ಕೆ ಬಂದಿತು. ತತ್ಕ್ಷಣವೇ 'ನಾರಾಯಣಾ' ಎಂದು ಒಮ್ಮೆ ಉಚ್ಚಸ್ವರದಿಂದ ಕೂಗಿಕೊಂಡನು.



## ಅಧ್ಯಾಯ ೪ "ನಾಮಮಹಿಮೆ"

'ನಾರಾಯಣಾ' ಎಂಬ ಪವಿತ್ರನಾಮವು, ಮರಣೋನ್ಮುಖನಾದ ಅಜಾಮಿಳನ ಬಾಯಿಂದ ಬಂದುದೇ ತಾವತಾಶವು. ಒಡನೆ, ದಿವ್ಯಸುಂದರ ವಿಗ್ರಹದಿಂದ ಶೋಭಿಸುತ್ತ ಕಿರೀಟ ಕುಂಡಲಧಾರಿಗಳೂ ಚತುರ್ಭುಜಾಂಕಿತರೂ ಆದ ಮೂರುಮಂದಿ ಮಹಾಪುರುಷರು ಆತನ ದೃಷ್ಟಿಗೋಚರರಾದರು. ಆ ವೇಳೆಗೆ ಮೊದಲೇ ಬಂದಿದ್ದ ಯಮದೂತರು, ಆತನ ಕೊರಳಿಗೆ ಪಾಶವನ್ನು ಹಾಕಿ ಎಳೆಯುತ್ತಿದ್ದಾರೆ. ಆ ದುರ್ದೈವಿಯು, ಅವರ ಭಯಂಕರ ರೂಪನ್ನು ನೋಡಿ, ಬೆದರಿ ತತ್ತರಗೊಂಡು, ದೇಹವೆಲ್ಲಾ ಕಂಪನವೆತ್ತಿ ಉಸಿರಾಡುವುದೂ ಪ್ರಯಾಸವಾಗುತ್ತಿರಲು, ತನ್ನ ಜೀವಿತದ ವಿಷಯದಲ್ಲಿ ನಿರಾಶನಾಗಿದ್ದಾನೆ. ಕೈಕಾಲುಗಳು ತಣ್ಣಗಾಗುತ್ತಿವೆ. ದೇಹದ ಒಂದೊಂದೇ ಅಂಗದಲ್ಲಿ ರಕ್ತಪರಿಚಲನೆಯು ನಿಂತುಹೋಗತೊಡಗಿದೆ. ನೇತ್ರಗಳು ಊರ್ಧ್ವ ದೃಷ್ಟಿಯುಳ್ಳವಾಗಿವೆ. ಅಂತಹ ಸ್ಥಿತಿಯಲ್ಲಿ ಜನ್ಮಾಂತರ ಸುಕೃತಯೋಗದಿಂದಲೋ ಎಂಬಂತೆ, ಆಪದ್ಬಾಂಧವನ ದಿವ್ಯನಾಮೋಚ್ಚಾರಣೆಯಿಂದ ಪ್ರಾಪ್ತರಾದ ಮೋಕ್ಷಂಡ ವಿಷ್ಣುದೂತರು, ಆತನನ್ನು ಪಾಶದಿಂದ ಬಂಧಿಸಿ ಎಳೆಯುತ್ತಿದ್ದ ಯಮದೂತರನ್ನು ಕಂಡು 'ಬೇಡ-ಬೇಡ, ಆತನನ್ನು ಬಂಧಿಸಬೇಡಿ-ಬಿಡಿ, ಬಿಡಿ' ಎಂದು ನುಡಿದು ನಿವಾರಿಸಿದರು. ದಂಡಧರನ ಪ್ರಚಂಡ ಶಾಸನದಿಂದ ಲೋಕದ ಜೀವಕೋಟಿಯು ಪ್ರಾಣಗಳನ್ನು ಸೆಳೆದೊಯ್ಯುತ್ತಿದ್ದ ಆ ದೂತರನ್ನು ಈವರೆಗೆ ಯಾರೂ ಹಾಗೆ ನಿವಾರಿಸಿದವರಿಲ್ಲ. ಇಂದು ಈ ಬಗೆಯ ತಡೆಯನ್ನುಂಟುಮಾಡಿದವರು ಯಾರಿರಬಹುದೆಂದು ಅವರು ಪರಮಾಶ್ಚರ್ಯ ಮಗ್ನರಾಗಿ ನೋಡುತ್ತಿರಲು, ಎದುರಿಗೆ ನಿಂತಿದ್ದ ಆ ದಿವ್ಯಮಂಗಳ ಮೂರ್ತಿಗಳು--'ಬಿಡಿ-ಬಿಡಿ, ಆವನನ್ನು ಬಂಧಿಸಬೇಡಿ' ಎಂದು ಪುನಃ ನುಡಿದರು.

ಆಶ್ಚರ್ಯಚಕಿತರಾದ ಯಮದೂತರು, ತಮ್ಮ ಉದ್ಯಮವನ್ನು ನಿಲ್ಲಿಸಿ, ಅವರನ್ನು ಕುರಿತು,--'ಎಲೈ ನೀವು ಯಾರು? ಯಾರ ಕಡೆಯವರು? ಎಲ್ಲಿಂದ ಬಂದಿರಿ? ನಾವು ಕಾಲಯಮನ ದೂತರೆಂಬುದನ್ನು ಅರಿಯಿರಾ? ಆತನ ಆಜ್ಞಾಬದ್ಧರಾಗಿ ಇವನ ಪ್ರಾಣಾಪಹರಣಕ್ಕಾಗಿ ಬಂದಿರುವ ನಮ್ಮನ್ನು

ನಿವಾರಿಸಲು ನಿಮಗೆಷ್ಟು ಧೈರ್ಯ ? ನೀವು ಇವನನ್ನು ಕಾಲಪಾಶದಿಂದ ಬಿಡಿ ಸಲು ಕಾರಣವೇನು ? ಇದೇನು, ನಿಮ್ಮ ರೂಪವು ವಿಚಿತ್ರವಾಗಿದೆಯಲ್ಲಾ ! ನೀವಾರು ದೇವತೆಗಳೆ, ಅಥವ ಉಪದೇವತೆಗಳೆ, ಸಿದ್ಧರೆ, ಗಂಧರ್ವರೆ? ಇಂತಹ ಸುರೂಪವು ನಿಮಗೆ ಪ್ರಾಪ್ತವಾದುದು ಹೇಗೆ ? ನಿಮ್ಮ ಕಣ್ಣು ಗಳು ಕಮಲ ದಳಗಳಂತೆ ಶೋಭಿಸುತ್ತಿವೆ. ನಿಮ್ಮ ನಡುವಿನಲ್ಲಿ ಸುವರ್ಣ ವರ್ಣರಂಜಿತವಾದ ಪಟ್ಟೆಮಡಿಯೂ, ತಲೆಯಲ್ಲಿ ದಿವ್ಯ ಕಿರೀಟ ಕುಂಡಲಗ ಳೂ ಪ್ರಕಾಶಿಸುತ್ತಿವೆ ಕಂಠದಲ್ಲಿ ಎಳೆಯ ತುಲಸೀ ದಳಗಳ ಹಾರವೂ ಪದ್ಮ ಮಾಲಿಕೆಯೂ ಮನೋಹರವಾಗಿವೆ. ಅಯ್ಯಾ, ನಿಮ್ಮ ಮುಖವು ಮಂದಹಾಸದಿಂದ ಕೂಡಿ ಪ್ರಿಯಜನಕವಾಗಿದೆ. ಆದರೆ, ನೀವು ನಮ್ಮನ್ನು ನಮ್ಮ ಪ್ರಭುವಿನ ಆಜ್ಞೆಯನ್ನು ಪಾಲಿಸದಂತೆ ಪ್ರತಿಬಂಧ ಪಡಿಸಲು ಕಾರ ಣವೇನು ? ನಿಮ್ಮ ಕೈಗಳಲ್ಲೂ ಶಂಖಚಕ್ರ ಗದಾ ಪದ್ಮಾದಿಗಳನ್ನೂ ಖಡ್ಗವೇ ಮುಂತಾದ ಆಯುಧಗಳನ್ನೂ ಧರಿಸಿರುವುದರಿಂದ ನೀವೂ ದುಷ್ಟ ಶಿಕ್ಷಣೆ ಶಿಷ್ಟ ರಕ್ಷಣೆಗಳನ್ನು ಮಾಡತಕ್ಕವರೆಂಬುದು ಸ್ವತಸ್ಸಿದ್ಧವಾಗಿ ತೋರುತ್ತಿವೆ. ಹೀಗಿರುವಲ್ಲಿ, ಮಹಾ ಪಾಪಿಯಾದ ಇವನನ್ನು ಕೊಂಡೊ ಯ್ಯುವ ನಮ್ಮನ್ನು ನಿವಾರಿಸಲು ಕಾರಣವೇನು ? ಇದು ನಿಮಗೆ ನ್ಯಾಯ್ಯ ವೇ ?" ಎಂದರು.

ಯಮದೂತರ ವಾಕ್ಯಗಳನ್ನು ಪುಣ್ಯಶೀಲರಾದ ವಿಷ್ಣುದೂತರು ಕೇಳಿ -"ಎಲೈ ನೀವು ಯಮಧರ್ಮರಾಜನ ಭಟರೆಂದಿರಲ್ಲವೆ ? ಹಾಗಾದರೆ, ನಿಮಗೆ ಧರ್ಮವೆಂದರೇನು, ಅಧರ್ಮವೆಂದರೇನು ಎಂಬುದರ ಪರಿಚಯವಿರಬೇಕು ! ಅಧರ್ಮಕ್ಕಾಗಿ ನೀವು ಪಾಪಿಗಳನ್ನು ದಂಡಿಸುತ್ತೇವೆಂದಿರಲ್ಲವೆ ? ಇವನು ಪಾಪಿಯೆ, ದಂಡನಾರ್ಹನೆ ? ನಿಮ್ಮ ದಂಡನಾರಹಸ್ಯವೇನು ? ಲೋಕದಲ್ಲಿ ಕರ್ಮ ಮಾಡುವ ಸಮಸ್ತರೂ ದಂಡನಾರ್ಹರೆ ? ಇದನ್ನು ತಿಳಿಸಿ" ಎಂದರು.

'ಹಾಗಾದರೆ ಕೇಳಿ, ವೇದ ವಿಹಿತವಾದುದಾವುದೋ, ಅದು ಧರ್ಮವು. ಅದಕ್ಕೆ ವಿರುದ್ಧವಾದುದೆಲ್ಲವೂ ಅಧರ್ಮವೆಂದು ತಿಳಿಯಿರಿ. ವೇದವೆಂಬು ದು ಸತ್ಯಸ್ವರೂಪಿಯಾದ ಭಗವಾನ್ ನಾರಾಯಣನಿಂದ ವ್ಯಕ್ತವಾಗಿ ಲೋಕ ದಲ್ಲಿ ವ್ಯಾಪಿಸಿರುವುದು. ಅನಾದಿಯೂ ಅವಿನಾಶಿಯೂ ಆದ ಅದರಲ್ಲಿ ದೋ

ಷಗಳನ್ನೆಣಿಸದೆ, ಅದರ ವಿಧಿಗಳನ್ನು ಶಿರಸಾವಹಿಸ್ಯಮಾಡಿ ನಡೆಯತಕ್ಕದೇ ಪ್ರತಿಯೊಬ್ಬನ ಆದ್ಯ ಕರ್ತವ್ಯವಾಗಿದೆ. ಧರ್ಮನಿರ್ಣಯವು ಸರ್ವವ್ಯಾಪ್ತ ನಾದ ನಾರಾಯಣನಿಂದಲೇ ಆಗಿರುವುದರಿಂದ ಅದಕ್ಕೆ ವ್ಯತಿರಿಕ್ತವಾಗಿ ಆಚ ರಿಸತಕ್ಕುದೆಲ್ಲವೂ ಭಗವದ್ವಿರೋಧವಾದ ಕಾರ್ಯವೆಂಬುದರಲ್ಲಿ ಸಂಶಯವೇ ಇಲ್ಲ. 'ಧರ್ಮಾಧರ್ಮಗಳು ಅನೇಕವಾಗಿವೆ. ಅವುಗಳ ನಿರ್ಣಯಮಾಡಿ ಪ್ರಾಣಿಗಳನ್ನು ಶಿಕ್ಷಿಸುವ ಕಾರ್ಯವು ನಿಮ್ಮಿಂದ ನಡೆಯುವ ಪರಿಯೇಗೆ' ಎಂದು ನೀವು ಕೇಳಬಹುದು. ಆದರೆ ಕೇಳಿ. ಮನುಷ್ಯರು ನಡೆಸತಕ್ಕ ಕಾ ರ್ಯಗಳಿಗೆ, ಸೂರ್ಯ, ಅಗ್ನಿ, ಆಕಾಶ, ದೇವತೆಗಳು, ಚಂದ್ರ, ಸಂಧ್ಯಾಕಾ ಲಗಳು, ಜಲ, ಭೂಮಿ, ಕಾಲ, ಮತ್ತು ನಮ್ಮ ಪ್ರಭುವಾದ ಯಮಧರ್ಮ ರಾಜ ಇವರು ಸಾಕ್ಷಿಭೂತರಾಗಿರುವರು. ಸರ್ವಕಾಲ ಸರ್ವಾವಸ್ಥೆಗಳಲ್ಲಿ ಪ್ರ ತ್ಯಕ್ಷರಾಗಿರುವ ಈ ಸಾಕ್ಷಿಗಳ ಕಣ್ಣಿಗೆ ಕಾಣದಂತೆ ಯಾವನೂ ಯಾವಕಾ ರ್ಯ ಮಾಡುವುದೂ ಎಂದಿಗೂ ಸಾಧ್ಯವಿಲ್ಲ. ಹಾಗೆ ಅವನು ಮಾಡುವ ಕಾರ್ಯಗಳಲ್ಲಿ ಸತ್ಕರ್ಮಗಳಿಗೆ ಸ್ವರ್ಗಸುಖವೂ ದುಷ್ಕರ್ಮಗಳಿಗೆ ನರಕಯಾ ತನೆಯೂ ತಪ್ಪದೆ ಉಂಟಾಗುತ್ತಿರುವುವು. ಪಾಪಮಾಡಿದವನಿಗೆ ಶಿಕ್ಷೆಯ ನ್ನು ತಪ್ಪಿಸಿಕೊಳ್ಳುವುದಕ್ಕೆ ಹೇಗೆ ಸಾಧ್ಯವಿಲ್ಲವೋ, ಹಾಗೆಯೇ ಪುಣ್ಯಕಾ ರ್ಯ ಮಾಡಿದವನಿಗೆ ಸ್ವರ್ಗವಾಸದ ಸುಖಸಂತೋಷಗಳಾದರೂ ಅನಪೇಕ್ಷಿ ತಗಳಾಗಿಯೇ ದೊರೆಯುವುವು. ಇದರಿಂದ ಧರ್ಮಾಧರ್ಮ ನಿರ್ಣಯಮಾಡಿ ಪ್ರಾಣಿಗಳಿಗೆ ಸ್ವರ್ಗವಾಸ-ನರಕಯಾತನೆಗಳನ್ನು ನಿಯಮಿಸತಕ್ಕ ದೇವಾಧಿ ಪರು ಪಕ್ಷಪಾತಿಗಳಾಗಿಲ್ಲವೆಂಬುದನ್ನು ನೀವು ನಿಶ್ಚಯವಾಗಿ ತಿಳಿಯಿರಿ. ಪ್ರಕೃತ, ಇವನನ್ನು ನೀವು ನಿವಾರಿಸಲು ಬಂದಿರಲ್ಲವೆ? ಅದು ಅಸಂಗತ ವೆಂದು ನಮ್ಮ ಅಭಿಪ್ರಾಯ! 'ಇವನು ಪಾಪಿಯೆ? ದಂಡನಾರ್ಹನೆ?' ಎಂದು ಕೇಳಿದಿರಲ್ಲವೆ? ಇವನ ಚರಿತ್ರೆಯನ್ನು ಹೇಳುವೆವು ಕೇಳಿ! ಇವನು ಮಹಾ ಪುಣ್ಯಶೀಲರೂ ಧರ್ಮಮಾರ್ಗ ತತ್ಪರರೂ ಕರ್ಮನಿಷ್ಠರೂ ಆದ ಬ್ರಾಹ್ಮಣ ಮಾತಾಪಿತೃಗಳ ಗರ್ಭಸಂಭೂತನಾಗಿದ್ದರೂ, ಇವನು ಮಾಡಿದ ಪಾಪ ಕಾರ್ಯಗಳಿಗೆ ಮಿತಿಯೆಂಬುದೇ ಇಲ್ಲ. ಇವನೂ ಬಾಲ್ಯದಲ್ಲಿ ಬ್ರಹ್ಮ ಚರ್ಯ ವ್ರತವನ್ನಾಚರಿಸಿ, ವೇದ ಶಾಸ್ತ್ರಾದಿಗಳನ್ನು ಅಧ್ಯಯನಮಾಡಿ, ಸನ್ಮಾರ್ಗಾವಲಂಬಿಯಾಗಿಯೇ ಇದ್ದನು. ಆದರೇನು? ಮುಂದೆ ಯೌವನ

ಪ್ರಾಪ್ತಿಯಾದೊಡನೆಯೇ ವಿಷಯೇಂದ್ರಿಗಳ ಆಕರ್ಷಣೆಗೆ ಒಳಗಾಗಿ ಅಗಾಧ ದುಷ್ಕರ್ಮಗಳನ್ನು ಮಾಡಿದನು. ಮದ್ಯಪಾಯಿಯೂ ವ್ಯಭಿಚಾರಿಣಿಯೂ ಆದ ಶೂದ್ರಸ್ತ್ರೀಯಳ ರೂಪು ಯೌವನಾದಿಗಳಿಗೆ ಮರುಳಾಗಿ ತನ್ನ ಜಾತಿ ನೀತಿ ಕುಲಕರ್ಮಗಳಿಗೆಲ್ಲ ತಿಲಾಂಜಲಿಯನ್ನಿತ್ತು, ಅವಳನ್ನು ಬೆರೆದು ಅವಳಂತೆಯೇ ತಿಂದು ಕುಡಿದು ದುಷ್ಕಾರ್ಯ ನಿರತನಾದನು. ಬ್ರಾಹ್ಮಣ ಧರ್ಮಗಳಾದ ಸ್ನಾನ ಸಂಧ್ಯಾವಿಗಳೂ ವ್ರತ ಪಾರಾಯಣಾದಿಗಳೂ ನಿರ್ನಾಮವಾದುವು. ಸಾಲದುದಕ್ಕೆ ಈತನು ವೃದ್ಧರಾದ ತಂದೆತಾಯಿಗಳು ಕೊರಗಿ ಕೊರಗಿ ಪ್ರಾಣಬಿಡಲು ಕಾರಣನಾದನು. ಅಗ್ನಿಸಾಕ್ಷಿಕವಾಗಿ ಪಾಣಿಗ್ರಹಣಮಾಡಿದ್ದ ಧರ್ಮಪತ್ನಿಯನ್ನು ತ್ಯಜಿಸಿ, ಅವಳು ಆತ್ಮಹತ್ಯೆಮಾಡಿಕೊಳ್ಳಲೂ ಕಾರಣನಾದನು. ಎಲೈ, ಮನೋಹರ ಸ್ವರೂಪಿಗಳೇ-'ಇವನೇನು ಪಾಪಿಯೇ-ದಂಡನಾರ್ಹನೆ?' ಎಂದು ಪ್ರಶ್ನೆಮಾಡಿದಿರಲ್ಲವೆ? ನೀವೇ ಹೇಳಿರಿ, ಇವನು ದಂಡನಾರ್ಹನಲ್ಲವೇ ಎಂದು, ಇವನು ಮಹಾ ಪಾಪಿಯಲ್ಲವೇ ಎಂದು. ಇಂತಹ ಘೋರಪಾಪಿಗೆ ಶಿಕ್ಷೆಯಾಗತಕ್ಕುದು ಧರ್ಮವಲ್ಲವೆ ಹೇಳಿರಿ. ಆದುದರಿಂದಲೇ ನಾವು ಧರ್ಮರಾಜನ ಆಜ್ಞಾಬದ್ಧರಾಗಿ ಈ ಪಾಪಿಯನ್ನು ಎಳೆದೊಯ್ಯು ದಂಡಧರನ ಸನ್ನಿಧಿಯಲ್ಲಿ ಒಪ್ಪಿಸಲು ಬಂದಿದ್ದೇವೆ. ಯಮದಂಡದಿಂದ ಶಿಕ್ಷಿತನಾದಲ್ಲದೆ, ಇವನ ಪಾಪಗಳಿಗೆ ತಕ್ಕ ಪ್ರಾಯಶ್ಚಿತ್ತವಾಗದು. ಈ ವೇದ ಪ್ರತಿಪಾದಿತ ಧರ್ಮಕ್ಕೆ ವಿಘ್ನವನ್ನುಂಟುಮಾಡತಕ್ಕುದು ನಿಮಗೆ ಸರಿಯಲ್ಲ. ನಮ್ಮ ಕಾರ್ಯಕ್ಕೆ ಅಡ್ಡ ಬರಬೇಡಿ" ಎಂದು ನುಡಿದು ಅವನ ಕೊರಳಿಗೆ ಪುನಃ ಪಾಶವನ್ನು ಬೀಸಿದರು.

ಯಮದೂತರ ಆ ಕಾರ್ಯವನ್ನು ಕಂಡ ವಿಷ್ಣುದೂತರು,—'ಎಲೈ ಪುನಃ ಏನು ಕಾರ್ಯ ಮಾಡುತ್ತಿರುವಿರಿ? ಏನು, ಧರ್ಮ ಕರ್ಮಗಳನ್ನು ನಿರ್ಣಯಿಸಿ, ಪಾಪಿಗಳನ್ನು ಶಿಕ್ಷಿಸಿ, ಪುಣ್ಯವಂತರನ್ನು ಗೌರವಿಸಬೇಕಾದ ಧರ್ಮರಾಜನ ಸಭೆಯಲ್ಲೂ ಅಧರ್ಮವು ಪ್ರವೇಶಗೊಂಡಿರುವಂತೆ ಕಂಡುಬರುತ್ತಿದೆಯಲ್ಲಾ! ಪಾಪಿಗಳನ್ನು ದಂಡಿಸುವುದು ಧರ್ಮವಾದರೂ, ಹಾಗೆ ದಂಡಿಸುವಿಕೆಯಲ್ಲಿ ಉದ್ದೇಶವೇನು! ಅವನಲ್ಲಿ ತನ್ನ ಪಾಪಕ್ಕೆ ಪಶ್ಚಾತ್ತಾಪವನ್ನು ಹುಟ್ಟಿಸಿ, ಮುಂದೆ ಅವನು ಅಂತಹ ಅಕಾರ್ಯ ಮಾಡದಂತೆ ಧರ್ಮಜಾಗೃತಿಯನ್ನು ಉಂಟುಮಾಡಬೇಕೆಂಬುದೇ ಅಲ್ಲವೆ? ಈಗ ಈ ಅಜಾ

ಮಿಳನನ್ನು ಯಮದಂಡನೆಗೆ ಗುರಿಮಾಡುವುದರಲ್ಲಿ ನೀವು ನಿಮ್ಮ ಈ ಕರ್ತವ್ಯದಿಂದ ಚ್ಯುತರಾದಂತೆ ಆಗುತ್ತಲಿದೆ! ಏಕೆಂಬಿರಾ, ನಿಮ್ಮ ಶಿಕ್ಷೆಯಿಂದ ಇವನಲ್ಲಿ ಯಾವ ಪರಿಣಾಮ ಉಂಟಾಗಬೇಕೋ, ಅದು ಈಗಲೇ ಉಂಟಾಗಿ ಹೋಗಿದೆ. ಇವನು ತಾನು ಜ್ಞಾತಾಜ್ಞಾತವಾಗಿ ಮಾಡಿದ ಅಗಾಧ ಪಾಪಗಳಿಗಾಗಿ ವಿಶೇಷ ಪಶ್ಚಾತ್ತಾಪಪಟ್ಟಿದ್ದಾನೆ. ಮಾತ್ರವಲ್ಲ - ಅಂತ್ಯಕಾಲದಲ್ಲಿ ಸರ್ವ ಪಾಪನಿವಾರಕವಾದ ಭಗವನ್ನಾಮವನ್ನು, 'ನಾರಾಯಣಾ' ಎಂದು ಉಚ್ಚರಿಸಿರುತ್ತಾನೆ. ಹೀಗೆ ಅಂತ್ಯಕಾಲದಲ್ಲಿ ಮಾಡಿದ ಭಗವನ್ನಾಮೋಚ್ಚಾರಣೆಯ ಮೂಲಕ, ನೀವು ಹೇಳುವಂತೆ ಈತನು ಈ ಜನ್ಮದಲ್ಲಿ ಮಾಡಿದ ಪಾಪ ಮಾತ್ರವೇ ಅಲ್ಲ; ಜನ್ಮಜನ್ಮಾಂತರಗಳಲ್ಲಿ ಆರ್ಜಿಸಿದ ಮಹತ್ಪಾಪ ರಾಶಿಗಳೆಲ್ಲವೂ ನಾಶವಾಗಿ ಹೋದುವು. ಈ ರೀತಿಯಲ್ಲಿ ತನ್ನ ಸಮಸ್ತ ಪಾಪಗಳೂ ನಾಶವಾಗಲು, ಪರಮ ಪರಿಶುದ್ಧನಾಗಿರುವ ಈತನನ್ನು ಈಗ ನೀವು ಶಿಕ್ಷಿಸುವುದು ಸರ್ವಥಾ ನ್ಯಾಯವಲ್ಲ. ಧರ್ಮಾಚರಣೆಗೆ ಮುಖ್ಯಸ್ಥಾನೀಯನಾದ ಯಮಧರ್ಮರಾಜನ ಆಸ್ಥಾನದಲ್ಲೇ ಧರ್ಮಸೂಕ್ಷ್ಮ ವಿಚಾರವಿಲ್ಲದೆ, ಹೀಗೆ ನಿರಪರಾಧಿಗಳಿಗೂ ಪವಿತ್ರಾತ್ಮರಿಗೂ ಶಿಕ್ಷೆಯಾಗುತ್ತದೆಂದು ಲೋಕದಲ್ಲಿ ಪ್ರಚಾರವಾದರೆ, ಮುಂದೆ ಧರ್ಮಸಂಕರವಾಗದಿರದು. ನಿಮ್ಮ ಕಾರ್ಯವನ್ನು ನಿಲ್ಲಿಸಿರಿ. ಶುದ್ಧನಾದ ಈತನು ನಮಗೆ ಸೇರತಕ್ಕವನು' ಎಂದರು.

ಮಹಾ ಪಾಪಿಯೆಂದು ನಿರ್ಧರವಾದ ಅಜಾಮಿಳನ ಪಕ್ಷವನ್ನು ವಹಿಸಿ ವಿಷ್ಣುದೂತರು, ನುಡಿದ ಮಾತುಗಳು ಯಮದೂತರಿಗೆ ತೃಪ್ತಿಯನ್ನುಂಟುಮಾಡಲಿಲ್ಲ.—'ಇದೇನನ್ಯಾಯವು! ಜನ್ಮಾರಭ್ಯ ಅಗಾಧ ಪಾಪ ಮಾಡಿದ ಮನುಷ್ಯನು ಕೊನೆಗಾಲದಲ್ಲಿ ಒಂದುವೇಳೆ 'ನಾರಾಯಣಾ' ಎಂದು ಬಾಯಲ್ಲಿ ನುಡಿದ ಮಾತ್ರಕ್ಕೆ ಅವನ ಪಾಪಗಳೆಲ್ಲ ನಾಶವಾದಂತಾಯಿತೇ! ಹಾಗಿದ್ದರೆ ಪೂರ್ವ ಮಹರ್ಷಿಗಳು ಪಾಪನಾಶಕ್ಕಾಗಿ ಅತ್ಯಂತ ಸುಲಭವೂ, ನಿರ್ಬಾಧಕವೂ ಆದ ಈ ಉಪಾಯವನ್ನು ಬಿಟ್ಟು, ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳು, ನಿಯಮಗಳು ಉಪವಾಸಗಳು, ತಪಸ್ಸು ತೀರ್ಥಕ್ಷೇತ್ರಗಳ ಯಾತ್ರೆಗಳು ಮುಂತಾದುವುಗಳನ್ನು ಏತಕ್ಕಾಗಿ ಉಂಟುಮಾಡಿದರು? ಇದೇನು, ಧರ್ಮಸಮ್ಮತವಾಗಿ ಕರ್ತವ್ಯಪಾಲನೆಯಲ್ಲಿ ತೊಡಗಿದ ನಮ್ಮನ್ನು

ವಿಚಾರವಿಲ್ಲದೆ, ಹೀಗೆ ನಿರ್ಬಂಧಿಸುವಿರಲ್ಲಾ! ಬಿಟ್ಟು ನಡೆಯಿರಿ. ಸ್ವರ್ಣ ಸ್ತೇಯ ಸುರಾಪಾನ ಪರದಾರಗಮನ, ಮಾತಾಪಿತೃ ಹತ್ಯ, ಸ್ತ್ರೀ ಹತ್ಯ ದೈವದ್ರೋಹ ಗುರುದ್ರೋಹಗಳು ಧರ್ಮಭ್ರಷ್ಟತೆ ಮುಂತಾದ ಅಸಂಖ್ಯ ಪಾಪಗಳು ಇವನಿಗೆ ಸುತ್ತಿಕೊಂಡಿವೆ. ಇಂತಹ ಅಸಂಖ್ಯ ಪಾಪಸಮೂಹ ದಿಂದ ಕೂಡಿದ ಇವನು ಯಮದಂಡದಿಂದ ಶಿಕ್ಷೆಯಾಗದೆ ಶುದ್ಧನಾಗುವು ದೆಂದರೇನು? ಈ ನಿಮ್ಮ ಒಣ ಚರ್ಚೆಯು ಸಾಕು?" ಎಂದು ಅವನ ಪ್ರಾಣವನ್ನು ಪಾಶದಿಂದ ಕಟ್ಟಿ ಎಳೆದು ಹೊರಡಲುದ್ಯುಕ್ತರಾದರು. ಯಮದೂತರ ಆ ಸನ್ನಾಹವನ್ನು ಕಂಡ ವಿಷ್ಣುದೂತರು—'ಎಲೈ ನಿಮಗೆ ಯುಕ್ತಾಯುಕ್ತ ವಿವೇಚನೆಯಿರುವಂತೆ ತೋರಲಿಲ್ಲ. ಕೊನೆಗಾಲದಲ್ಲಿ ತನ್ನ ರಕ್ಷಕರನ್ನು ಕಾಣದೆ ಆರ್ತನಾಗಿ 'ನಾರಾಯಣಾ' ಎಂದು ಅರಚಿ ಕೊಂಡ, ಇವನ ಪ್ರಾರ್ಥನೆಯನ್ನು ಕೇಳಿ ಭಕ್ತವತ್ಸಲನಾದ ವೈಕುಂಠಾಧಿ ಪನು, ತನ್ನೀ ಭಕ್ತನನ್ನು ಬಳಿಗೆ ಕರೆತರಬೇಕೆಂದು ನಮ್ಮನ್ನು ಕಳುಹಿಸಿರ ಲಾಗಿ, ಇನ್ನೂ ಇವನಲ್ಲಿ ಪಾಪಶೇಷವು ನಿಂತಿದೆ ಎಂಬಿರಾ? ಇದರಿಂದ ಭಗವನ್ನಾಮವೆಂದರೇನು? ಅದರ ಸಾಮರ್ಥ್ಯವೆಂಥದು ಎಂಬುದರ ಪರಿ ಚಯವೇ ನಿಮಗಿಲ್ಲವೆಂಬುದು ನಿಶ್ಚಯವಾಯಿತು. ಕೃಚ್ಛ್ರ ಚಾಂದ್ರಾಯ ಣಾದಿಗಳು ಪಾಪಹಾರಕವೆಂದು ನುಡಿದಿರಲ್ಲವೆ? ಅದು ಸುಳ್ಳಲ್ಲ. ಆದರೆ ಯಾವುದೊಂದು ಪಾಪದ ಪರಿಹಾರೋದ್ದೇಶದಿಂದ ಆಯಾ ಕರ್ಮ ಮಾಡ ಲ್ಪಡುವುದೋ ಆ ಒಂದು ಪಾಪ ಮಾತ್ರವೇ ನಾಶವಾಗಿ ಮನುಷ್ಯನು ಶುದ್ಧನಾಗುವನು. ಆದರೆ ಭಗವನ್ನಾಮ ಸಂಕೀರ್ತನೆಯಿಂದ ಹಾಗಲ್ಲ. ಸ್ವರ್ಣಸ್ತೇಯ ಸುರಾಪಾನ ಬ್ರಹ್ಮಹತ್ಯಾದಿ ಮಹಾ ಪಾತಕಗಳೂ ಅಲ್ಲದೆ ಜನ್ಮಜನ್ಮಾಂತರಾರ್ಜಿತ ಅಗಾಧವಾದ ಪಾಪರಾಶಿಗಳೂ ನಿರ್ನಾಮವಾಗುವುವು. ಅದು ಹೇಗೆಂಬಿರಾ! ಪಾಪದ ಮೂಲಸ್ಥಾನವು ಮನಸ್ಸೇ ಅಲ್ಲವೆ! ಮೇಲೆ ಹೇಳಿದ ಚಾಂದ್ರಾಯಣಾದಿ ಕರ್ಮಗಳಿಂದ ಉಂಟಾಗುವ ಫಲಕ್ಕಿಂತಲೂ, 'ಸರ್ವಪಾಪ ನಿವಾರಕನು ನಾರಾಯಣನು' ಎಂಬ ದೃಢಭಕ್ತಿಯಿಂದ ಮನ ಸ್ಸಿನ ಮೇಲುಂಟಾಗುವ ಪರಿಣಾಮವು ಅತಿಶಯವಾದುದು. ಈ ದೃಢ ಭಕ್ತಿಯು ಮನಸ್ಸನ್ನು ವಿಶೇಷ ರೀತಿಯಿಂದ ಶುದ್ಧಿಗೊಳಿಸಿ, ಮನಸ್ಸಮು ದ್ರದ ಅಡಿಯಲ್ಲಿ ಅನಾದಿ ಕಾಲದಿಂದಲೂ ತಂಗಿ ಕುಳಿತಿರುವ ಪಾಪಬೀಜ ಗಳನ್ನೆಲ್ಲ ಸುಟ್ಟುಬಿಡುವುದು. ಹಾಗೆ ಸುಟ್ಟುಹೋದ ಬೀಜಗಳು ಪುನಃ

ಮೊಳೆಯುವುವೇ ? 'ಅಜಾಮಿಳನು ಅಂತಹ ಅಗಾಧ ನಿಷ್ಠೆಯಿಂದ - ನಿಶ್ಚಲ ಭಕ್ತಿಪೂರ್ವಕವಾಗಿ ಸ್ಮರಿಸಿದನೋ ? ತನಗೆ ನರಕಯಾತನೆಯುಂಟಾಗುವುದಲ್ಲಾ ಎಂಬ ಬೆದರಿಕೆಯಿಂದ ಆರ್ತನಾಗಿ ಕೂಗಿಕೊಂಡ ಅವನೂ ಮಹಾ ಭಕ್ತನೋ?' ಎಂಬಿರಾ, ಕೇಳಿ ಭಗವಾನ್ ನಾರಾಯಣ ಮೂರ್ತಿಯು, ಆರ್ತ ಜಿಜ್ಞಾಸು ಅರ್ಥಾರ್ಥಿ ಜ್ಞಾನಿ ಈ ನಾಲ್ವರೂ ತನ್ನ ಭಕ್ತರೇ ಎಂದು ಹೇಳುವಲ್ಲಿ ಆರ್ತನನ್ನು ಮೊದಲನೆಯವನನ್ನಾಗಿ ಹೇಳಿರುವನು. ಪರಮ ದಯಾಶರಧಿಯಾದ ಶ್ರೀಕೃಷ್ಣಮೂರ್ತಿಯು, ತನ್ನ ಭಕ್ತರ ಅಶಕ್ತತೆಗಳನ್ನು ಸಂಪೂರ್ಣವಾಗಿ ಅರಿತ ಮಹಾ ಪ್ರಭುವಾದ್ದರಿಂದ,

ಜ್ಞಾನತೋಃ ಜ್ಞಾನತೋಃ ವಾಪಿ ವಾಸುದೇವಸ್ಯ ಕೀರ್ತನಾತ್ |
ತತ್ಸರ್ವಂ ವಿಲಯಂ ಯಾತಿ ತೋಯಸ್ಥಂ ಲವಣಂ ಯಥಾ ||

ಎಂಬಂತೆ, ಅವನು ಜ್ಞಾನದಿಂದಲೇ ಆಗಲೀ ಅಜ್ಞಾನದಿಂದಲೇ ಆಗಲೀ ತನ್ನ ಕೀರ್ತನೆ ಮಾಡಿದರೆ ಸಾಕು, ಅವರ ಸರ್ವ ಪಾತಕಗಳನ್ನೂ ನೀರಿನಲ್ಲಿ ಬಿದ್ದ ಉಪ್ಪು ಹೇಗೆ ಕರಗಿ ನಿರ್ನಾಮವಾಗುವುದೋ ಹಾಗೆ ನಿರ್ನಾಮಗೊಳಿಸಲು ಸರ್ವದಾ ಸಿದ್ಧನಾಗಿರುವನು. ಹರಿನಾಮಕ್ಕಿರುವ ಶಕ್ತಿಯು ಅಗಾಧವಾದುದು. 'ಅಜ್ಞಾನಿಯಾದವನಿಗೆ ಅದರ ಅದ್ಭುತ ಶಕ್ತಿಯ ಪರಿಜ್ಞಾನವುಂಟೆ ? ಹಾಗಿಲ್ಲದಿರುವಾಗ ಅಂಥವನು ಹರಿನಾಮಸ್ಮರಣೆ ಮಾಡಿದ ಮಾತ್ರದಿಂದ ಹೇಗೆ ಪಾಪ ಪರಿಹಾರವಾಗುತ್ತದೆ' ಎಂಬಿರಾ ಕೇಳಿ,

ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ |
ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವಹಿ ಪಾವಕಃ ||

'ಅಗ್ನಿಯು ಸುಡುತ್ತದೆಂಬ ಸಂಗತಿಯನ್ನು ತಿಳಿಯದೆ ಅದನ್ನು ಸ್ಪರ್ಶಿಸಿದರೂ ಅದು ಹೇಗೆ ತನ್ನ ಸ್ವಭಾವಸಿದ್ಧ ಗುಣದಿಂದ ಸ್ಪರ್ಶಮಾಡಿದವನನ್ನು ದಹಿಸದೆ ಬಿಡದೋ, ಹಾಗೆಯೇ ಹರಿನಾಮದಲ್ಲಿ ಇಂತಹ ಅಗಾಧ ಸತ್ವವಿದೆಯೆಂಬುದನ್ನು ತಿಳಿಯದೆ ಅದನ್ನು ಸ್ಮರಿಸಿದವನೂ ಸಹ ಅಗಾಧ ಜ್ಞಾನಜ್ಯೋತಿಸ್ವರೂಪಿಯಾದ ಆ ಪವಿತ್ರ ನಾಮದಿಂದ ಸರ್ವ ಪಾಪ ನಿರ್ಮುಕ್ತನಾಗಿ ಪರಮ ಪರಿಶುದ್ಧನಾಗುವನು.' ಯಾವ ಯಾವ ರೋಗ ನಿವಾರಕ ಸಾಮರ್ಥ್ಯವುಳ್ಳ ಮೂಲಿಕೆಗಳ ಸಮ್ಮಿಶ್ರಣದಿಂದ ಈ ಔಷಧವು ಸಿದ್ಧವಾಗಿದೆ-' ಎಂಬ ಸಂಗತಿಯು ತಿಳಿಯದಿದ್ದರೂ, ಆ ಔಷಧ ಸೇವನೆಯಿಂದ ಹೇಗೆ ರೋಗಿಯು ತನ್ನ ರೋಗ ಬಾಧೆಯಿಂದ ನಿರ್ಮುಕ್ತನಾಗು

ವನೋ ಹಾಗೆಯೇ, ಎಲೈ ದಂಡಧರನ ದೂತರೇ, ಈ ಅಜಾಮಿಳನು, ಆರ್ತನಾಗಿಯಾಗಲೀ, ನರಕಯಾತನೆಗೆ ಬೆದರಿಯಾಗಲೀ, ಅಥವ ಮತ್ತಾವ ಕಾರಣದಿಂದಲೇ ಆಗಲೀ, ಜ್ಞಾನದಿಂದಲೋ ಅಜ್ಞಾನದಿಂದಲೋ ಎಂತೇ ಆಗಲೀ ಭಗವನ್ನಾಮ ಸ್ಮರಣೆ ಮಾಡಿದ್ದಾನಾದ್ದರಿಂದ, ಅದರಿಂದ ಉಂಟಾಗಬೇಕಾದ ಫಲವು ಆಗಿಯೇ ಆಗುತ್ತದೆ. ಇದರೆ, ಮಾಹಾತ್ಮ್ಯ ಜ್ಞಾನ ಪೂರ್ವಕ ಸುದೃಢ ಭಕ್ತಿಭಾವದಿಂದ ಪ್ರೇರಿತನಾಗಿ ಅನನ್ಯ ಚಿಂತನೆಯಿಂದ ನಿಯಮಬದ್ಧನಾಗಿ ಮಾಡುವ ಭಕ್ತೋತ್ತಮನ ಪ್ರಾರ್ಥನೆಗೆ ಭಗವಂತನು ಇನ್ನೆಂತಹ ಉತ್ಕೃಷ್ಟ ರೀತಿಯಿಂದ ಫಲಪ್ರದನಾಗುವನೋ ಅದನ್ನು ಅರಿತವರಾರು ? ಎಲೈ ಯಮಕಿಂಕರರೆ, ಈ ಭಾಗವತ ಧರ್ಮನಿರ್ಣಯವೂ ಧರ್ಮರಹಸ್ಯವೂ ನಿಮಗೆ ತಿಳಿಯದಿರಬಹುದು. ಅವುಗಳನ್ನು ಕುರಿತು ನಿಮ್ಮ ಪ್ರಭುವಾದ ಯಮಧರ್ಮರಾಜನನ್ನು ಕೇಳಿರಿ. ಭಗವದಂಶ ಸಂಭೂತನಾದ ಆತನು ಈ ಧರ್ಮ ಸೂಕ್ಷ್ಮವನ್ನು ಚೆನ್ನಾಗಿ ಬಲ್ಲನು. ಭಾಗವತ ಧರ್ಮನಿರ್ಣಯವಿಂಥದೆಂಬುದನ್ನು ಆತನು ತಿಳಿಸುವನು' ಎಂದು ನುಡಿದರು. ವಿಷ್ಣುದೂತರಾಡಿದ ಧರ್ಮಸೂಕ್ಷ್ಮ ಪ್ರತಿಪಾದಕವಾದ ಈ ಮಾತುಗಳು ಯಮದೂತರ ಬಾಯಿ ಮುಚ್ಚಿಸಿದುವು. ಮುಂದೆ ಅವರು ಏನೂ ನುಡಿಯಲಾರದೆ, ಅವನ ಕೊರಳಿಗೆ ಸುತ್ತಿದ್ದ ಪಾಶವನ್ನು ಹಿಂದಕ್ಕೆ ತೆಗೆದುಕೊಂಡು, ತಮ್ಮ ಲೋಕಾಭಿಮುಖರಾಗಿ ಹೊರಟರು. ಪಾಪಾಧಿಕ್ಯತೆಯಿಂದ ಅಕಾಲದಲ್ಲೇ ಸಮೀಪಿಸಿದ್ದ ಮೃತ್ಯುವು ಹೀಗೆ ನಿವಾರಣೆಯಾಗಲು, ಆವರೆಗೆ ಯಮದೂತ ವಿಷ್ಣುದೂತರಿಗೆ ನಡೆದ ಸಂಭಾಷಣೆಯನ್ನು ಸ್ವಪ್ನದಲ್ಲೋ ಎಂಬಂತೆ ಕೇಳುತ್ತಲಿದ್ದ ಅಜಾಮಿಳನು ಕಣ್ಣು ಬಿಟ್ಟು ಎದುರಿಗೆ ನಿಂತಿದ್ದ ಶಂಖಚಕ್ರಗದಾಧಾರಿಗಳೂ ಪರಮ ಮಂಗಳ ಸ್ವರೂಪಿಗಳೂ ಆಗಿದ್ದ ಆ ವಿಷ್ಣುದೂತರನ್ನು ಕಂಡು, ಅವರು ನುಡಿದ ಭಗವನ್ನಾಮ ಮಹಿಮೆಯನ್ನು ಕೇಳಿ ಮನಸ್ಸು ಪರಮಾನಂದವನ್ನು ಹೊಂದಿರಲು, ಅಂಜಲಿಬದ್ಧನಾಗಿ ಅವರನ್ನು ಕುರಿತು ಕೆಲವು ಮಾತುಗಳನ್ನು ಹೇಳಬೇಕೆಂದು ಉದ್ದೇಶಿಸಿದನು. ಅಷ್ಟರಲ್ಲಿ ಅವರು ಥಟ್ಟನೆ ಅಂತರ್ಧಾನವಾಗಿ ಹೋದರು.



# ಉ ಪ ಸಂ ಹಾ ರ

ಅಜಾಮಿಳನನ್ನು ಬಿಟ್ಟುಹೋದ ಯಮದೂತರು ಧರ್ಮರಾಜನನ್ನು ಕುರಿತು,-'ಪ್ರಭೋ, ಲೋಕದಲ್ಲಿ ಪುಣ್ಯಕರ್ಮ ಪಾಪಕರ್ಮ ಮಿಶ್ರಕರ್ಮಗಳನ್ನು ಮಾಡಿದವರನ್ನು ತಕ್ಕ ರೀತಿಯಲ್ಲಿ ವಿಚಾರ ನಡಿಸಿ ಯೋಗ್ಯ ಫಲಗಳನ್ನು ಕೊಡತಕ್ಕವರಾರು ? ಹಾಗೆ ಆ ಕೆಲಸಕ್ಕಾಗಿ ನಿಯಾಮಕರಾಗಿರತಕ್ಕವರು ಎಷ್ಟುಮಂದಿ! ನಾವು ಇದುವರೆಗೂ ಆ ಕಾರ್ಯದ ಸರ್ವಾಧಿಕಾರವು ತಮ್ಮೊಬ್ಬರಲ್ಲೇ ಅಡಗಿದೆಯೆಂದು ನಂಬಿದ್ದೆವು. ಆದರೆ ಈ ದಿನದ ನಮ್ಮ ಅನುಭವದಿಂದ ಆ ನಮ್ಮ ನಂಬಿಕೆಗೆ ಸಂದೇಹವುಂಟಾಗಿರುವುದು. ನಾವು ಮಹಾ ಪಾಪಿಯೊಬ್ಬನನ್ನು ಕಾಲಪಾಶದಿಂದ ಬಂಧಿಸಿ ಕರೆತರುವುದಕ್ಕೆ ಹೋಗಿದ್ದೆವು. ಅವನು ಮರಣಕಾಲದಲ್ಲಿ 'ನಾರಾಯಣಾ' ಎಂದು ಉಚ್ಚರಿಸಿದನು. ಅಷ್ಟುಮಾತ್ರದಲ್ಲೇ, ನಾಲ್ಕು ಕೈಗಳಲ್ಲೂ ಶಂಖಚಕ್ರ ಗದಾಧಾರಿಗಳೂ ಕಿರೀಟ ಕುಂಡಲಾಲಂಕೃತರೂ ದಿವ್ಯ ಸುಂದರ ರೂಪಿಗಳೂ ಆದ ಮೂವರು ವಿಷ್ಣುದೂತರು ಪ್ರತ್ಯಕ್ಷವಾಗಿ ಬಂದು, ನಮ್ಮನ್ನು ನಿವಾರಿಸಿ ಅಟ್ಟಿದರು. ಆ ವಿಷ್ಣುದೂತರೆಂಬ ಸಿದ್ಧರು ಯಾರು ? ಅವರು ಹೇಳಿದ ಧರ್ಮಸೂಕ್ಷ್ಮವೆಂಥದು ! ಈ ಸಂಗತಿಯನ್ನು ನಮಗೆ ವಿಸ್ತಾರವಾಗಿ ತಿಳಿಸಬೇಕು' ಎಂದು ಬೇಡಿಕೊಂಡರು.

ಯಮಧರ್ಮರಾಜನು ದೂತರಾಡಿದ ಆ ಮಾತನ್ನು ಕೇಳಿ ಪರಮಾನಂದದಿಂದ, ಮನಸ್ಸಿನಲ್ಲೇ ಶ್ರೀಮನ್ನಾರಾಯಣನ ಪಾದಕಮಲಗಳನ್ನು ಧ್ಯಾನಿಸಿ-'ಎಲೈ ಸೇವಕರೇ, ನೀವು ಆ ದೂತರಿಂದ ಯಾವ ಮಹಾಮಹಿಮನ 'ನಾರಾಯಣಾ' ಎಂಬ ನಾಮವನ್ನು ಕೇಳಿದಿರೋ, ಆ ಪ್ರಭುವರ್ಯನೇ ಜಗಜ್ಜನ್ಮಾದಿ ಕಾರಣನು. ಬಟ್ಟೆಯಲ್ಲಿ ಹಾಸು ಹೊಕ್ಕುಗಳೆಂಬ ನೂಲುಗಳು ಹೇಗೆ ಒಂದರೊಳಗೊಂದು ಹೊಂದಿ ಹೆಣೆದುಕೊಂಡಿವೆಯೋ ಹಾಗೆಯೇ ಈ ಪ್ರಪಂಚದ ಚೇತನಾಚೇತನವಾದ ಸಮಸ್ತ ವಸ್ತುಗಳೂ ಆತನಲ್ಲಿ ವ್ಯಾಪಿಸಿಕೊಂಡಿವೆ. ಪ್ರಪಂಚದ ಸೃಷ್ಟಿ ಸ್ಥಿತಿಲಯಾದಿ ಕಾರ್ಯಗಳೆಲ್ಲವೂ ಆ ಪ್ರಭು ಸತ್ತ್ವಮನ ಅಗಾಧ ಮಹಿಮೆಯಿಂದಲೇ ನಡೆಯುವುವು. ಪರಮಾಣುವಿನಿಂದ ಬ್ರಹ್ಮಪರ್ಯಂತವಾದ ಸಕಲ ಜೀವರಾಶಿಗಳೂ ಆ ದೇವಾದಿ ದೇವನ ಆಜ್ಞಾಬದ್ಧವಾಗಿ ನಡೆಯುತ್ತಿರುವುವು. ಆ ಸರ್ವೇಶ್ವರನಿಗೆ ನಾನು ಮಾತ್ರವಲ್ಲ, ದೇವೇಂದ್ರ, ನಿರುರುತಿ, ವರುಣ, ಚಂದ್ರಸೂರ್ಯ

ರು, ಬ್ರಹ್ಮರುದ್ರಾದಿಗಳು, ದ್ವಾದಶಾದಿತ್ಯರು, ಸಿದ್ಧರು ಸಾಧ್ಯರು ಗಂಧರ್ವರು ಮೊದಲಾದ ಸಮಸ್ತರೂ ಅಧೀನರಾಗಿ ಆಜ್ಞಾಬದ್ಧರಾಗಿ ನಡೆಯುತ್ತಿರುವೆವು. ಆತನು ಪರಮದಯಾ ಶರಧಿಯು. ಭಕ್ತವತ್ಸಲನು, ದೀನಪೋಷಕನು. ಆದರೂ ಚಂಡಶಾಸನನು. ಆತನ ಆಜ್ಞಾರೂಪವಾದ ವೇದವಿಧಿಯಂತೆ ನಡೆಯದೆ ದುಷ್ಕಾರ್ಯಗಳಲ್ಲಿ ಪ್ರವೇಶಿಸುವವರನ್ನು ಅಗಾಧರೀತಿಯ ಶಿಕ್ಷೆಗಳಿಗೆ ಒಳಪಡಿಸಿ ಬುದ್ಧಿ ಕಲಿತುಕೊಳ್ಳುವಂತೆ ಮಾಡಲಿಕ್ಕಾಗಿಯೇ ಆತನು ನಾನೇ ಮೊದಲಾದ ಅಧಿಕಾರಗಳನ್ನು ನಿಯಮಿಸಿರುವನು. ಆದರೆ, ಆತನ ಭಕ್ತಿಯೆಂಬ ಮಾರ್ಗವನ್ನು ತಪ್ಪಿ ಅಜ್ಞಾನವಶಾತ್ತು ದುಷ್ಕರ್ಮನಿರತರಾದವರಿಗೆ ಮುಕ್ತಿಯೇ ಇಲ್ಲವೆ? ಅವರ ಗತಿಯೇನು?' ಎಂಬಿರಾ, ಎಂತಹ ಪರಮ ಪಾತಕಿಗಳಾದರೂ,

ಅನನ್ಯಾಶ್ಚಿಂತಯಂತೋಮಾಂ ಯೇ ಜನಾಃ ಪರ್ಯುಪಾಸತೆ
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ||

ಎಂಬಂತೆ 'ನೀನೇ ದಿಕ್ಕು, ನಿನ್ನ ಹೊರತು ನಮ್ಮ ರಕ್ಷಕರು ಅನ್ಯರಾರೂ ಇಲ್ಲ ಎಂಬಡಾಗಿ ತಿಳಿದು ಭಕ್ತಿಭಾವದಿಂದ ನನ್ನನ್ನೇ ಆರಾಧಿಸಿದ್ದಾದರೆ ಅವರ ಯೋಗಕ್ಷೇಮವನ್ನು ನಾನು ವಹಿಸುತ್ತೇನೆ' ಎಂದು ಅಪ್ಪಣೆ ಕೊಡಿಸಿರುತ್ತಾನೆ. ಯಾವನು ಎಂತಹ ಪಾಪವನ್ನೇ ಮಾಡಿರಲಿ, ಅವುಗಳನ್ನು ನಾಶಮಾಡುವ ಸಾಮರ್ಥ್ಯವು ಸರ್ವೇಶ್ವರನಾದ ಭಗವಾನನ ದಿವ್ಯ ನಾಮಕ್ಕೆ ಇದೆ ಎಂಬ ದೃಢನಂಬಿಕೆಯಿಂದ ಶ್ರೀಮನ್ನಾರಾಯಣನ ಭಜನೆ - ಕೀರ್ತನೆಗಳಲ್ಲಿ ತೊಡಗಿದನೆಂದರೆ ಅವನು ಉದ್ಧೃತನಾಗುವುದರಲ್ಲಿ ಲೇಶಮಾತ್ರವೂ ಸಂದೇಹವಿಲ್ಲ. ಇದಕ್ಕೆ ಈ ದಿನ ನಿಮ್ಮ ಪಾಶಕ್ಕೆ ವಶನಾಗಿದ್ದ ಅಜಾಮಿಳನೇ ಸಾಕ್ಷಿಯಾಗಿದ್ದಾನೆ. ಇಂದು ಮಾತ್ರವಲ್ಲ, ಇನ್ನು ಮುಂದೂ ಹೀಗೆಯೇ! ಯಾವ ಪಾಪಿಯು ನಾಲಿಗೆಯು ಒಂದಾವೃತ್ತಿಯಾದರೂ ಭಗವನ್ನಾಮವನ್ನು ಭಕ್ತಿಪೂರ್ವಕವಾಗಿ ಉಚ್ಚರಿಸಿಲ್ಲವೋ, ಯಾವನ ಮನಸ್ಸು ಒಂದು ಕ್ಷಣಮಾತ್ರವಾದರೂ ಏಕನಿಷ್ಠೆಯಿಂದ ಆ ಲೋಕಪಿತನನ್ನು ಕುರಿತು ಧ್ಯಾನಿಸಿಲ್ಲವೋ, ಯಾವನ ಶಿರಸ್ಸು ಒಮ್ಮೆಯಾದರೂ ಆ ಶ್ರೀರಾಮಚಂದ್ರ ಮೂರ್ತಿಯ ಪಾದಕಮಲಗಳಲ್ಲಿ ಬಾಗಿ ನಮಿಸಲಿಲ್ಲವೋ ಅಂತಹ ಪರಮ ಪಾಪಿಯನ್ನು ನಿಷ್ಕರುಣೆಗಳಾಗಿ ಪಾಶದಿಂದ ಬಂಧಿಸಿ ಕರೆತಂದು ಶಿಕ್ಷಿಸಿರಿ. ಆದರೆ ಎಲ್ಲಿ ಹರಿಭಜನೆ ನಡೆಯು

ತ್ತಿರುವುದೋ, ಎಲ್ಲಿ ಭಗವತ್ಕಥೆಯು ಪ್ರಸಂಗಿಸಲ್ಪಡುತ್ತಿರುವುದೋ ಅಲ್ಲಿಗೆ ನಿಮ್ಮ ಪ್ರವೇಶವಾಗದಿರಲಿ. ಯಾವನು ಸರ್ವಕಾಲವೂ ಭಗವಾನನ ಪಾದಕಮಲಗಳ ಧ್ಯಾನ ಭಜನೆ ಕೀರ್ತನಾದಿಗಳಲ್ಲಿ ಅನುರಕ್ತನಾಗಿರುವನೋ ಆ ಪುಣ್ಯಶಾಲಿಯು ಕಡೆಗೆ ಕಣ್ಣೆತ್ತಿಯೂ ನೋಡದೆ ಹೊರಟು ಬನ್ನಿರಿ'' ಎಂದು ಆಜ್ಞಾಪಿಸಿದನು.

ಇತ್ತ ಅಜಾಮಿಳನು, ರೋಗಬಾಧೆಯೂ ಅಪಮೃತ್ಯುವೂ ಪರಿಹಾರವಾಗಲು, ಎದ್ದು ಕುಳಿತು ತನ್ನಲ್ಲಿ ತಾನೇ,-'ಆಹಾ ಇದೇನು ಕನಸೋ ಅಥವ ನಿಶ್ಚಯವಾಗಿಯೋ ನಡೆದ ಸಂಗತಿಯೋ! ಕನಸಲ್ಲ, ಕನಸಲ್ಲ. ಭಯಂಕರ ಸ್ವರೂಪಿಗಳಾಗಿದ್ದ ಆ ಮೂವರು ದೂತರು ನನ್ನ ಕುತ್ತಿಗೆಗೆ ಪಾಶವನ್ನು ಹಾಕಿ ಎಳೆದುದು ಸುಳ್ಳಲ್ಲ. ಅಲ್ಲದೆ ಆ ದಿವ್ಯಸುಂದರ ಮೂರ್ತಿಗಳಾರೋ ನನಗೆ ದರ್ಶನವಿತ್ತು, ಪ್ರಾಪ್ತವಾಗಿದ್ದ ಆ ಯಮಬಾಧೆಯಿಂದ ನಿವಾರಿಸಿದರು. ನನಗೆ ಆ ಆಪತ್ಕಾಲದಲ್ಲಿ ಜ್ಞಾಪಕಬಂದ ' ನಾರಾಯಣ ' ನ ಪಾವನ ನಾಮದ ಉಚ್ಚಾರಣೆಯೇ ಅವರ ಬರುವಿಕೆಗೆ ಕಾರಣವಾಗಿದ್ದೀತು. ಆಹಾ, ಭಗವನ್ಮಹಿಮೆಯು ಅಪಾರವಾದುದು. ಆರ್ತನಾಗಿ ಭಯದಿಂದ ತತ್ತಳಿಸುತ್ತ ಒಂದುವೇಳೆ ಉಚ್ಚರಿಸಿದ ಮಾತ್ರಕ್ಕೇ ಮಹಾ ಪಾಪಿಯಾದ ನನಗೆ ಕಾಲಪಾಶವೇ ತಪ್ಪಿಹೋಯಿತಲ್ಲಾ, ಹೀಗಿರುವಲ್ಲಿ, ನೀನೇ ಗತಿಯೆಂದು ಸರ್ವದಾ ದೇವರನ್ನೇ ನಂಬಿ ಭಜಿಸುತ್ತಿರುವವರ ಸುಕೃತವನ್ನೆಷ್ಟೆಂದು ಹೇಳಬೇಕು! ಆಹಾ, ಯಾವಜನ್ಮದ ಸುಕೃತವೋ ಅಥವ ದಯಾನಿಧಿಯಾದ ಶ್ರೀಮನ್ನಾರಾಯಣನ ಕೃಪಾ ವಿಶೇಷವೋ ನನಗೆ ಈ ಭಗವನ್ನಾಮವನ್ನು ಉಚ್ಚರಿಸುವಂತಹ ಸೌಭಾಗ್ಯವು ಒದಗಿತು. ಹಾಗಿಲ್ಲದಿದ್ದರೆ, ಪರಮ ಪಾಪಿಯಾದ ನನಗೆ ಆ ಅಪಮೃತ್ಯು ನಿವಾರಣವೂ, ಆ ಸಿದ್ಧ ದರ್ಶನವೂ ಒದಗುವುದೆಂದರೇನು? ಆಯಿತು. ಈವರೆಗೆ ಅಗಾಧ ಪಾಪವಮಾಡಿದ್ದಾಯಿತು. ಲೋಕದಲ್ಲಿ ಒಬ್ಬ ಮನುಷ್ಯನು ಎಷ್ಟುಬಗೆಯ ಪಾಪ ಕಾರ್ಯಗಳನ್ನು ಮಾಡಿ, ಪಾತಕ ರಾಶಿಯನ್ನು ಸಂಗ್ರಹಿಸಬಹುದೋ ಅಷ್ಟನ್ನೂ ಮಾಡಿದ್ದಾಯಿತು. ಇಂದು ನಡೆದ ಸಂಭವದಿಂದ ಭಗವನ್ನಾಮಕ್ಕೆ ಎಂತಹ ಅದ್ಭುತ ಸಾಮರ್ಥ್ಯವಿದೆ ಎಂಬುದು ವ್ಯಕ್ತವಾಯಿತು. ಇನ್ನು ಸಾಕು. ಇನ್ನು ಮುಂದೆ, ಈ ಸಂಸಾರ ಬಂಧನವನ್ನು ಬಿಡಿಸಿಕೊಂಡು ಹೋಗುವ ಪ್ರಯತ್ನವಮಾಡಬೇಕು' ಎಂದುಕೊಂಡು, ಆ ಕ್ಷಣದಲ್ಲೇ ಮನೆ ಮಕ್ಕಳು ಪತ್ನಿ

ಧನ ಧಾನ್ಯಾದಿ ಸಮಸ್ತವನ್ನೂ ತ್ಯಾಗಮಾಡಿ, ಗಂಗಾತೀರಕ್ಕೆ ನಡೆದು, ಅಲ್ಲಿ ಸ್ನಾನಮಾಡಿ ಭಗವದ್ಧ್ಯಾನ ನಿರತನಾಗಿ ಕುಳಿತನು. ವಿಷಯಪಾಶ ಬದ್ಧವಾಗಿ ತನ್ನ ಅಷ್ಟು ಬಗೆಯ ಅವನತಿಗೂ ಕಾರಣಭೂತವಾಗಿದ್ದ ಮನಸ್ಸನ್ನು ಮೊದಲು ಏಕಾಗ್ರತೆಗೆ ತಂದುಕೊಂಡು, ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಶತ್ರುವರ್ಗದ ಬೀಜಗಳನ್ನೇ ಆ ಮನೋಮಯ ಕ್ಷೇತ್ರದಿಂದ ಕಿತ್ತೊಗೆದನು. ತರುವಾಯ ಭಕ್ತಿಯೋಗವನ್ನು ಸಾಧಿಸಿ, ಶ್ರೀಮನ್ನಾರಾಯಣನ ಕಲ್ಯಾಣ ಗುಣಮಾಲೆಯನ್ನು ನೆನೆಯುತ್ತಾ, ಮನಸ್ಸಿನಲ್ಲಿ ಆ ದೇವದೇವನ ಶಂಖ ಚಕ್ರಾಲಂಕೃತವಾದ ದಿವ್ಯಮಂಗಳ ಸ್ವರೂಪವನ್ನು ಧ್ಯಾನಿಸುತ್ತಾ-ಕೆಲಕಾಲ ಕಳೆದನು. ಮುಂದೆ ಧ್ಯಾನಸಿದ್ಧಿಯು ನೆಲೆಗೊಂಡ ನಂತರ ಜ್ಞಾನಮಯವಾದ ಭಗವಂತನ ದಿವ್ಯ ತೇಜಸ್ಸಿನಲ್ಲಿ ಬುದ್ಧಿಯನ್ನು ನೆಲೆಗೊಳಿಸಿದನು. ಈ ಸಂದರ್ಭದಲ್ಲಿ ಹಿಂದೆ ಅಪಮೃತ್ಯು ಕಾಲದಲ್ಲಿ ಗೋಚರವಾಗಿದ್ದ ವಿಷ್ಣುದೂತರು ಪುನಃ ಬಂದು ದರ್ಶನವಿತ್ತರು. ಒಡನೆ ಅಜಾಮಿಳನಿಗೂ ಅವರಿಗೆ ಸಮಾನವಾದ ದಿವ್ಯತೇಜೋಮಯ ಸ್ವರೂಪವು ಪ್ರಾಪ್ತವಾಯಿತು. ಆಗ ಆ ವಿಷ್ಣುಭಕ್ತಾಗ್ರಣಿಯು ಅವರು ತಂದಿದ್ದ ದಿವ್ಯ ವಿಮಾನದಲ್ಲಿ ಕುಳಿತು ಪ್ರಯಾಣಮಾಡಿ ಶ್ರೀವಿಷ್ಣು ಸಾನ್ನಿಧ್ಯವನ್ನು ಸೇರಿದನು. ಭಗವದ್ಭಕ್ತರಾದ ಮಹಿಮಾನ್ವಿತರಿಗೆ ಅಸಾಧ್ಯವಾದುದಾವುದು ?

ಮುನ್ನುಡಿಯಲ್ಲಿ ಹೇಳಲ್ಪಟ್ಟಂತೆ ಕಲಿಯುಗದಲ್ಲಿ, ಸದ್ಗತಿಗೆ ಉತ್ತಮವಾಗಿರುವ ಇತರ ಎಲ್ಲಾ ಮಾರ್ಗಗಳಿಗಿಂತಲೂ, ಈ ಭಕ್ತಿಮಾರ್ಗವೇ-ಭಗವಂತನ ನಾಮಸಂಕೀರ್ತನವೇ ಸರ್ವಶ್ರೇಷ್ಠವಾದುದೆಂಬುದು ನಮ್ಮ ಕಥಾನಾಯಕನಾದ ಅಜಾಮಿಳನಂತೆಯೇ ಇತರ ಅನೇಕಾನೇಕ ಮಂದಿ ಭಕ್ತಶ್ರೇಷ್ಠರ ಉದಾಹರಣೆಗಳಿಂದಲೂ ಪ್ರಪಂಚಕ್ಕೆ ವಿದಿತವಾಗಿದೆ. ಸದ್ಯಃ ಪ್ರಪಂಚದಲ್ಲಿ ಅಜಾಮಿಳನಂತೆಯೇ ವಿಷಯಾತುರರಾಗಿ ಆತನು ಮಾಡಿದಂತಹ ಅಗಾಧ ದುಷ್ಕರ್ಮಗಳನ್ನು ಮಾಡಿದವರೂ ಮಾಡುವವರೂ ಕಡಮೆ ಸಂಖ್ಯೆಯಿಂದಲಿಲ್ಲ. ಅವರು ತಮ್ಮ ಕೃತ್ಯಗಳ ಪರಿಣಾಮವನ್ನು ತಿಳಿದು ಅವುಗಳಿಂದ ತಮಗುಂಟಾಗಬಹುದಾದ ಅಗಾಧ ದುಃಖ ಸಂಕಟಗಳಿಗಾಗಿ ಭೀತಿಗೊಂಡು, ಆ ದುಃಖಾನುಭವದಿಂದ ತಪ್ಪಿಸಿಕೊಳ್ಳಬೇಕೆಂದು ಬಯಸಿದರಾದರೆ, ಅವರಿಗೆ ಈತನು ಕೈಕೊಂಡ ಮಾರ್ಗಕ್ಕಿಂತಲೂ ಉತ್ತಮವಾ

ದುದು ಮತ್ತಾವುದೂ ಇರದು. ಮನುಷ್ಯನು ಎತ್ತಬಿದ್ದರೂ ನೆಲದಮೇಲೆಯೇ ಹೇಗೆ ಬೀಳಬೇಕೋ ಹಾಗೆಯೇ, ಎಷ್ಟುದೂರ ಮಾರ್ಗತಪ್ಪಿ ನಡೆದರೂ ಕೊನೆಗೆ ಸಕಲ ಪಾಪ ನಿವಾರಕನೂ ಭಕ್ತಾರ್ತಿ ಭಂಜಕನೂ ಆದ ಶ್ರೀಮನ್ನಾರಾಯಣನಿಗೆ ಶರಣು ಬೀಳದಿದ್ದರೆ ಮುಂದೆ ಮಾರ್ಗವೇ ಇಲ್ಲ. ಆದರೆ, ತಾವು ಮಾಡಿದ ದುಷ್ಕಾರ್ಯಗಳನ್ನು ಕುರಿತು ಪಶ್ಚಾತ್ತಾಪ ಪಡಬೇಕಾದುದೊಂದು ಅತ್ಯಾವಶ್ಯಕ ವಿಚಾರವೆಂಬುದನ್ನು ಮಾತ್ರ ಬಾಧಿತ ಯಾರೂ ಮರೆಯಲಾಗದು. ಅಜ್ಞಾನದಿಂದ ನಡೆದು ಹೋದ ಕಾರ್ಯಗಳಿಗಾಗಿ ಪಶ್ಚಾತ್ತಾಪಪಟ್ಟು - ನನ್ನ ಸರ್ವ ಪಾಪಗಳನ್ನೂ ಕ್ಷಯಗೊಳಿಸಿ ಕಾಪಾಡತಕ್ಕ ಪ್ರಭುವು ಶ್ರೀವರನೇ ಎಂಬ ದೃಢ ಭಕ್ತಿಭಾವದಿಂದ ಪ್ರೇರಿತನಾಗಿ ನಾಮಸಂಕೀರ್ತನೆಯಿಂದ ಭಗವದಾರಾಧನೆಗೆ ತೊಡಗಿದವನು ಯಾರೇ ಆಗಲೀ ಅವನು ನಮ್ಮ ಕಥಾನಾಯಕನಂತೆಯೇ ಉದ್ಧೃತನಾಗುವುದರಲ್ಲಿ ಸಂಶಯವೇನುಂಟು !

ಈ ಭಕ್ತಶಿರೋಮಣಿಯ ಚರಿತ್ರವು, ಇದನ್ನು ಪಠಿಸುವ ಸಮಸ್ತ ಕನ್ನಡಿಗರಿಗೂ, ತಾವು ಜ್ಞಾತಾಜ್ಞಾತಾ ಆಚರಿಸಿರಬಹುದಾದ ಅನೇಕ ಪಾಪ ಸಮೂಹಗಳ ವಿಷಯದಲ್ಲಿ - ಮನಸ್ಸಿನಲ್ಲಿ ತೀವ್ರವಾದ ಪಶ್ಚಾತ್ತಾಪವನ್ನು ಉಂಟಮಾಡಲಿ. ತನ್ಮೂಲಕ ಅವರ ಚಿತ್ತವೃತ್ತಿಯಲ್ಲಿ ಭಗವದ್ಭಕ್ತಿಭಾವವು ನೆಲೆಗೊಂಡು, ಸದ್ಗತಿಯ ಸೋಪಾನವನ್ನು ಸಿದ್ಧಗೊಳಿಸಲಿ. ಹಾಗೆ ಸಿದ್ಧರಾದ ಆ ಆಸ್ತಿಕರು, ಇಹಲೋಕದಲ್ಲಿ ವಾಸಿಸಿರುವವರೆಗೂ ಭಗವದ್ಭಕ್ತರಾಗಿ ಸಜ್ಜನ ಶಿರೋಮಣಿಗಳಾಗಿ ಸಾಧುವರ್ಯರಾಗಿ - ತಮ್ಮನ್ನು ಹೆತ್ತು ಪೋಷಿಸಿದ ಮಾತಾ ಪಿತೃಗಳಿಗೂ-ದೇಶಮಾತೆಗೂ ಭೂಷಣ ಪ್ರದರಾಗಿ ಜೀವಿಸಿ, ದೇಹಾಂತ್ಯದಲ್ಲಿ ಶ್ರೀವಿಷ್ಣು ಲೋಕವನ್ನೇ ಹೊಂದಲಿ. ಭಕ್ತಜನವತ್ಸಲನಾದ ಶ್ರೀಮನ್ನಾರಾಯಣ ಮೂರ್ತಿಯು ಈ ಅಜಾಮಿಳನನ್ನು ರಕ್ಷಿಸಿದಂತೆಯೇ ತನ್ನಭಕ್ತರ ಸಮಸ್ತ ವಿಧವಾದ ಲೋಪಗಳನ್ನೂ ಕ್ಷಮಿಸಿ ಸದ್ಬುದ್ಧಿಯಿತ್ತು, ತನ್ನ ಪಾದ ಸನ್ನಿಧಿಯಲ್ಲಿ ಭಕ್ತಿಭಾಗ್ಯವನ್ನೂ ಮರಣ ಕಾಲಕ್ಕೆ ತನ್ನ ಚರಣದ ಸ್ಮರಣೆಯನ್ನೂ ಕರುಣಿಸಿ ರಕ್ಷಿಸಲಿ.

ತಥಾಸ್ತು.



ಶ್ರೀರಾಮ ಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ :—**

ಭರತಖಂಡದ ಆಶ್ರಿತ ಸಂಸ್ಥಾನಗಳಲ್ಲಿ ಮಕುಟಮಣಿ ಸ್ವರೂಪದಿಂದ ವಿರಾಜಿಸುತ್ತಿರುವ ನಮ್ಮ ಮೈಸೂರು ಸಂಸ್ಥಾನಕ್ಕೆ ಕ್ರಿಸ್ತ ಶಕದ ಹದಿನೆಂಟನೆಯ ಶತಮಾನದಲ್ಲಿ ಪ್ರಾಪ್ತವಾಗಿದ್ದ ದುರಂತ ಸಂಕಟದಿಂದ ಅದನ್ನು ರಕ್ಷಿಸಿ, ಆರ್ಷೇಯ ರಾಜವಂಶವನ್ನು ಪುನಃ ಜೀರ್ಣೋದ್ಧಾರಗೊಳಿಸಿದ ಮಹತ್ಕೀರ್ತಿಯು ನಮ್ಮ ಪ್ರಕೃತ ಕಥಾನಾಯಿಕೆಯಾದ ಮಹಾ ಮಾತೃ ಶ್ರೀ ಲಕ್ಷ್ಮಮ್ಮಣ್ಣಿಯವರಿಗೆ ಸೇರತಕ್ಕದು. ಯದುರಾಯರೇ ಮುಂತಾದ ನರಕೇಸರಿಗಳಿಂದ ವಿಭೂಷಿತವಾಗಿದ್ದ ಮೈಸೂರಿನ ರಾಜಪೀಠವು, ಪರಾಕ್ರಾಂತವಾಗಿ ಅಳಿಸಿಹೋಗುವುದೋ ಎಂಬಂತಹ ದುರಂತ ಸಂಕಟಕ್ಕೀಡಾಗಿದ್ದ ಆ ಕಾಲದಲ್ಲಿ, ಮಹಾರಾಣಿ ಲಕ್ಷ್ಮಮ್ಮಣ್ಣಿಯವರು, ರಾಜವಂಶಕ್ಕೆ ಭಾಗ್ಯದೇವತೆಯೋ ಎಂಬಂತೆ ರಕ್ಷಕರಾಗಿ ಅದನ್ನು ತಮ್ಮ ಸಾಹಸದಿಂದ ಜೀರ್ಣೋದ್ಧಾರಗೊಳಿಸವಿದ್ದರೆ, ಇಂದಿನ ಮೈಸೂರು ಸಂಸ್ಥಾನದ ಸ್ಥಿತಿಯೂ ಆರ್ಷೇಯ ರಾಜವಂಶದ ಸ್ಥಿತಿಯೂ ಹೇಗಿರುತ್ತಿದ್ದುವೆಂದು ಹೇಳಲು ಸಾಧ್ಯವಿಲ್ಲ. ಜೀವನಕ್ಕೂ ಮಾರ್ಗಕಾಣದೆ ನರಿಗಳಂತೆ ರಾಜಾಶ್ರಯದಲ್ಲಿ ಬಂದು ಸೇರಿದ ಸೇವಕರು, ಕಿರಬಗಳಂತೆ ಪ್ರಬಲಿಸಿ, ಸ್ವಾಮಿದ್ರೋಹಿಗಳಾಗಿ ಉಂಡಮನೆಗೆ ಎರಡು ಬಗೆಯಲೆಣಿಸಿದ ಕೃತಘ್ನತೆಯ ಪರಿಣಾಮದಿಂದ - ನಾಶವಾಗದಂತೆ ಈ ಚಂದ್ರವಂಶಾಂಕುರವನ್ನು ರಕ್ಷಿಸಿ - ಅಭಿವೃದ್ಧಿಗೊಳಿಸಿದ ಈ ಪುಣ್ಯವತಿಯ ನಾಮವು, ಮೈಸೂರ್ರ ರಾಜವಂಶದಲ್ಲಿ ಸುವರ್ಣಾಕ್ಷರಗಳಿಂದ ಕೆತ್ತಲ್ಪಟ್ಟು ಪ್ರಾತಃಸ್ಮರಣೀಯವಾಗಿರಲು ಅರ್ಹವಾಗಿದೆ.

ನಮ್ಮ ಕಥಾನಾಯಿಕೆಯ ಕಾಲದಲ್ಲಿ ರಾಜ್ಯಾಕ್ರಮಣ ಮಾಡಿದ ಹೈದರಾಲಿ, ಟೀಪೂಸುಲ್ತಾನರು ವಂಶ ಪಾರಂಪರ್ಯವಾಗಿ ರಾಜ್ಯಾಧಿಕಾರಿಗಳೇ ಆಗಿದ್ದವರಲ್ಲ-ಅಥವ ರಾಜವಂಶೀಕರೂ ಅಲ್ಲ. ಆದರೂ, ಹೈದರಾಲಿಯು ತನ್ನ ಧೈರ್ಯ ಸಾಹಸಗಳಿಂದಲೂ, ಏಕನಿಷ್ಠೆ ಕುಶಲಮತಿ ಪ್ರಭುಶಕ್ತಿ-ದರ್ಪಗಳಿಂದಲೂ, ಕೇವಲ ಕ್ಷುದ್ರ ಸೇವಕಾವೃತ್ತಿಯಿಂದ ಕ್ರಮ ಕ್ರಮವಾಗಿ ಮೇಲಕ್ಕೇರುತ್ತ ಬರುತ್ತ, ಅಧಿಕಾರಿ ವರ್ಗದಲ್ಲಿ ಅಗ್ರಸ್ಥಾನವನ್ನು ಆಕ್ರಮಿಸಿ, ಲಕ್ಷಾಂತರ ಸೈನ್ಯಗಳಿಗೆ ಅಧೀಶನಾಗಿ, ಕೋಟ್ಯಾಂತರ ದ್ರವ್ಯಕ್ಕೆ ಸ್ವಾಮಿಯಾಗಿ, ರಾಜರನ್ನು ಮೂಲೆಗೊತ್ತಿ ತಾನೇ ನವಾಬನೆಂದು ಹೇಳಿಸಿಕೊಂಡನು. ಈತನ ಕಾಲದಲ್ಲಿ ಮೈಸೂರು ರಾಜವಂಶಕ್ಕೆ ರಾಜ್ಯಾಧಿಪತ್ಯವು ತಪ್ಪಿದ್ದಿತಾದರೂ, ಅವರು ನಿರ್ಬಂಧಕ್ಕೆ ಸಿಕ್ಕು ಅನ್ನವಸ್ತ್ರಗಳಿಗೂ ತಾಪತ್ರಯ ಪಡುವಂತಹ ದುಸ್ಥಿತಿಯು ಪ್ರಾಪ್ತವಾಗಿರಲಿಲ್ಲ. ಆದರೆ, ಈತನ ಮಗನಾದ ಟಿಪ್ಪೂಸುಲ್ತಾನನು ರಾಜ್ಯಾಧಿಪತ್ಯವನ್ನು ಕೈಕೊಂಡ ಮೇಲೆ, ರಾಜವಂಶೀಕರ ಸ್ಥಿತಿಯು ಬಹು ಶೋಚನೀಯಾವಸ್ಥೆಗಿಳಿಯಿತು. ಆಗಿನ ಆ ಸಂಕಟ ಕಾಲದಲ್ಲಿ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಅಪೂರ್ವ ಧೈರ್ಯ ಸಾಹಸಗಳನ್ನು ಪ್ರಕಟಿಸಿ, ಗುಪ್ತವಾಗಿಯೇ ಹಲವು ರಾಜತಂತ್ರಗಳನ್ನು ನಡೆಯಿಸಿ, ಬ್ರಿಟಿಷ್ ಪ್ರಭುತ್ವದವರ ಸಹಾಯದಿಂದ ಶತ್ರುವರ್ಗವನ್ನು ನಿರ್ಮೂಲಗೊಳಿಸಿ, ರಾಜವಂಶಕ್ಕೆ ಪುನಃ ಸಿಂಹಾಸನವನ್ನು ದೊರಕಿಸಿಕೊಟ್ಟುದು ಬಹು ಮಹತ್ವದ ಸಂಗತಿಯು. ಅಂತಃಪುರವನ್ನು ಬಿಟ್ಟು ಹೊರಕ್ಕೆ ಬಾರದಿದ್ದರೂ, ತಮ್ಮ ಬುದ್ಧಿ ಸಾಮರ್ಥ್ಯದಿಂದ ಶತ್ರುಸಿಗ್ರಹೋಪಾಯವನ್ನು ಚಿಂತಿಸಿ ಕಾರ್ಯಸಾಧನೆ ಮಾಡಿದ ಈ ನಾರೀಮಣಿಯ ಸಾಹಸವು ರಾಜಕಾರ್ಯ ಚತುರರಾದ ಪುರುಷಶ್ರೇಷ್ಠರ ಶ್ಲಾಘನೆಗೂ ಪಾತ್ರವಾಗಿರುವುದು. ಆದರೆ, ಸ್ವದೇಶೀಯರಾದ ಹೈದರಾಲಿ ಟಿಪ್ಪೂ ಮುಂತಾದವರ ನಾಶಕ್ಕೆ-ವಿದೇಶೀಯರಾದ ಬ್ರಿಟಿಷರ ಸಹಾಯಗೊಂಡು ರಾಜ್ಯಸಂಪಾದನೆ ಮಾಡಿದ ಈ ಕಾರ್ಯವು, ಕಾವಲಿಯಲ್ಲಿದ್ದು ಬೇಯಲಾರದೆ ಒಲೆಯಲ್ಲಿ ಬಿದ್ದಂತಾಯಿತಲ್ಲವೆ ಎಂದು ಕೆಲವರಿಗೆ ತೋರಬಹುದು. ಹಾಗೆ ಯೋಚಿಸಲು ಕಾರಣವಿಲ್ಲ. ಆಗಿನ ಸ್ಥಿತಿಯಲ್ಲಿ ಅದಕ್ಕಿಂತಲೂ ಮತ್ತಾವ ಸುರಕ್ಷಿತ ಮಾರ್ಗವೂ ಇರಲಿಲ್ಲ-ಆ ಸಂದರ್ಭವನ್ನೂ ಅನು

ಕೌಶಲ್ಯವನ್ನೂ ಯೋಗ್ಯರೀತಿಯಿಂದ ಉಪಯೋಗಿಸಿಕೊಂಡು, ಕಾರ್ಯ ಸಾಧನೆ ಮಾಡಿದುದೇ ನಮ್ಮ ಕಥಾನಾಯಿಕೆಯ ಪ್ರತಿಭಾ ಪ್ರದರ್ಶಕ ಸಾಮರ್ಥ್ಯವನ್ನು ಸೂಚಿಸುತ್ತದೆ. ಈ ಮಾರ್ಗವನ್ನನುಸರಿಸಿ ಆಗ ಅಷ್ಟುಮಟ್ಟಿನ ಕಾರ್ಯವು ನಡೆಯದಿದ್ದಲ್ಲಿ, ಮೈಸೂರಿನ ರತ್ನ ಸಿಂಹಾಸನವು ಇಂದು ಆರ್ಷೇಯ ಹಿಂದೂ ರಾಜವಂಶಾನುಯಾಯಿಗಳಿಂದ ವಿಭೂಷಿತವಾಗುವುದಕ್ಕೆ ಪ್ರತಿಯಾಗಿ, ವಿಧರ್ಮಿಗಳಾದ ಮಹಮ್ಮದೀಯ ಅರಸರಿಂದ ಪರಲ್ಪಡಬೇಕಾಗುತ್ತಿದ್ದಿತೆಂಬುದಕ್ಕೆ ಸಂಶಯವಿಲ್ಲ. ಆದುದರಿಂದ ಅಂತಹ ದುರಂತ ಸಂಕಟ ಕಾಲದಲ್ಲಿ ನಮ್ಮ ಕಥಾನಾಯಿಕೆಯವರು ಹೇಗೆ ಕಾರ್ಯ ಸಾಧನೆ ಮಾಡಿದರೆಂಬುದು ಮೈಸೂರಿನ ರಾಜನಿಷ್ಠ ಪ್ರಜೆಗಳೂ, ಬಾಲಕ ಬಾಲಿಕೆಯರೂ ತಿಳಿಯಬೇಕಾದ ವೃತ್ತಾಂತವಾಗಿದೆ. ಅದನ್ನು ಇಲ್ಲಿ ಯಥಾಮತಿ ಸಂಗ್ರಹವಾಗಿ ಕೊಡಲಾಗುತ್ತದೆ. ಗ್ರಂಥಮಾಲಾಭಿಮಾನಿಗಳಾದ ಕರ್ಣಾಟಕ ಮಹಾಜನರು, ಸ್ವಾಭಾವಿಕ ಪ್ರೇಮದಿಂದ ಇದಕ್ಕೂ ಸ್ವಾಗತವನ್ನಿತ್ತು ನಮ್ಮ ಭಾಷಾ ಸೇವೆಗೆ ಪ್ರೋತ್ಸಾಹಕರಾಗಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ,
ತಾ|| ೧೮-೪-೧೯೩೦.

ಇತಿ ಸುಜನ ವಿಧೇಯ,
**ಯಂ. ರಮರಾವ್.**



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.—೧೯೩೦—೩೦೦೦ ಪ್ರತಿಗಳು.

ನಮ್ಮ ಕಥಾನಾಯಿಕೆಯ ಕಾಲದಲ್ಲಿ ರಾಜ್ಯಾಕ್ರಮಣ ಮಾಡಿದ ಹೈದರಾಲಿ, ಟೀಪೂಸುಲ್ತಾನರು ವಂಶ ಪಾರಂಪರ್ಯವಾಗಿ ರಾಜ್ಯಾಧಿಕಾರಿಗಳೇ ಆಗಿದ್ದವರಲ್ಲ-ಅಥವ ರಾಜವಂಶೀಕರೂ ಅಲ್ಲ. ಆದರೂ, ಹೈದರಾಲಿಯು ತನ್ನ ಧೈರ್ಯ ಸಾಹಸಗಳಿಂದಲೂ, ಏಕನಿಷ್ಠೆ ಕುಶಲಮತಿ ಪ್ರಭುಶಕ್ತಿ-ದರ್ಪಗಳಿಂದಲೂ, ಕೇವಲ ಕ್ಷುದ್ರ ಸೇವಕಾವೃತ್ತಿಯಿಂದ ಕ್ರಮ ಕ್ರಮವಾಗಿ ಮೇಲಕ್ಕೇರುತ್ತ ಏರುತ್ತ, ಅಧಿಕಾರಿ ವರ್ಗದಲ್ಲಿ ಅಗ್ರಸ್ಥಾನವನ್ನು ಆಕ್ರಮಿಸಿ, ಲಕ್ಷಾಂತರ ಸೈನ್ಯಗಳಿಗೆ ಅಧೀಶನಾಗಿ, ಕೋಟ್ಯಾಂತರ ದ್ರವ್ಯಕ್ಕೆ ಸ್ವಾಮಿಯಾಗಿ, ರಾಜರನ್ನು ಮೂಲೆಗೊತ್ತಿ ತಾನೇ ನವಾಬನೆಂದು ಹೇಳಿಸಿಕೊಂಡನು. ಈತನ ಕಾಲದಲ್ಲಿ ಮೈಸೂರು ರಾಜವಂಶಕ್ಕೆ ರಾಜ್ಯಾಧಿಪತ್ಯವು ತಪ್ಪಿದ್ದಿತಾದರೂ, ಅವರು ನಿರ್ಬಂಧಕ್ಕೆ ಸಿಕ್ಕಿ ಅನ್ನವಸ್ತ್ರಗಳಿಗೂ ತಾಪತ್ರಯ ಪಡುವಂತಹ ದುಸ್ಥಿತಿಯು ಪ್ರಾಪ್ತವಾಗಿರಲಿಲ್ಲ. ಆದರೆ, ಈತನ ಮಗನಾದ ಟಿಪ್ಪೂಸುಲ್ತಾನನು ರಾಜ್ಯಾಧಿಪತ್ಯವನ್ನು ಕೈಕೊಂಡ ಮೇಲೆ, ರಾಜವಂಶೀಕರ ಸ್ಥಿತಿಯು ಬಹು ಶೋಚನೀಯಾವಸ್ಥೆಗಿಳಿಯಿತು. ಆಗಿನ ಆ ಸಂಕಟ ಕಾಲದಲ್ಲಿ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಅಪೂರ್ವ ಧೈರ್ಯ ಸಾಹಸಗಳನ್ನು ಪ್ರಕಟಿಸಿ, ಗುಪ್ತವಾಗಿಯೇ ಹಲವು ರಾಜತಂತ್ರಗಳನ್ನು ನಡೆಯಿಸಿ, ಬ್ರಿಟಿಷ್ ಪ್ರಭುತ್ವದವರ ಸಹಾಯದಿಂದ ಶತ್ರುವರ್ಗವನ್ನು ನಿರ್ಮೂಲಗೊಳಿಸಿ, ರಾಜವಂಶಕ್ಕೆ ಪುನಃ ಸಿಂಹಾಸನವನ್ನು ದೊರಕಿಸಿಕೊಟ್ಟುದು ಬಹು ಮಹತ್ವದ ಸಂಗತಿಯು. ಅಂತಃಪುರವನ್ನು ಬಿಟ್ಟು ಹೊರಕ್ಕೆ ಬಾರದಿದ್ದರೂ, ತಮ್ಮ ಬುದ್ಧಿ ಸಾಮರ್ಥ್ಯದಿಂದ ಶತ್ರುನಿಗ್ರಹೋಪಾಯವನ್ನು ಚಿಂತಿಸಿ ಕಾರ್ಯಸಾಧನೆ ಮಾಡಿದ ಈ ನಾರೀಮಣಿಯ ಸಾಹಸವು ರಾಜಕಾರ್ಯ ಚತುರರಾದ ಪುರುಷಶ್ರೇಷ್ಠರ ಶ್ಲಾಘನೆಗೂ ಪಾತ್ರವಾಗಿರುವುದು. ಆದರೆ, ಸ್ವದೇಶೀಯರಾದ ಹೈದರಾಲಿ ಟಿಪ್ಪೂ ಮುಂತಾದವರ ನಾಶಕ್ಕೆ-ವಿದೇಶೀಯರಾದ ಬ್ರಿಟಿಷರ ಸಹಾಯಗೊಂಡು ರಾಜ್ಯಸಂಪಾದನೆ ಮಾಡಿದ ಈ ಕಾರ್ಯವು, ಕಾವಲಿಯಲ್ಲಿದ್ದು ಬೇಯಲಾರದೆ ಹೊರಳಿ ಒಲೆಯಲ್ಲಿ ಬಿದ್ದಂತಾಯಿತಲ್ಲವೆ ಎಂದು ಕೆಲವರಿಗೆ ತೋರಬಹುದು. ಹಾಗೆ ಯೋಚಿಸಲು ಕಾರಣವಿಲ್ಲ. ಆಗಿನ ಸ್ಥಿತಿಯಲ್ಲಿ ಅದಕ್ಕಿಂತಲೂ ಮತ್ತಾವ ಸುರಕ್ಷಿತ ಮಾರ್ಗವೂ ಇರಲಿಲ್ಲ-ಆ ಸಂದರ್ಭವನ್ನೂ ಆನು

ಕೌಶಲ್ಯವನ್ನೂ ಯೋಗ್ಯರೀತಿಯಿಂದ ಉಪಯೋಗಿಸಿಕೊಂಡು, ಕಾರ್ಯ ಸಾಧನೆ ಮಾಡಿದುದೇ ನಮ್ಮ ಕಥಾನಾಯಿಕೆಯ ಪ್ರತಿಭಾ ಪ್ರದರ್ಶಕ ಸಾಮರ್ಥ್ಯವನ್ನು ಸೂಚಿಸುತ್ತದೆ. ಈ ಮಾರ್ಗವನ್ನನುಸರಿಸಿ ಆಗ ಅಷ್ಟುಮಟ್ಟಿನ ಕಾರ್ಯವು ನಡೆಯದಿದ್ದಲ್ಲಿ, ಮೈಸೂರಿನ ರತ್ನ ಸಿಂಹಾಸನವು ಇಂದು ಆರ್ಷೇಯ ಹಿಂದೂ ರಾಜವಂಶಾನುಯಾಯಿಗಳಿಂದ ವಿಭೂಷಿತವಾಗುವುದಕ್ಕೆ ಪ್ರತಿಯಾಗಿ, ವಿಧರ್ಮಿಗಳಾದ ಮುಹಮ್ಮದೀಯ ಅರಸರಿಂದ ಪರಿಪಾಲ್ಯವಾಗುತ್ತಿದ್ದಿತೆಂಬುದಕ್ಕೆ ಸಂಶಯವಿಲ್ಲ. ಆದುದರಿಂದ ಅಂತಹ ದುರಂತ ಸಂಕಟ ಕಾಲದಲ್ಲಿ ನಮ್ಮ ಕಥಾನಾಯಿಕೆಯವರು ಹೇಗೆ ಕಾರ್ಯ ಸಾಧನೆ ಮಾಡಿದರೆಂಬುದು ಮೈಸೂರಿನ ರಾಜನಿಷ್ಠ ಪ್ರಜೆಗಳೂ, ಬಾಲಕ ಬಾಲಿಕೆಯರೂ ತಿಳಿಯಬೇಕಾದ ವೃತ್ತಾಂತವಾಗಿದೆ. ಅದನ್ನು ಇಲ್ಲಿ ಯಥಾಮತಿ ಸಂಗ್ರಹವಾಗಿ ಕೊಡಲಾಗುತ್ತದೆ. ಗ್ರಂಥಮಾಲಾಭಿಮಾನಿಗಳಾದ ಕರ್ಣಾಟಕ ಮಹಾಜನರು, ಸ್ವಾಭಾವಿಕ ಪ್ರೇಮದಿಂದ ಇದಕ್ಕೂ ಸ್ವಾಗತವನ್ನಿತ್ತು ನಮ್ಮ ಭಾಷಾ ಸೇವೆಗೆ ಪ್ರೋತ್ಸಾಹಕರಾಗಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ,<br>ತಾ|| ೧೮-೫-೧೯೩೦.

ಇತಿ ಸುಜನ ವಿಧೇಯ,<br>**ಯಂ. ರಮರಾವ್.**



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.—೧೯೩೦—೩೦೦೦ ಪ್ರತಿಗಳು.

## ಧೀರರೆಂತಿರುವರು ?

ಕಂ|| ಎಡರಡಸುವು ದೆಂದಂಜುತೆ
ತೊಡಗರ್ಕಾರ್ಯವನೆ ನೀಚರೆಡರಡಸಲೊಡಂ
ಬಿಡುವರ್ಮಧ್ಯಮ ರೆಡರೆನಿ
ತಡಸಿದೊಡಂ ತ್ಯಜಿಸರಾಂತಕೃತ್ಯವ ಧೀರರ್

'ವಿಘ್ನವು ಪ್ರಾಪ್ತಿಸುವುದೆಂದು ಹೆದರಿ ಅಧಮರು, ಕಾರ್ಯ ಪ್ರಯತ್ನವನ್ನೇ ಮಾಡುವುದಿಲ್ಲ. ಮಧ್ಯಮರು ಕಾರ್ಯ ಪ್ರಯತ್ನವನ್ನೇನೋ ಮಾಡಿ ಕಷ್ಟಬಂದಿತೆಂದೊಡನೆಯೇ ಅದನ್ನು ಬಿಟ್ಟುಬಿಡುತ್ತಾರೆ. ಆದರೆ ಉತ್ತಮ ವರ್ಗಕ್ಕೆ ಸೇರಿದ ಧೀರರು ತಾವು ಪ್ರಾರಂಭಿಸಿದ ಕಾರ್ಯಕ್ಕೆ ಎಷ್ಟು ವಿಘ್ನಗಳು ಪ್ರಾಪ್ತವಾದರೂ ಅದನ್ನು ಬಿಡದೆ ಸಾಧಿಸಿಯೇ ತೀರುವರು.

ಕಂ|| ಕೆಡುಕರ್ಕೆಡುಕುಗಳಂ ಗೈ
ದೊಡಮೆನಿತುಂ ತೊರೆಯನಾತ್ಮಧೈರ್ಯವ ಧೀರಂ
ಬಿಡುವನೆ ಯಧೋಮುಖಂ ಗೈ
ದೊಡ ಮೂರ್ಧ್ವಜ್ವಲನಮಂ ಹುತಾಶನನೆಂದುಂ

"ಧೀರನಾದವನು, - ಕೆಡುಕರು ತನಗೆ ಎಷ್ಟು ಬಗೆಯಿಂದ ಕೆಡಕುಗಳನ್ನುಂಟುಮಾಡಿ, ವಿಘ್ನಗಳನ್ನು ತಂದೊಡ್ಡಿ ತನ್ನ ಕಾರ್ಯಕ್ಕೆ ಹಾನಿಯನ್ನುಂಟುಮಾಡಲೆಣಿಸಿದರೂ ತನ್ನ ಧೈರ್ಯವನ್ನೂ ಉದ್ಯಮವನ್ನೂ ಎಂದಿಗೂ ತೊರೆಯಲಾರನು. ಪಂಜನ್ನು ತಲೆಕೆಳಗಾಗಿ ಹಿಡಿದರೂ ಜ್ವಾಲೆಯು ಊರ್ಧ್ವಮುಖವಾಗಿಯೇ ಉರಿಯುತ್ತಿರುವುದಲ್ಲವೆ ?"



ಶ್ರೀರಾಮಸಹಾಯಂ

ಮಹಾ ಮಾತೃ ಶ್ರೀ

# ಲಕ್ಷ್ಮಮ್ಮಣ್ಣಿಯವರು

**ಅಧ್ಯಾಯ ೧** **"ಮೈಸೂರು ರಾಜವಂಶ"**

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಎಂಬ ವಾಕ್ಯ ರತ್ನವನ್ನು ನುಡಿದು, ಆರ್ಯರು, ಜನ್ಮಭೂಮಿಯೂ-ಜನನಿಯಂತೆಯೇ ಪೂಜ್ಯವಾದುದೆಂದೂ, ಜನನೀ ಜನ್ಮಭೂಮಿಗಳೆರಡೂ ಸ್ವರ್ಗಕ್ಕಿಂತಲೂ ಶ್ರೇಷ್ಠವಾದುವೆಂದೂ ಸಾರಿದರು. ಜನನಿಯು ನಮಗೆ ಜನ್ಮವಿತ್ತು, ಪೋಷಿಸಿ ಹೀಗೆ ಉಪಕಾರಿಣಿಯಾಗಿದ್ದರೆ, ಜನ್ಮಭೂಮಿಯು ಅಂತಹ ನಮ್ಮ ಮಾತೃವಿಗೂ ಜನ್ಮದಾತೃವಾಗಿ, ನಮಗೆ ಸಕಲವಿಧ ಆಹಾರ ಪಾನೀಯಗಳನ್ನೂ ಒದಗಿಸಿ-ಬದುಕಿ ವಾಸಿಸಲು ಎಡೆಯನ್ನು ಕಲ್ಪಿಸಿ, ಹೀಗೆ ಬದುಕಿರುವಷ್ಟು ಕಾಲವೂ ಪರಮೋಪಕಾರಿಣಿಯಾಗಿ ನಮ್ಮ ಚಿರ ಕೃತಜ್ಞತೆಗೆ ಪಾತ್ರವಾಗಿದೆ. ಇಂತಹ ದೇಶಮಾತೃವನ್ನು ನಿತ್ಯವೂ ತ್ರಿಕಾಲಗಳಲ್ಲೂ ಸ್ಮರಿಸಿ ಕೃತಜ್ಞನಾಗಿರತಕ್ಕುದು ದೇಶಪುತ್ರನ ಕರ್ತವ್ಯವೆಂಬುದನ್ನು ಸೂಚಿಸಲಿಕ್ಕಾಗಿಯೇ ಪೂರ್ವಿಕ ಮಹರ್ಷಿಗಳು, 'ಭರತವರ್ಷೇ-ಭರತಖಂಡೇ' ಎಂಬೀ ಪದಗಳನ್ನು ಸಂಧ್ಯಾಸಂಕಲ್ಪದಲ್ಲಿ ಸೇರಿಸಿರುವರೆಂದು ಭಾವಿಸಲು ಆಕ್ಷೇಪವೇನುಂಟು !

ಹೀಗೆ ನಮ್ಮ ಮಾತೃಭೂಮಿಯಾದ ಭಾರತ ದೇಶವನ್ನು ಮಾತೃಸದೃಶವಾದುದೇ ಎಂದು ಪರಮ ಭಕ್ತಿಯಿಂದ ಸೇವಿಸಬೇಕಾದುದು ಪ್ರತಿಯೊಬ್ಬ ವ್ಯಕ್ತಿಯ ಪ್ರಥಮ ಕರ್ತವ್ಯವು. ಅಂತಹ ಮಾತೃಭೂಮಿಯು

ದುರದೃಷ್ಟದಿಂದ ಪರಾಕ್ರಾಂತವಾಗಿ, ದೇಶೀಯರಿಗೆ ಪರಾಧೀನತೆಯು ಪ್ರಾಪ್ತವಾಗಿದ್ದ ಸಂದರ್ಭದಲ್ಲಿ ದೇಶಪುತ್ರರು ತಮ್ಮ ಧನಧಾನ್ಯ ಪಶು ಕ್ಷೇತ್ರಾದಿಗಳನ್ನು ಮಾತ್ರವಲ್ಲ-ತನುಮನಗಳನ್ನೂ ಸಮರ್ಪಿಸಿ ದೇಶಮಾತೆಯ ದಾಸ್ಯವನ್ನು ನೀಗಿಸಲು ಹಿಂಜರಿಯಬಾರದು. ಇಂತಹ ದಾಸ್ಯಸ್ಥಿತಿಯು ಲೋಕದ ಸಮಸ್ತ ದೇಶಗಳಿಗೂ ಒಂದಲ್ಲ ಒಂದು ವೇಳೆ ಪ್ರಾಪ್ತವಾಗಿಯೇ ಇರುವುದು. ಆ ಸಂದರ್ಭಗಳಲ್ಲೆಲ್ಲ ಆಯಾ ದೇಶೀಯರು ಪ್ರಾಣಗಳನ್ನು ತೃಣವಾಗೆಣಿಸಿ, ತಮ್ಮೊಡೆಯ ರಕ್ತವನ್ನು ನೀರಿನಂತೆ ಲಘುದೃಷ್ಟಿಯಿಂದ ಸುರಿಸಿ, ಶತ್ರುಗಳನ್ನು ನಿವಾರಿಸಿಕೊಂಡು, ತಮ್ಮ ದೇಶಮಾತೆಯ ಗೌರವಾಭಿಮಾನಗಳನ್ನು ಕಾಪಾಡಿ ತಾವೂ ಸ್ವತಂತ್ರರಾಗಿ ಜಗನ್ಮಾನ್ಯರೆನ್ನಿಸಿಕೊಂಡರು. ಮಾತೃದೇಶದ ಸ್ವಾತಂತ್ರ್ಯ ಸಾಧನೆಗಾಗಿ ಹೋರಾಡಿದ ಇಂತಹ ಪುರುಷ ಪುಂಗವರ ದಿವ್ಯನಾಮಗಳು ಪ್ರತಿಯೊಂದು ದೇಶದ ಚರಿತ್ರಾಕಾಶದಲ್ಲೂ ನಕ್ಷತ್ರಗಳಂತೆ ಪ್ರಕಾಶಮಾನವಾಗಿದೆ.

ವಿಧಿನಿಯಮದಿಂದಲೋ ಎಂಬಂತೆ ಪೃಥ್ವಿಯ ಸಕಲ ದೇಶಗಳಿಗೂ ಒಂದಿಲ್ಲೊಂದು ಕಾಲಕ್ಕೆ ಪ್ರಾಪ್ತವಾಗುವ ಈ ದಾಸ್ಯ ಸ್ಥಿತಿಯು, ದುರ್ದೈವದಿಂದ ಭಾರತದೇಶಕ್ಕೂ ಪ್ರಾಪ್ತವಾಯಿತು. ದೇಶೀಯರು ವಿವಿಧ ಕಷ್ಟನಷ್ಟಗಳಿಗೂ ಅಗೌರವ ಅಪಮಾನಗಳಿಗೂ ಒಳಪಟ್ಟು ಸಿಗ್ಗಿ ಸುಗ್ಗಿ ಹಣ್ಣಾದರು. ಭಾರತೀಯರೆಂದರೆ, ಆದ್ಯಂತ ಭಾರತದೇಶದಲ್ಲಿ ಜನಿಸಿ ವಾಸಿಸುವ ಸಕಲರೂ ಎಂದು ಅರ್ಥವಾಗುತ್ತಿದ್ದರೂ, ಅವರಲ್ಲಿ ಮತ್ತೊಂದು ತರಗತಿಯೂ ಉಂಟು. ಭಾರತದೇಶದಲ್ಲಿ ದೇಶೀಯರಾಜರ ಪಾಲನೆಗೊಳಪಟ್ಟಿರುವ ಹಲವು ಸಂಸ್ಥಾನಗಳಲ್ಲಿ ವಾಸಿಸುತ್ತಿರುವ ಪ್ರಜೆಗಳೇ ಈ ಎರಡನೆಯ ತರಗತಿಗೆ ಸೇರಿದವರು. ಒಟ್ಟಿನಮೇಲೆ ದೇಶೀಯ ಸಂಸ್ಥಾನ ನಿವಾಸಿಗಳೂ, ವಿಶಾಲ ಭಾರತ ನಿವಾಸಿಗಳೂ ಹೀಗೆ ಎರಡು ವರ್ಗದವರೂ ಪರಾಧೀನತೆಗೆ ಒಳಪಟ್ಟಿರುವವರೇ ಆದರೂ, ದೇಶೀಯ ಸಂಸ್ಥಾನಗಳಲ್ಲಿರುವವರ ಪರಾಧೀನತಾ ವಸ್ತ್ರವು ಎರಡು ಮಡಿಕೆಗಳನ್ನುಳ್ಳದಾಗಿರುವುದು. ಅವರಿಗೆ ಎರಡು ಬಗೆಯ ಒತ್ತಡವುಂಟು. ಒಂದು ಆದ್ಯಂತ ಭಾರತದ ಆಳರಸರದು. ಮತ್ತೊಂದು ದೇಶೀಯ ಪ್ರಭುಗಳದು. ದೇಶೀಯ ಪ್ರಭುಗಳು ತಮ್ಮ ಇಚ್ಛಾನುಸಾರವಾಗಿ ಕಲ್ಪಿಸುವ ನಿಯಮಗಳು ಕೆಲವು, ಹೇರುವ

ಕಂದಾಯ ತೌಳಿಗೆಗಳು ಕೆಲವು, ಸುಲಿವ ಸುಂಕಗಳು ಕೆಲವು-ಸಾಮ್ರಾಜ್ಯ ಪ್ರಭುತ್ವದವರು ತಮ್ಮ ಇಷ್ಟ ಅನುಕೂಲತೆಗಳನ್ನು ಅನುಸರಿಸಿ ಹೊರಿಸಿ ಸೆಳೆಯುವ ಸುಂಕಗಳು ಕೆಲವು. ಹೀಗೆ ದೇಶೀಯ ರಾಜ್ಯಗಳವರು-ಗೋಡೆಯ ಪಕ್ಕದಲ್ಲಿ ನಿಂತು ಕೆನ್ನೆಗೆ ಹೊಡೆಸಿಕೊಂಡವನಂತೆ-ಎರಡು ಬಗೆಯ ನಿರ್ಬಂಧಗಳಿಗೂ ಸಿಕ್ಕಿ ಸಂಕಟಪಡುತ್ತಿದ್ದಾರೆ. ಇವರಲ್ಲಿ ಕೆಲವರಿಗೆ ದಿನ ದಿನಕ್ಕೆ ದೇಶದಲ್ಲಿ ಪ್ರಬಲಿಸುತ್ತಿರುವ ಕಷ್ಟ ತಾಪತ್ರಯಗಳಿಗೆ ಮೂಲಕಾರಣವಾಗಿರುವ ರಾಜ್ಯಪಾಲನೆಯ ಅವ್ಯವಸ್ಥಿತಿ ಮುಂತಾದುವುಗಳ ಪರಿಚಯವಿಲ್ಲದೆ, ಅವರು 'ಕಲಿಯುಗ-ಕಾಲ ಕೆಟ್ಟುಹೋಯಿತು' ಎಂದು ಮುಂತಾಗಿ ಮಾತ್ರ ಹೇಳಿಕೊಳ್ಳುವರು. ನಿಶ್ಚಯವಾದ ದೇಶಸ್ಥಿತಿಯ ಪರಿಜ್ಞಾನವಿದ್ದವರಿಗೆ ತಮಗೆ ಪ್ರಾಪ್ತವಾಗಿ-ತಮ್ಮ ಪ್ರಾಣಾಧಾರವಾದ ರಕ್ತವನ್ನು ಹೀರಿ, ಮಾಂಸವನ್ನು ಶೋಷಿಸಿ, ಎಲುಬನ್ನು ಕರಗಿಸುತ್ತಿರುವ ಈ ಕ್ಷಯರೋಗಕ್ಕೆ ಕಾರಣವು ಮತ್ತಾವುದೂ ಅಲ್ಲ, ಸ್ವಾರ್ಥಪರರೂ ದುಂದುಗಾರರೂ, ವಿಷಯ ಲೋಲುಪರೂ ಆದ ರಾಜ್ಯಾಧಿಕಾರಿಗಳ ಧೂರ್ತತೆ ದುರ್ನಡತೆಗಳೇ ಎಂದು ತೋರಿಬರುವುದು. ಹೀಗೆ ಯಾವುದೊಂದು ದೇಶದಲ್ಲಿ ಅಧಿಕಾರಿಗಳ ಪ್ರಾಬಲ್ಯವುಂಟಾಗಲು, ರಾಜನ ದರ್ಪಯುಕ್ತ ಅಧಿಕಾರವು ತಪ್ಪುವುದೇ ಮುಖ್ಯ ಕಾರಣವು. ಹೀಗೆ ರಾಜನ ದರ್ಪವೂ ಅಧಿಕಾರಿವರ್ಗದ ಪ್ರಾಬಲ್ಯವೂ ಹೆಚ್ಚುವುದಕ್ಕೆ, ರಾಜನು ಬಾಲಕನಾಗಿರುವುದೂ, ರಾಜ್ಯಕ್ಕೆ ಸ್ತ್ರೀಯು ಅಧಿಕಾರಿಣಿಯಾಗಿರುವುದೂ ಅನುಕೂಲ ಸಂದರ್ಭಗಳು. ಮಾತ್ರವಲ್ಲ-ಮುಖ್ಯಾಧಿಕಾರಿಯು ರಾಜನ ಸಂಬಂಧಿಯೂ, ಸ್ನೇಹಿತನೂ, ಆಗಿದ್ದ ಸಂದರ್ಭದಲ್ಲೂ ಅಧಿಕಾರಸ್ಥಾನದ ಸುವ್ಯವಸ್ಥೆಗೆ ಭಂಗ ಬರುವುದುಂಟು. ಹೀಗೆ ಹೇಳಿದುದರಿಂದ, ರಾಜ್ಯದ ಮುಖ್ಯಾಧಿಕಾರಿಯು ರಾಜನೊಂದಿಗೆ ಸ್ನೇಹವಾಗಿರದೆ ಶತ್ರುಸ್ಥಾನದಲ್ಲಿರಬೇಕೆಂಬ ಅರ್ಥವಾಗಬಾರದಷ್ಟೆ! ಈ ಸಂದರ್ಭದಲ್ಲಿ ನಮ್ಮ ಅಭಿಪ್ರಾಯವಿಷ್ಟೆ! ಅಂತಹ ಅಧಿಕಾರಿಗೆ ರಾಜನೊಂದಿಗಿರುವ ಸ್ನೇಹವು, ಆತನನ್ನು – 'ತಾನು ರಾಜನ ಸೇವಕನು, ರಾಜ್ಯದ ಏಳ್ಗೆಯ ವಿಚಾರದಲ್ಲಿ ತಾನು ಪ್ರಭುವಿಗೆ ಉತ್ತರವಾದಿಯು'' ಎಂಬ ಭಾವನೆಯನ್ನು ಕಳೆದುಕೊಳ್ಳದಂತೆ ರಕ್ಷಿಸುವುದಾಗಿರಬೇಕು. ಹೀಗೆ ರಾಜನಿಗೂ ಅಧಿಕಾರಿಗೂ ಸೇವ್ಯ ಸೇವಕ ಭಾವನೆಯು ತಪ್ಪಿ-ಅಧಿಕಾರಿಯು

ತನಗೂ ರಾಜನಿಗೂ ಅದ್ವೈತ ಭಾವನೆಯನ್ನು ಕಲ್ಪಿಸಿಕೊಂಡ ಸಂದರ್ಭದಲ್ಲಿ ಪ್ರಜೆಗಳ ಕಷ್ಟನಷ್ಟಗಳು ಮೇರೆ ಮೀರುವುವು. ಅವರು ತಮ್ಮತೊಂದರೆ ತಾಪತ್ರಯಗಳನ್ನು ಕುರಿತು ಯಾರಲ್ಲಿ ಮೊರೆಯಿಟ್ಟುಕೊಳ್ಳಬೇಕು.! ರಾಜ ಮತ್ತು ಅಧಿಕಾರಿ ವರ್ಗದಲ್ಲಿ ಯಜಮಾನ ಸೇವಕಭಾವವು ತಪ್ಪುವುದರಿಂದಲೇ ಇಂತಹ ಸ್ಥಿತಿಯು ಪ್ರಾಪ್ತವಾಗಿ ದೇಶದಲ್ಲಿ ಶಾಂತತೆಯು ನಾಶವಾಗಲು ಕಾರಣವಾಗುವುದು.

ವಂಶಪಾರಂಪರ್ಯವಾಗಿ ಪ್ರಭುತ್ವಮಾಡುತ್ತ ಬರುತ್ತಿರುವ ಭಾರತದೇಶಿಯ ಸಂಸ್ಥಾನಗಳ ರಾಜವಂಶಗಳಲ್ಲಿ ಕೆಲವು ಸಂತತಿ ವಿಹೀನವಾದ ಕಾರಣದಿಂದಲೂ, ಮತ್ತೆ ಕೆಲವು ಪರಸ್ಪರ ಒಳ ಜಗಳಗಳಿಂದಲೂ, ಬೇರೆ ಕೆಲವುಗಳಲ್ಲಿ ಪ್ರಭುಗಳು ವಿಷಯಲೋಲುಪರಾದ ಕಾರಣದಿಂದಲೂ ಪರಾಧೀನವಾಗಿ ವಿವಿಧ ಕಷ್ಟನಷ್ಟಗಳಿಗೀಡಾದುವು. ಹದಿನೆಂಟನೆಯ ಶತಮಾನದಲ್ಲಿ ನಮ್ಮ ಮೈಸೂರು ದೇಶದ ರಾಜವಂಶಕ್ಕೆ ಮೇಲೆಹೇಳಿದ ಆಪದಗಳೆಲ್ಲವೂ ಏಕಕಾಲದಲ್ಲಿ ಒದಗಿದ್ದುವು. ರಾಜನು ಅಕಾಲ ಮೃತ್ಯುವಿಗೆ ತುತ್ತಾಗಿದ್ದನು. ಅಂತಃಪುರದ ಹೊಸ್ತಿಲನ್ನು ದಾಟಿ ಹೊರಕ್ಕೆ ಬರಲರಿಯದ ಅಬಲೆಯರು ರಾಜ್ಯಕ್ಕೆ ಬಾಧ್ಯಸ್ಥರಾಗಿ ನಿಂತಿದ್ದರು. ಅದೇಕಾಲದಲ್ಲಿ ಅಧಿಕಾರಿವರ್ಗವು ದಿನದಿನಕ್ಕೆ ಪ್ರಬಲಿಸಿ, ರಾಜವಂಶವನ್ನೇ ಮೂಲೆಗೊತ್ತಿ ರಾಜ್ಯಾಕ್ರಮಣ ಮಾಡಲು ಹೊಂಚುಹಾಕುತ್ತಿದ್ದಿತು. ಇಂತಹ ದುರಂತ ಸಂಕಟ ವೇಳೆಯಲ್ಲಿ,-ಸಂಸ್ಥಾನವು ಪರಾಧೀನವಾಗಿ, ಸ್ವಗೃಹವೇ ಸೆರೆಮನೆಯೂ, ಸ್ವದೇಶವೇ ಪರದೇಶವೂ ಆಗಿ ಮಾರ್ಪಟ್ಟಿದ್ದ ಆ ವೇಳೆಯಲ್ಲಿ-ತಮ್ಮ ಧೈರ್ಯಸಾಹಸಗಳು ರಾಜತಂತ್ರ, ಕುಶಲತೆ ಇವುಗಳಿಂದ ಪೂರ್ವದ ಮೈಸೂರು ರಾಜವಂಶವನ್ನು ಜೀರ್ಣೋದ್ಧಾರಗೊಳಿಸಿ, ಪರಾಕ್ರಾಂತವಾಗಿದ್ದ ದೇಶವನ್ನು ಪುನಃ ಸ್ವಾಧೀನಗೊಳಿಸಿ ರಕ್ಷಿಸಿದ ನಮ್ಮ ಕಥಾನಾಯಿಕೆ ಲಕ್ಷ್ಮಮ್ಮಣ್ಣಿಯವರನ್ನು ಆದ್ಯಂತ ದೇಶವೂ, ರಾಜ ಮನೆತನವೂ ಮಹಾಮಾತೃಶ್ರೀ ಎಂದು ಗೌರವಿಸಿದರೆ ಅದರಲ್ಲಿ ಅತಿಶಯವೇನು ?

ವಂಶ ಕರ್ತೃಗಳಾದ ಯದುರಾಜರ ಕಾಲದಿಂದಲೂ ಅವಿಚ್ಛಿನ್ನವಾಗಿ ನಡೆದು ಬರುತ್ತಿರುವ ಈ ಮೈಸೂರು ರಾಜವಂಶಕ್ಕೆ ಮಧ್ಯಕಾಲದಲ್ಲಿ ಪ್ರಾಪ್ತವಾಗಿದ್ದ ಅಂತಹ ಸಂಕಟವೇನು; ಅದು ನಮ್ಮ ಕಥಾನಾಯಿಕೆಯ ಪರಿಶ್ರ

ಮದಿಂದ ಹೇಗೆ ನಿವಾರಣೆಯಾಯಿತು ಎಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ತಿಳಿಯಬಹುದು.



**ಅಧ್ಯಾಯ ೨** **“ಲಕ್ಷ್ಮಮ್ಮಣ್ಣಿಯವರು”**

ಮೈಸೂರು ರಾಜಸಿಂಹಾಸನವನ್ನೇರಿದ ಪ್ರಭುಗಳಲ್ಲಿ, ಶ್ರೀಮದ್ವಾರಕಾನಗರೀ ಪ್ರಾಂತದಿಂದ ಬಂದ ಯದುರಾಯರೇ ಮೊದಲನೆಯವರು. ಈಗಿನ ರಾಜವಂಶಕ್ಕೆ ಮೂಲಪುರುಷರೂ ಈ ಮಹನೀಯರೇ. ಇವರು ಕ್ರಿ. ಶ. ಹದಿನಾಲ್ಕನೆಯ ಶತಮಾನದ ಅಂತ್ಯಭಾಗದಲ್ಲಿ ಮಾರನಾಯಕನೆಂಬ ದುಷ್ಟ ಪಾಳೆಯಗಾರನ ಬಾಧೆಯಿಂದ ಮೈಸೂರಿನ ಚಾಮರಾಜರ ಪತ್ನಿ ದೇವಾಜಮ್ಮಣ್ಣಿಯವರನ್ನು ಕಾಪಾಡಿ, ಅವರ ಪುತ್ರಿಯ ಪಾಣಿಗ್ರಹಣಮಾಡಿ, ಮೈಸೂರು ರತ್ನ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತರಾದರು. ಇವರಿಗೆ ಪಟ್ಟಾಭಿಷೇಕವಾದ ಕ್ರಿ. ಶ. ೧೩೯೯ನೆಯ ಸಂವತ್ಸರದಿಂದ, ೧೭೯೯ನೆಯ ಸಂವತ್ಸರದವರೆಗೆ ಈ ಪೀಠವನ್ನು ಇಪ್ಪತ್ತೊಂದು ಮಂದಿ ಇವರ ವಂಶೀಕರಾದ ಅರಸರು ಪರಿ ಆಧಿಪತ್ಯಮಾಡಿದರು. ಆದಿಯಿಂದ ಈಗಿನವರೆಗೂ, ಈ ರಾಜಮನೆತನಕ್ಕೆ ಮೈಸೂರು ಪಟ್ಟಣವೇ ರಾಜಧಾನಿಯಾಗಿರುವುದು. ಒಂಬತ್ತನೆಯ ಪಟ್ಟದ ರಾಜಒಡೆಯರು, ಮೂವತ್ತೊಂಬತ್ತು ವರ್ಷಕಾಲದ ತಮ್ಮ ದೀರ್ಘವಾದ ಆಳ್ವಿಕೆಯಲ್ಲಿ, ದೇಶವನ್ನು ವಿಶೇಷವಾಗಿ ವಿಸ್ತರಿಸಿ ವಿಖ್ಯಾತರೆನ್ನಿಸಿಕೊಂಡರು. ಕ್ರಿ. ಶ. ೧೬೧೦ನೆಯ ಸಂವತ್ಸರದಲ್ಲಿ ವಿಜಯನಗರ ರಾಜ್ಯಕ್ಕೆ ಸೇರಿದ್ದ ಶ್ರೀರಂಗಪಟ್ಟಣವೂ ಇವರಿಗೆ ಕೈವಶವಾಗಿ ಮೈಸೂರು ರಾಜರ ಕೀರ್ತಿ ಪ್ರತಿಷ್ಠೆಗಳು ಮತ್ತೂ ಹೆಚ್ಚಿದುವು. ಇವರ ತರುವಾಯ ಪಟ್ಟಕ್ಕೆ ಬಂದ ಇಬ್ಬರು ರಾಜರುಗಳ ಕಾಲದಲ್ಲಿ ಅಷ್ಟು ಪ್ರಸಿದ್ಧ ಸಂಗತಿಗಳಾವುವೂ ನಡೆಯಲಿಲ್ಲವಾದರೂ, ಹನ್ನೆರಡನೆಯ ಪಟ್ಟದ ರಣಧೀರ ಕಂಠೀರವ ನರಸರಾಜಒಡೆಯರವರ ಕಾಲದಲ್ಲೂ, ತರುವಾಯ ಹದಿನಾಲ್ಕನೆಯ ಪಟ್ಟದ ಚಿಕ್ಕದೇವರಾಜ ಒಡೆಯರವರ ಕಾಲದಲ್ಲೂ ಮೈಸೂರು ರಾಜ್ಯದ ಗಡಿಗಳು ನಾಲ್ಕು ದಿಕ್ಕುಗಳಲ್ಲೂ ವಿಸ್ತರಿಸಲ್ಪ

ಟ್ಟುವು. ಅನೇಕ ದುರ್ಗಗಳು ಕೈವಶವಾದುವು. ಸುತ್ತಮುತ್ತಲಿದ್ದ ಶತ್ರುರಾಜರೂ, ಪಾಳಯುಗಾರರೂ ಈ ರಾಜವರೇಣ್ಯರ ಶೌರ್ಯ ಪ್ರತಾಪಾದಿಗಳಿಗೆ ಅಣಗಿ, ಶರಣಾಗತರಾಗಿ ಕಪ್ಪ ಕಾಣಿಕೆಗಳನೊಪ್ಪಿಸಿ, ಸಾಮಂತರಾಗಿರಲು ಒಪ್ಪಿದರು. ರಾಜ್ಯವು ಧನಧಾನ್ಯ ಸಮೃದ್ಧಿಯಿಂದ ತುಂಬಿರಲು ಪ್ರಜೆಗಳು ಸುಖ ಸಂತೋಷಗಳನ್ನು ಅನುಭವಿಸುತ್ತ ಭಾರತದೇಶದ ಸಕಲ ಸಂಸ್ಥಾನಗಳಿಗೂ ಇದು ಶಿರೋಭೂಷಣ ಪ್ರಾಯವಾದುದು ಎಂಬ ಪ್ರಶಂಸೆಗೆ ಪ್ರಾಪ್ತವಾಯಿತು. ಚಿಕ್ಕದೇವರಾಜ ಒಡೆಯರ ಮಹತ್ವಪೂರ್ಣ ಆಳ್ವಿಕೆಯು ಕ್ರಿ. ಶ. ೧೭೦೪ನೆಯ ಸಂವತ್ಸರದಲ್ಲಿ ಕೊನೆಗಾಣಲು, ತರುವಾಯ, ಕಂಠೀರವ ಮಹಾರಾಜರೂ, ದೊಡ್ಡಕೃಷ್ಣರಾಜ ಒಡೆಯರೂ ಕೆಲಕೆಲವು ಕಾಲ ರಾಜ್ಯಭಾರವಮಾಡಿ ಸ್ವರ್ಗಸ್ಥರಾದರು. ಈ ದೊಡ್ಡಕೃಷ್ಣರಾಜ ಒಡೆಯರ ವರೆಗೂ ರಾಜರು ಸ್ವಯಂ ಶಕ್ತರಾಗಿ, ರಾಜ್ಯ ವಿಚಾರಗಳನ್ನು ಸ್ವತಃ ಗಮನಿಸುತ್ತಿದ್ದುದರಿಂದ ಅಧಿಕಾರಿಗಳ ಪ್ರಾಬಲ್ಯಕ್ಕೆ ಅಷ್ಟುಮಟ್ಟಿನ ಅವಕಾಶವುಂಟಾಗಿರಲಿಲ್ಲ. ತಮ್ಮ ರಾಜಧಾನಿಯಮೇಲೆ ದಂಡೆತ್ತಿಬಂದ ಮರಾಟೆಯವರನ್ನೂ, ಒಳನಾಡಿನ ತುಂಟ ಪಾಳೆಯಗಾರರನ್ನೂ ರಾಜರು ಸ್ವತಃ ಶಸ್ತ್ರಧಾರಿಗಳಾಗಿ ಹೋಗಿ ಅಡಗಿಸಿ ಬಹು ದರ್ಪದಿಂದ ಪ್ರಭುತ್ವಮಾಡಿದರು. ಇವರು ಕ್ರಿ. ಶ. ೧೭೩೨ನೆಯ ಸಂವತ್ಸರದಲ್ಲಿ, ಸಂತತಿವಿಹೀನರಾಗಿ ಕೀರ್ತಿಶೇಷರಾದುದರಿಂದ, ರಾಜ್ಯಕ್ಕೆ ಇವರ ಪತ್ನಿಯರೇ ಬಾಧ್ಯಸ್ಥರಾಗಿ ನಿಂತರು.

ಅಂತಃಪುರ ನಿವಾಸಿಗಳಾದ ರಾಜಸ್ತ್ರೀಯರು ರಾಜ್ಯಕ್ಕೆ ಬಾಧ್ಯಸ್ಥರಾಗಿ ನಿಂತುದರಿಂದ, ರಾಜ್ಯಾಧಿಕಾರವು ಅವರ ಆಜ್ಞೆಯನ್ನನುಸರಿಸಿ ನಡೆವ ಅಧಿಕಾರಿಗಳ ಹಸ್ತಗತವಾಗಲು ಈಗಿನಿಂದ ಅವಕಾಶವುಂಟಾಯಿತು. ದೊಡ್ಡಕೃಷ್ಣರಾಜ ಒಡೆಯರು ಮೃತರಾದ ಈ ಸಂದರ್ಭದಲ್ಲಿ ದಳವಾಯಿ ದೇವರಾಜಯ್ಯ ಸರ್ವಾಧಿಕಾರಿ ನಂಜರಾಜಯ್ಯ ಮತ್ತು ಕರಾಚೂರಿ ನಂಜರಾಜಯ್ಯ ಎಂಬ ಅಧಿಕಾರಿಗಳು ರಾಜಸೇವಕ ವರ್ಗದಲ್ಲಿ ಮುಖ್ಯಸ್ಥರಾಗಿದ್ದ ಮರೆಸ್ನಬಹುದು. ಮೃತ ಮಹಾರಾಜರ ಪತ್ನಿಯವರಾದ ದೇವಾಜಮ್ಮಣ್ಣಿಯವರು, ತಮ್ಮ ಪತಿಯ ಮರಣಕಾಲದ ಸಂದೇಶವನ್ನನುಸರಿಸಿ ತಮ್ಮ ಜ್ಞಾತಿಯವಾದ ಅಂಕನಹಳ್ಳಿ ದೇವರಾಜೇ ಅರಸಿನವರ ಮಗ ಇಪ್ಪತ್ತೆಂಟು

ವರ್ಷ ವಯಸ್ಸಿನ ಚಾಮರಾಜಯ್ಯನೆಂಬಾತನನ್ನು ಸಕುಟುಂಬವಾಗಿ ಕರೆಸಿ, ದತ್ತು ಸ್ವೀಕಾರಮಾಡಿಕೊಂಡು, ಆತನಿಗೆ ರಾಜ್ಯವನ್ನು ವಹಿಸಿದರು. ಇದು ಸರ್ವಾಧಿಕಾರಿಗಳಾಗಿದ್ದ ದಳವಾಯಿ ದೇವರಾಜಯ್ಯ ಮೊದಲಾದವರಿಗೆ ಸಹನೆಯಾಗಲಿಲ್ಲ. ಚಾಮರಾಜಯ್ಯನು, ಮಹಾರಾಣಿಯವರ ಕೃಪಾಪಾತ್ರನಾಗಿ ರಾಜ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾಗಿದ್ದನಾದರೂ, ಈ ಅಧಿಕಾರಿಗಳು,-ಎಲ್ಲಿಯೋ ಹುಟ್ಟಿ ಬೆಳೆದ ಯಾವನೋ ಅನಾಮಧೇಯನ ಆಜ್ಞೆಗೆ ತಾವು ಬದ್ಧರಾಗಬೇಕಾದುದೇನೆಂದು ಚಾಮರಾಜರ ವಿಷಯದಲ್ಲಿ ಔದಾಸೀನ್ಯವನ್ನು ವಹಿಸಿ, ತಮ್ಮ ಮನಬಂದಂತೆ ರಾಜ್ಯಾಡಳಿತಗಳನ್ನು ನಡೆಯಿಸಲು ಆರಂಭಿಸಿದರು. ತಮಗೆ ಬೇಕಾದವರನ್ನು ಅಧಿಕಾರದಲ್ಲಿಟ್ಟು-ಬೇಡವಾದವರನ್ನು ತೊಲಗಿಸುವ ವಿಷಯದಲ್ಲಿ ಸರ್ವ ಸ್ವಾತಂತ್ರ್ಯವನ್ನು ವಹಿಸಿದ್ದರು. ಮನಬಂದಂತೆ ಲಂಚ ರುಷುವತ್ತುಗಳನ್ನು ಪಡೆದು ರಾಜ ಬೊಕ್ಕಸದ ಗತಿಯನ್ನೇ ಗಮನಿಸದೆ ಸ್ವಾರ್ಥಸಾಧಕರಾಗಿದ್ದರು. ರಾಜ್ಯದಲ್ಲಿನ ಫಲವತ್ತಾದ ಜಮೀನುಗಳನ್ನು ತಮ್ಮ ಸ್ವಂತಕ್ಕೆ ಪಡೆದು, ಹೀಗೆ ದಿನದಿನಕ್ಕೆ ಸಕಲ ವಿಧಗಳಿಂದಲೂ ತಮ್ಮ ಉಗ್ರಾಣವನ್ನು ತುಂಬಿಕೊಳ್ಳುವ ಕಾರ್ಯದಲ್ಲಿಯೇ ನಿರತರಾಗಿಬಿಟ್ಟರು. ಚಾಮರಾಜರನ್ನು ಕೇವಲ ಮೂಲವಿಗ್ರಹವಾಗಿಟ್ಟು, ನಾಮಮಾತ್ರಕ್ಕೆ ದೊರೆಗಳೆನ್ನಿಸಿ, ನಿರೂಪಗಳಿಗೆ ದಸ್ಕತ್ತುಗಳನ್ನು ಮಾತ್ರ ಅವರಿಂದ ಮಾಡಿಸುತ್ತ, ಯಾವ ಸ್ವಾತಂತ್ರ್ಯವೂ ಅವರ ಪಾಲಿಗೆ ಉಳಿಯದಂತೆ ಮಾಡಿ, ಎಲ್ಲಾ ಆಡಳಿತಗಳನ್ನೂ ತಾವೇ ನಿರಂಕುಶವಾಗಿ ನಡೆಯಿಸತೊಡಗಿದರು. ಈ ಆಡಳಿತವು ಹೀಗೆಯೇ ನಡೆದು ಬರಲೆಂದು ಉದಾಸೀನಮಾಡಿ ಕುಳಿತರೆ, ರಾಜ್ಯವು ಮುಂದೆ ತಮ್ಮ ಸ್ವಾಧೀನದಲ್ಲಿ ನಿಲ್ಲಲಾರದೆಂಬ ವಿಚಾರವು ಮನಸ್ಸಿಗೆ ಬರಲು, ಚಾಮರಾಜರು, ಈ ಅಧಿಕಾರಿಗಳ ಪ್ರಾಬಲ್ಯವನ್ನು ತಗ್ಗಿಸಿ, ನಿರಂಕುಶ ಪ್ರವರ್ತಕರಾಗಿರುವ ಕೆಲವರನ್ನು ತೊಲಗಿಸಿ ಆ ಸ್ಥಳಕ್ಕೆ ಬೇರೆ ತಮ್ಮ ಕಡೆಯವರನ್ನು ನಿಯಮಿಸಬೇಕೆಂದು ಯೋಚಿಸಿದರು. ಈ ಸಂಗತಿಯು ದಳವಾಯಿ ದೇವರಾಜಯ್ಯನಿಗೆ ತಿಳಿಯಲು, ಆತನು ಮಹಾರಾಣಿಯವರಲ್ಲಿಗೆ ಹೋಗಿ, ಚಾಮರಾಜರಮೇಲೆ ಅವರ ಮನಸ್ಸು ಕೆಡುವಂತೆ ಇಲ್ಲದ ಸಲ್ಲದ ದೂರುಗಳನ್ನೆಲ್ಲ ಹೇಳಿದನು. ಈ ವರ್ತಮಾನವು ತಿಳಿದೊಡನೆಯೆ, ಚಾಮರಾಜ ಒಡೆಯರು ದೇವರಾಜಯ್ಯನನ್ನು ಅಧಿಕಾರದಿಂದ

ತಪ್ಪಿಸಿ, ಆ ಸ್ಥಳಕ್ಕೆ ದೇವಯ್ಯನೆಂಬೊಬ್ಬ ಸಮರ್ಥನಾದ ಬ್ರಾಹ್ಮಣನನ್ನೂ ನಂಜರಾಜಯ್ಯನ ಸ್ಥಾನಕ್ಕೆ ಬೇರೊಬ್ಬನನ್ನೂ ನಿಯಮಿಸಿ, ಪ್ರಾಜ್ಞರಾದ ಹಲವು ಮಂದಿಯನ್ನು ಮಂತ್ರಾಲೋಚನೆಗೆ ಇಟ್ಟುಕೊಂಡು, ಸರ್ವವಿಷಯಗಳಲ್ಲೂ ಸ್ವತಂತ್ರರಾಗಿ, ಧರ್ಮದಿಂದ ಹದಿನೆಂಟು ತಿಂಗಳ ಕಾಲ ರಾಜ್ಯಭಾರಮಾಡಿದರು.

ಅಧಿಕಾರದ ರುಚಿಯನ್ನು ಕಂಡ ಜನರು, ಅಧಿಕಾರ ಭ್ರಷ್ಟರಾಗಿ ರಾಜ್ಯದಲ್ಲಿ ಪ್ರಬಲರಾಗಿರುವುದೆಂದರೆ, ಆ ಸ್ಥಿತಿಯನ್ನು-ಉಗ್ರಾಣದ ಬೊಕ್ಕೆಯೊಳಗೆ ಹೆಗ್ಗಣವನ್ನು ಕೂಡಿ ಗೂಡಿನ ಬಾಯಿಗೆ ಮಣ್ಣು ಮೆತ್ತಿದ ಸ್ಥಿತಿಗೆ ಹೋಲಿಸಬಹುದು. ದೇವರಾಜಯ್ಯ - ನಂಜರಾಜಯ್ಯಾದಿಗಳೂ ಅವರ ಪರಿವಾರದವರೂ, ರಾಜರ ಈ ಸ್ವತಂತ್ರ ವೃತ್ತಿಯನ್ನು ಕಂಡು ಸಹಿಸಲಾರದೆ, ಅವರನ್ನು ಹೇಗಾದರೂ ಮೂಲೋತ್ಪಾಟನ ಮಾಡಬೇಕೆಂದು ಸಂಕಲ್ಪಮಾಡಿ, ಎಂಟುಸಾವಿರ ಸೈನಿಕರು ರಾಜರಿಗೆ ಎದುರುಬೀಳುವಂತೆ ಪಿತೂರಿಮಾಡಿದರು. ಸಾಲದುದಕ್ಕೆ ತಮ್ಮ ಕಡೆಯ ಜನರನ್ನು ಅರಮನೆಯ ಬಳಿಯಲ್ಲೂ ಪಟ್ಟಣದ ಮುಖ್ಯ ಸ್ಥಳಗಳಲ್ಲೂ ಪಹರೆಯಿಟ್ಟು ಸೈನ್ಯದವರಾಗಲೀ ನಿತ್ಯ ಗಟ್ಟಲೆಯ ಪಹರೆಯವರಾಗಲೀ, ಸಮಯದಲ್ಲಿ ರಾಜರ ಸಹಾಯಕ್ಕೆ ಒದಗಿ ಬರದಂತೆ ಮಾಡಿಬಿಟ್ಟರು. ಈ ಸಂಧಾನ ವೃತ್ತಾಂತವೆಲ್ಲವೂ ಚಾಮರಾಜ ಒಡೆಯರಿಗೆ ತಿಳಿದು ಬರಲು, ಅವರು ನೇರವಾಗಿ ದೇವರಾಜಯ್ಯನ ಬಳಿಗೆ - 'ಅಯ್ಯಾ, ರಾಜ್ಯಾಡಳಿತಗಳಲ್ಲಿ ನಿಷ್ಕಾರಣವಾಗಿ ಕೆಲವು ಹೆಚ್ಚು ಕಡಮೆಗಳು ನಿಮ್ಮಿಂದ ಮಾಡಲ್ಪಟ್ಟುದರಿಂದ ನಾವು ಈ ಕಾರ್ಯವನ್ನು ನಡೆಯಿಸಬೇಕಾಯಿತು. ನಮಗೆ ಪಟ್ಟವಾದ ತರುವಾಯ ಎಂಟುತಿಂಗಳ ಕಾಲ ನಿಮ್ಮ ಅಭಿಪ್ರಾಯಾನುಸಾರವಾಗಿಯೇ ನಡೆಯಲಿಲ್ಲವೆ! ಈಗಲೂ ನಿಮ್ಮ ಇಷ್ಟಕ್ಕೆ ವಿರೋಧವಾಗಿ ನಡೆಯಬೇಕೆಂಬ ಅಭಿಪ್ರಾಯ ನಮಗಿಲ್ಲ. ಕೆಲಸ ಕಾರ್ಯಗಳು ನ್ಯಾಯಸಮ್ಮತವಾಗಿ ನಡೆಯಲಿ. ವೃಥಾ ಈ ಮನಃ ಕಲ್ಮಷಗಳೇಕೆ?'' ಎಂದು ಎಷ್ಟೋ ಬಗೆಯಲ್ಲಿ ಸಮಾಧಾನ ವಾಕ್ಯಗಳನ್ನು ಹೇಳಿ ಕಳುಹಿಸಿದರು. ಆದರೆ ಆ ಮಾತುಗಳಾವುವೂ, ಧೂರ್ತನಾದ ಆತನ ಕಿವಿಗೆ ಹಿಡಿಸಲಿಲ್ಲ. ಸ್ವಾಮಿ ದ್ರೋಹದಲ್ಲೇ ನಿಶ್ಚಯಾಭಿಪ್ರಾಯವುಳ್ಳವನಾಗಿದ್ದ ಆ ನೀಚನು, 'ರಾಮಬಾಣ' ವೆಂಬ ಹೆಸರಿನ ಆನೆಯಿಂದ ಅರ

ಮನೆಯ ಮಹಾದ್ವಾರವನ್ನು ಮುರಿಸಿ, ದೊರೆಗಳ ಹಸ್ತದಲ್ಲಿದ್ದ ಶಿಖಾಮೊಹರು ಪಟ್ಟದಕತ್ತಿಗಳನ್ನು ಸಿಂಹಾಸನದಮೇಲಿಟ್ಟು ಹಿಂದಿರುಗುವಂತೆ ಬಲವಂತಪಡಿಸಿ, ತರುವಾಯ ಚಾಮರಾಜರನ್ನು ಸಕುಟುಂಬವಾಗಿ ನಿರ್ಬಂಧದಿಂದ ಕಬ್ಬಾಳ ದುರ್ಗದ ಸೆರೆಮನೆಗೆ ಸಾಗಿಸಿ, ಅಲ್ಲಿ ಸೆರೆಯಲ್ಲಿಡಿಸಿದನು.

ಎಷ್ಟು ಉನ್ನತಾಧಿಕಾರದಲ್ಲಿದ್ದರೂ ರಾಜನ ಸೇವಕರಾಗಿರಬೇಕಾದ ಅಧಿಕಾರಿಗಳು, ಒಂದುವೇಳೆ ಪ್ರಬಲಿಸಿದರೆ, ಅದರಿಂದ ರಾಜನಿಗೂ ರಾಜ್ಯಕ್ಕೂ ಎಂತಹ ಪ್ರಮಾದ ಪರಂಪರೆಗಳು ಸಂಭವಿಸುವುವೆಂಬುದನ್ನು ತಿಳಿಸಲಿಕ್ಕಾಗಿ, ಮೇಲಿನ ವೃತ್ತಾಂತವನ್ನು ಸಂಕ್ಷೇಪವಾಗಿ ತಿಳಿಸಲಾಯಿತು. ಈ ಕಾಲದಿಂದ ಪ್ರಾರಂಭವಾದ ಈ ಬಗೆಯ ಅಧಿಕಾರಿಗಳ ನಿರಂಕುಶ ಆಡಳಿತವು ಮೈಸೂರಿನಲ್ಲಿ ಮುಂದೆ ಬಹುಕಾಲದವರೆಗೂ ನಿಲ್ಲಲಿಲ್ಲ. ನಮ್ಮ ಕಥಾನಾಯಿಕೆಯವರ ಕಾಲದಲ್ಲಿ ಪ್ರಾಪ್ತವಾದುದೆಂದು ಗ್ರಂಥ ಪ್ರಾರಂಭದಲ್ಲೇ ಹೇಳಿರುವ ರಾಜ್ಯದ ಪರಾಕ್ರಮಣಕ್ಕೆ ಬೀಜವು ಇಲ್ಲೇ ನಾಟಲ್ಪಟ್ಟುದರಿಂದ ಇಲ್ಲಿಂದ ಈ ಸಂಗತಿಯನ್ನು ಹೇಳಬೇಕಾಯಿತು. ತರುವಾಯ ಕಬ್ಬಾಳದುರ್ಗದ ಸೆರೆಮನೆಗೆ ನಡೆದ ಚಾಮರಾಜರು, ತಮ್ಮನ್ನು ಆ ಸ್ಥಿತಿಗೆ ಗುರಿಮಾಡಿದ ದೇವರಾಜಯ್ಯನ ವಂಶವು ನಾಶವಾಗಲೆಂದು ಶಪಿಸಿ ಮುಂದೆ ಎಂದೋ ಒಂದು ದುರ್ದಿನದಲ್ಲಿ ಅಸುವನ್ನು ನೀಗಿದರಂತೆ; ಅದಂತಿರಲಿ!

ಇತ್ತ ಪುನಃ ಸರ್ವಾಧಿಕಾರಿಯ ಸ್ಥಾನದಲ್ಲಿ ಸ್ವಯಂ ಪ್ರತಿಷ್ಠಿತನಾದ ದಳವಾಯಿ ದೇವರಾಜಯ್ಯನು, ಚಾಮರಾಜರಿಂದ ನಿಯಮಿತರಾಗಿದ್ದ ಅಧಿಕಾರಿಗಳನ್ನೆಲ್ಲಾ ನಿರ್ಬಂಧಗೊಳಿಸಿ, ಆ ಸ್ಥಾನಗಳಿಗೆಲ್ಲ ತನ್ನಜನಗಳನ್ನೇ ನಿಯಮಿಸಿ, ಸಿಂಹಾಸನದಲ್ಲಿ ಒಂದು ಮೂಲ ವಿಗ್ರಹವನ್ನಿರಿಸಬೇಕೆಂಬ ಉದ್ದೇಶದಿಂದ, ದೊಡ್ಡಕೃಷ್ಣರಾಜ ಒಡೆಯರ ಪತ್ನಿಯವರಾದ ದೇವಾಜಮ್ಮಣ್ಣಿಯವರಿಗೆ-ಅವರ ಜ್ಞಾತಿಯಾದ ಚಿಕ್ಕನಹಳ್ಳಿ ಚಾಮೇಅರಸಿನವರ, ಮೂರು ವರುಷ ವಯಸ್ಸಿನ ಪುತ್ರರನ್ನು ಸ್ವೀಕಾರಮಾಡಿಸಿ, ಎಂದಿನಂತೆ ರಾಜ್ಯವಿಚಾರವನ್ನು ಸರ್ವ ಸ್ವಾತಂತ್ರ್ಯದಿಂದ ತಾನೇ ನೋಡಿಕೊಳ್ಳುತ್ತಿದ್ದನು.

ದೇವಾಜಮ್ಮಣ್ಣಿಯವರು ಮೇಲೆಹೇಳಿದ ಮೂರುವರ್ಷದ ಬಾಲಕನನ್ನು ಇಮ್ಮಡಿ ಕೃಷ್ಣರಾಜ ಒಡೆಯರು ಎಂಬ ನಾಮಧೇಯದಿಂದ ದತ್ತುಮಾಡಿಕೊಂಡು, ಸಿಂಹಾಸನಕ್ಕೆ ಒಂದು ದಿಕ್ಕೆಂದು ಏರ್ಪಡಿಸಿದರಾದರೂ,

ಅದರಿಂದ ಆಡಳಿತದಲ್ಲಿ ಯಾವ ಹೆಚ್ಚು ಕಡಮೆಯೂ ನಡೆದಂತಾಗಲಿಲ್ಲ.
ಮೂರು ವರ್ಷದ ಆ ಮಗುವು ಪ್ರಬುದ್ಧವಾಗಿ ವಿದ್ಯಾಬುದ್ಧಿಗಳನ್ನು ಕಲಿತು.
ರಾಜ್ಯಾಧಿಪತ್ಯಕ್ಕೆ ಯೋಗ್ಯವಾಗುವವರೆಗೆ, ಮಹಾರಾಣಿಯವರೂ ರಾಜ್ಯ
ಸಂಬಂಧವಾದ ಸಕಲ ಕಾರ್ಯಗಳಿಗೂ, ಸರ್ವಾಧಿಕಾರಿಗಳ ಕೈ ಕಾಯದೆ,
ಅನುಮತಿಯನ್ನು ಕೇಳದೆ, ನಡೆಯಲು ಮುಂದೆ ಮಾರ್ಗವೇ ಇಲ್ಲದಂತಾ
ಯಿತು. ಆದುದರಿಂದ ನಾಮಮಾತ್ರ ರಾಜರಿರುತ್ತಿರಲು, ಸರ್ವಾಧಿಕಾರ
ವು ಮುಂದೂ ಕೆಲವುಕಾಲ ದೇವರಾಜಯ್ಯನ ಸ್ವಾಧೀನದಲ್ಲಿದ್ದೇ ನಡೆ
ಯಿತು.

ಇಮ್ಮಡಿ ಕೃಷ್ಣರಾಜ ಒಡೆಯರು ಬಾಲ್ಯಾವಸ್ಥೆಯಲ್ಲಿದ್ದ-ರಾಜ್ಯಾಧಿಪ
ತ್ಯವು ಸರ್ವಾಧಿಕಾರಿಗಳ ಮುಷ್ಟಿಯಲ್ಲಡಗಿದ್ದ-ಈ ಸಂದರ್ಭದಲ್ಲೇ, ಮೈಸೂ
ರು ದೇಶದಲ್ಲಿನ ಹಿಂದೂ ರಾಜವಂಶದವರ ಸ್ವಾತಂತ್ರ್ಯದ ಮೂಲೋ
ತ್ಪಾಟನೆಗೇ ಕುಠಾರ ಸ್ವರೂಪನಾಗಿದ್ದ ವ್ಯಕ್ತಿಯೊಬ್ಬನು ಮೈಸೂರು ರಾಜ
ಸೈನ್ಯದಲ್ಲಿ ಬಂದು ಸೇರುವ ಸಂಭವವುಂಟಾಯಿತು. ಈ ವ್ಯಕ್ತಿಯೇ ಹೈದ
ರಲ್ಲೀಖಾನನು. ಈತನು ಬಹು ಬಡತನ ಸ್ಥಿತಿಯಲ್ಲಿ ಹುಟ್ಟಿ, ತಂದೆಯು
ಮಾಡಿದ್ದ ಋಣ ಬಾಧೆಯಿಂದ ಅಗಾಧ ಕಷ್ಟನಷ್ಟಗಳಿಗೀಡಾಗಿ, ಕೊನೆಗೆ
ಧೊರೆಗಳವರ ಅಪ್ಪಣೆಯಂತೆ ಹತ್ತು ಸಾವಿರ ವರಹಗಳು ಭಂಡಾರದಿಂದ
ಕೊಡಲ್ಪಡಲು, ಆ ಉಪಕಾರಕ್ಕೆ ಪ್ರತ್ಯುಪಕಾರವಾಗಿ ಮೈಸೂರು ಸೈನ್ಯ
ದಲ್ಲಿ ಸೇವಕನಾಗಿ ಸೇರಿ, ಸ್ವಾಮಿದ್ರೋಹ ಮಾಡದೆ ನಡೆದುಕೊಳ್ಳುವೆನೆಂ
ದು ಪ್ರಮಾಣಮಾಡಿ ಕೆಲಸಮಾಡಿಕೊಂಡಿದ್ದನು.

ಅನ್ಯಾಯವೂ ದುಂದುಗಾರಿಕೆಯೂ ಕಪಟ ವೃತ್ತಿಗಳೂ ಎಷ್ಟುಕಾಲ
ದಕ್ಕುವುವು. ದಳವಾಯಿ ದೇವರಾಜಯ್ಯನು ಪ್ರಾರಂಭದಿಂದಲೂ ಮಾಡು
ತ್ತಾ ಬಂದ ಹಲವು ದುಷ್ಕೃತ್ಯಗಳು ಪ್ರತಿಫಲಗಳನ್ನು ಕೊಡುವುದಕ್ಕೆ
ಆರಂಭವಾಗಲು ಮುಂದೆ ಅವನ ಬಾಳ್ವೆಯು ಬಹು ಕಷ್ಟಕ್ಕೀಡಾಯಿತು.
ಈ ವೇಳೆಗೆ ಇಮ್ಮಡಿ ಕೃಷ್ಣರಾಜ ಒಡೆಯರು ವಿದ್ಯಾಬುದ್ಧಿಗಳನ್ನು ಕಲಿತು
ಪ್ರಬುದ್ಧರಾಗಿ ರಾಜ್ಯ ವಿಚಾರಗಳನ್ನು ಸ್ವತಃ ನೋಡಿಕೊಳ್ಳಲು ಶಕ್ತಿ ಸಾ
ಮರ್ಥ್ಯಗಳನ್ನು ಗಳಿಸಿದ್ದುದರಿಂದ ಆಗಲೂ ಹಿಂದಿನಂತೆಯೇ, ತಮ್ಮ ಮನ
ಬಂದಂತೆ ಕಾರ್ಯಭಾರಗಳನ್ನು ನಡೆಯಿಸುವುದು, ಈ ಅಧಿಕಾರಿಗಳಿಗೆ ಸಾಧ್ಯ

ವಿಲ್ಲವಾಯಿತು. ಅಲ್ಲದೆ, ಅವರು ಮಾಡುತ್ತಿದ್ದ ಸ್ವಾಮಿದ್ರೋಹವೇ ಮುಂತಾದ ವಂಚನೆಯ ವೃತ್ತಾಂತವೆಲ್ಲವೂ ದೊರೆಗಳಿಗೆ ತಿಳಿದುಹೋಯಿತು. ದೊರೆಗಳವರಿಗೆ ಅವರ ವಿಷಯದಲ್ಲಿದ್ದ ನಂಬಿಕೆ ಪ್ರೀತಿ ವಿಶ್ವಾಸಗಳು ತಪ್ಪಿ, ಅವುಗಳ ಸ್ಥಾನದಲ್ಲಿ ಬೇಸಗವೂ, ದ್ವೇಷವೂ, ಅಪನಂಬಿಕೆಯೂ ಉಂಟಾದುವು. ಹೀಗೆ ಸರ್ವಾಧಿಕಾರಿಯಾದ ದೇವರಾಜಯ್ಯನಿಗೂ ದೊರೆಗಳವರಿಗೂ ಮನಸ್ತಾಪವು ಹುಟ್ಟಿ ಮನಸ್ಸಿನಲ್ಲೇ ಸಾವಕಾಶವಾಗಿ ಬೆಳೆಯುತ್ತಿತ್ತು.

ಹಿಂದೊಂದುವೇಳೆ, ದೊರೆಗಳಾದ ಚಾಮರಾಜ ಒಡೆಯರು ತಮ್ಮ ಮಾರ್ಗಕ್ಕೆ ವಿರೋಧಿಗಳಾಗಿ ಬಂದಿದ್ದಾಗ ಈ ಅಧಿಕಾರಿಗಳು ಅವರನ್ನು ಸಿಂಹಾಸನ ಭ್ರಷ್ಟರನ್ನಾಗಿ ಮಾಡಿದ್ದರಲ್ಲವೆ! ಈಗಲೂ ಹಾಗೇಕೆಮಾಡಿ, ಈ ಕಂಟಕವನ್ನುನಿವಾರಿಸಿಕೊಳ್ಳಲಾಗದೆಂದು, ದೇವರಾಜಯ್ಯನ ತಮ್ಮನಾದ ನಂಜರಾಜಯ್ಯನು ತಮ್ಮಣ್ಣನಿಗೆ ಪ್ರೇರಿಸಿದನು. ಆದರೆ ಈ ಬಾರಿ, ಪ್ರಾಯಸಮರ್ಥರೂ, ಶೌರ್ಯ ಧೈರ್ಯ ನಿಧಿಗಳೂ ಆಗಿದ್ದ ಇಮ್ಮಡಿ ಕೃಷ್ಣರಾಜ ಒಡೆಯರ ಉಜ್ವಲ ತೇಜಸ್ಸು ಅವನ ಎದೆಯಲ್ಲಿ ನಡುಕವನ್ನು ಹುಟ್ಟಿಸಿತು. ದಳವಾಯಿಯು ತಾನು ಆ ಕೆಲಸಮಾಡಲಾರೆನೆಂದು ಹೇಳಲು, ಅಣ್ಣ ತಮ್ಮಂದಿರಿಗೇ ವಿರೋಧವುಂಟಾಯಿತು. ಒಡನೆ ದುರುಳನಾದ ಆ ನಂಜರಾಜಯ್ಯನು, ರಾಜರ ಪಕ್ಷದ ಆಪ್ತಸೇವಕರನ್ನು ವಧಿಸಿ, ರಾಜರನ್ನೂ ಕೈಸೆರೆ ಹಿಡಿಯಬೇಕೆಂಬ ದುರುದ್ದೇಶದಿಂದ ಪ್ರೇರಿತನಾಗಿ, ಅರಮನೆಯ ಎದುರಿಗೆ ನಾಲ್ಕು ಫಿರಂಗಿಗಳನ್ನು ಎತ್ತಿಕಟ್ಟಿಸಿ ಬಾಗಿಲಿಗೆ ಗುಂಡುಗಳನ್ನು ಹೊಡೆಯಿಸಲು ಪ್ರಾರಂಭಿಸಿದನು. ಈ ಸಮಾಚಾರವು ಒಳ ಮಹಲಿನಲ್ಲಿದ್ದ ಮಹಾರಾಜರಿಗೆ ಅರಿಕೆಯಾಗಲು, ಧೀರರಾದ ಅವರು ಒಡನೆ ಆಯುಧ ಹಸ್ತರಾಗಿ ಸಿಂಹಗರ್ಜನೆ ಮಾಡುತ್ತಾ ಹೊರಹೊರಟು, ನಂಜರಾಜಯ್ಯನ ಕಡೆಯ ಹಲವು ಜನಗಳನ್ನು ಸಂಹರಿಸಿ, ಕೆಲವರನ್ನು ಹೊಡೆದೋಡಿಸಿ, ಮಿಕ್ಕವರನ್ನು ಸೆರೆಹಿಡಿಸಿ ಕಿವಿ ಮೂಗುಗಳನ್ನು ಕೋಯಿಸಿ, ಹೀಗೆ ಆ ದೊಂಬಿಯನ್ನು ಅಡಗಿಸಿದರು. ಮಹಾರಾಜರ ಶೌರ್ಯ ಪ್ರತಾಪಗಳು ಹೀಗೆ ಪ್ರಕಟವಾಗಿ ತನ್ನ ಆಟವು ಅವರ ಬಳಿ ಸಾಗಲಾರದೆಂದು ತಿಳಿದ ತರುವಾಯ, ನಂಜರಾಜಯ್ಯನು ಮಾತ್ರವಲ್ಲ-ಅವನ ಅಣ್ಣನಾದ ದೇವರಾಜ

ಯ್ಯನೂ ಬೆದರಿ, ದೇಶಭ್ರಷ್ಟನಾಗಿ ಸತ್ಯಮಂಗಲಕ್ಕೆ ಹೊರಟುಹೋಗಿ ತಲೆ ಮರಸಿಕೊಂಡನು. ಹೀಗೆ ನೆಲೆಗಂಡ ಕಳ್ಳರಂತೆ, ರಾಜಬಂಧುಗಳಾಗಿ ರಾಜಧಾನಿಯಲ್ಲೇ ನೆಲೆಸಿ ಪ್ರಾರಂಭದಿಂದಲೂ ರಾಜವಂಶ ವೃಕ್ಷದ ತಾಯಿ ಬೇರುಗಳನ್ನೇ ಕತ್ತರಿಸತೊಡಗಿದ್ದ ಈ ಘಾತುಕರು, ರಾಜ್ಯಭ್ರಷ್ಟರಾಗಿ ಹೊರಟು ಹೋದುದರಿಂದ, ರಾಜ್ಯವು ನಿಷ್ಕಂಟಕವಾಯಿತು. ಆ ವೇಳೆಗೆ ದಿಂಡಿಗಲ್ಲು ಮುಂತಾದ ದಾಕ್ಷಿಣಾತ್ಯ ಪ್ರಾಂತಗಳನ್ನು ಜಯಿಸಿಕೊಂಡು ಬಂದು, ಸೈನ್ಯವನ್ನು ಬಹು ದರ್ಪದಿಂದ ಸ್ವಾಧೀನಕ್ಕೆ ತಂದುಕೊಂಡು, ಶತ್ರುರಾಜರನ್ನು ಜಯಿಸಿ ತಾನು ತಂದ ಧನ ಧಾನ್ಯಾದಿಗಳಿಂದ ರಾಜ ಭಂಡಾರವನ್ನು ತುಂಬಿ, ಬಹು ಸಮರ್ಥನೆಂದು ಹೆಸರುವಾಸಿಯಾಗಿದ್ದ ಹೈದರಲ್ಲೀಖಾನನಿಗೆ ಇಮ್ಮಡಿ ಕೃಷ್ಣರಾಜ ಒಡೆಯರು, ಬಹದ್ದೂರ್ ಎಂಬ ಬಿರುದನ್ನು ಕೊಟ್ಟು, ದೇವರಾಜಯ್ಯನಿಗಿದ್ದ ದಳವಾಯಿ ಅಧಿಕಾರವನ್ನು ಆತನಿಗೆ ವಹಿಸಿಕೊಟ್ಟು, ಖಂಡೇರಾಯನೆಂಬಾತನನ್ನು ದಿವಾನನನ್ನಾಗಿ ನಿಯಮಿಸಿ ತಾವು ಸರ್ವಕಾರ್ಯಗಳ ಮೇಲ್ವಿಚಾರಣೆಯನ್ನೂ ವಹಿಸಿಕೊಂಡು ಬಹು ಸಮರ್ಥತೆಯಿಂದ ರಾಜ್ಯಪಾಲನೆ ಮಾಡುತ್ತಿದ್ದರು.

ವಿದ್ಯಾವಿನಯ ಸಂಪನ್ನರೂ, ಶೌರ್ಯ ಧೈರ್ಯೌದಾರ್ಯ ಗುಣ ವಿಶಿಷ್ಟರೂ, ಪ್ರಭು ಮಂತ್ರೋತ್ಸಾಹ ಶಕ್ತಿಯುತರೂ, ತೇಜಸ್ವಿಗಳೂ ಆದ ಈ ಪ್ರಭುವರ್ಯರು ರಾಜ್ಯಪರಿಪಾಲನೆ ಮಾಡತೊಡಗಲು, ಸತ್ಯ ಧರ್ಮ ನ್ಯಾಯಗಳಿಗೆ ಚ್ಯುತಿಯಿಲ್ಲದೆ, ಸರ್ವ ಸಮ್ಮತವಾಗಿ ಸಾಗತೊಡಗಿತು. ಮಹಾರಾಜರು ಸತ್ಕುಲ ಪ್ರಸೂತೆಯರಾದ ಮೂವರು ಕನ್ಯೆಯರನ್ನು ವಿವಾಹವಾದರು. ಅವರಲ್ಲಿ ಮೊದಲನೆಯವರು, ಪುಟ್ಟಮ್ಮಣ್ಣಿ ಅಥವ ದೇವಾಜಮ್ಮಣ್ಣಿಯವರು. ಎರಡನೆಯವರು, ಬೇಲೂರು ದೇವಾಜಮ್ಮಣ್ಣಿಯವರು. ಮೂರನೆಯವರೇ, ನಮ್ಮ ಕಥಾನಾಯಿಕೆಯರಾದ ಲಕ್ಷ್ಮಮ್ಮಣ್ಣಿ ಅಥವ ಲಕ್ಷ್ಮ್ಮಮ್ಮಣ್ಣಿಯವರು.



ಅಧ್ಯಾಯ ೩ "ಕನ್ನಡಿ-ಕಠಾರಿ"

ಮೈಸೂರು ರಾಜವಂಶೀಕರು ಸರ್ವ ಸ್ವಾತಂತ್ರ್ಯದಿಂದ ರಾಜ್ಯ ಭಾರಮಾಡುತ್ತಿದ್ದ ಕಾಲದಲ್ಲಿ ಅವರ ಬಳಿ ಅನೇಕಮಂದಿ ಶೂರ ಸರದಾರರು ಪ್ರಸಿದ್ಧರಾಗಿದ್ದರು. ಅವರ ಸಹಾಯದಿಂದ ರಾಜರು, ಶತ್ರುರಾಜರು ತಮ್ಮ ಕಡೆಗೆ ತಿರುಗಿ ನೋಡದಂತೆ ಅರಿಭಯಂಕರರಾಗಿ ತಮ್ಮ ರಾಜ್ಯಕೋಶಗಳನ್ನು ಸುರಕ್ಷಿತವಾಗಿಟ್ಟುಕೊಂಡು ನಿಷ್ಕಂಟಕರಾಗಿದ್ದರು. ಅಷ್ಟು ಮಾತ್ರವಲ್ಲ-ಆಗಾಗ ಸುತ್ತುಮುತ್ತಿನ ರಾಜರುಗಳಮೇಲೆ ದಂಡೆತ್ತಿ ನಡೆದು, ಅವರ ರಾಜ್ಯಕೋಶಾದಿಗಳನ್ನು ಸ್ವಾಧೀನಪಡಿಸಿಕೊಂಡು, ದಿನದಿನಕ್ಕೆ ತಮ್ಮ ರಾಜ್ಯದ ಮೇರೆಯನ್ನು ವಿಸ್ತರಿಸಿಕೊಳ್ಳುತ್ತಲೂ ಇದ್ದುದುಂಟು. ಮೇಲೆ ಹೇಳಿದಂತೆ ಚಾಮರಾಜ ಒಡೆಯರು ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ ಮೈಸೂರು ಸೈನ್ಯದಲ್ಲಿ ಕತ್ತಿಗೋಪಾಲರಾಜ ಅರಸರೆಂಬ ಸರದಾರರೊಬ್ಬರು ಸುಪ್ರಸಿದ್ಧರಾಗಿದ್ದರು. ಅವರು ಮಹಾಶೂರರಾಗಿ, ತಮ್ಮ ಸೈನ್ಯವನ್ನು ಅತ್ಯಂತ ಉತ್ತಮ ಸ್ಥಿತಿಯಲ್ಲಿಟ್ಟುಕೊಂಡು, ಅಪ್ರತಿಮ ಯೋದ್ಧರೆನ್ನಿಸಿಕೊಂಡು ಶತ್ರು ಭೀಕರರಾಗಿದ್ದರು. ಅವರು, ಅನೇಕ ಯುದ್ಧಗಳಲ್ಲಿ ಹೋರಾಡಿದ್ದರಾದರೂ, ತಿರುಚನಾಪಳ್ಳಿಯ ನವಾಬನಾಗಿದ್ದ ಮುಹಮ್ಮದಲ್ಲಿಯಮೇಲೆ ದಂಡೆತ್ತಿಹೋಗಿ, ಅಲ್ಲಿ ಅವರು ತೋರಿಸಿದ ಅಸಮಸಾಹಸವು ಚಿರಪ್ರಸಿದ್ಧವಾದುದಾಗಿದೆ. ಏಕನಿಷ್ಠೆಯಿಂದ ಸ್ವಾಮಿ ಸೇವಕರಾಗಿದ್ದ ಆ ವೀರರ ಧರ್ಮಪತ್ನಿಯಲ್ಲಿ ಕ್ರಿ. ಶ. ೧೭೪೨ನೆಯ ಸಂವತ್ಸರದಲ್ಲಿ ಒಂದು ಕನ್ಯಾರತ್ನವು ಉದಯಿಸಿತು. ಮಾನಸ ಸರೋವರದಲ್ಲಿ ಹುಟ್ಟಿದ ಕಮಲಪುಷ್ಪವು ದಿನದಿನಕ್ಕೆ ಹೆಚ್ಚು ಹೆಚ್ಚಾಗಿ ವಿಕಸಿತವಾಗಿ, ಕಳಕಳನೆಂದು ನೇತ್ರಾನಂದಕರವಾಗಿ ಬೆಳಗುವಂತೆ, ಗೋಪಾಲರಾಜ ಅರಸರ ಆ ಧರ್ಮಪತ್ನಿಯ ಗರ್ಭಸುಧಾಂಬುಧಿಯಲ್ಲಿ ಜನಿಸಿದ ಈ ಕನ್ಯಾರತ್ನವೂ ದಿನ ದಿನಕ್ಕೆ, ಗಳಿಗೆ ಗಳಿಗೆಗೆ, ಕ್ಷಣ ಕ್ಷಣಕ್ಕೆ ಬೆಳೆಯುತ್ತಾ ಮಾತಾಪಿತೃಗಳಿಗೂ ಬಂಧು ಬಾಂಧವರಿಗೂ ನೆರೆಹೊರೆಯವರಿಗೂ ತನ್ನ ಬಾಲ ಲೀಲೆಗಳಿಂದ ಪರಮಾನಂದವನ್ನುಂಟುಮಾಡುತ್ತಾ, ಅಭಿವೃದ್ಧಿಯಾಗುತ್ತಿದ್ದಿತು. ಶುಕ್ಲಪಕ್ಷದ ಚಂದ್ರಕಾಂತಿಯಂತೆ ದಿನದಿನಕ್ಕೂ ಕಳೆಯೇರಿ ಬೆಳೆಯುತ್ತಿದ್ದ

ಆ ತಮ್ಮ ಮುದ್ದು ಕುವರಿಯನ್ನು, ವಿವಿಧ ವಸ್ತ್ರಾಭರಣಗಳಿಂದ ಸಿಂಗರಿಸಿ ಆ ದಂಪತಿಗಳು ಸಂತೋಷ ಸಾಗರದಲ್ಲಿ ಮುಳುಗಿರುತ್ತಿದ್ದರು. ಸರ್ವಾಂಗ ಸುಂದರಳಾಗಿದ್ದ ಆ ಕನ್ಯೆಯಾದರೂ ತನಗಿಟ್ಟಿದ್ದ ಲಕ್ಷ್ಮಮ್ಮಣ್ಣಿ ಎಂಬ ನಾಮಧೇಯಕ್ಕೆ ಶತಾಂಶದಿಂದ ಅನ್ವರ್ಥತೆಯನ್ನುಂಟುಮಾಡಿದ್ದಳು.

ಸತ್ಕುಲ ಪ್ರಸೂತರೂ, ಸುಗುಣಯುತರೂ ಆದ ದಾದಿಯರ ಲಾಲನೆ ಪಾಲನೆಗಳಲ್ಲಿ ಬಾಲ್ಯವನ್ನು ಕಳೆದು, ಬಾಲಿಕಾ ಮಣಿಯಾದ ಲಕ್ಷ್ಮಮ್ಮಣ್ಣಿಯು ಸಂಗೀತ ಸಾಹಿತ್ಯ ಚಿತ್ರಕಲೆ ಕಸೂತಿ ರಂಗವಲ್ಲಿ ಮುಂತಾದ ಸಮಸ್ತ ಕುಶಲ ಕಲೆಗಳಲ್ಲೂ ಪ್ರೌಢಿಮೆಯನ್ನು ಸಂಪಾದಿಸಿದಳು. ಮಾತ್ರವಲ್ಲ, ನಾರೀಕುಲಕ್ಕೆ ಭೂಷಣ ಪ್ರದಗಳಾದ ನಯವಿನಯಾದಿಗಳೂ ಶೃಂಗಾರ ಗಾಂಭೀರ್ಯಾದಿಗಳೂ ಆಕೆಯಲ್ಲಿ ಮನೆಮಾಡಿಕೊಂಡಿದ್ದುವು. ದಯೆ ಮಮತೆ ಮೃದು ನುಡಿಗಳು ಆಕೆಯಲ್ಲೇ ಜನ್ಮವೆತ್ತಿದ್ದುವೆನ್ನಬಹುದು. ಆ ಕನ್ಯಕಾಮಣಿಯು ಒಂದು ದಿನಕ್ಕೆ ಕೋಪಿಸಿಕೊಂಡವಳಲ್ಲ, ಒಂದು ದಿನಕ್ಕೆ ದಾದಿಯರನ್ನಾಗಲೀ ಸೇವಕರನ್ನಾಗಲೀ ಗದರಿಸಿಕೊಂಡವಳಲ್ಲ. ಒಂದು ದಿನಕ್ಕಾದರೂ, ಯಾವ ಪ್ರಾಣಿಯನ್ನೂ ಹಿಂಸಿಸಿ, ಬಾಧಿಸಿ, ನೋಯಿಸಿ ಅರಿತವಳಲ್ಲ. ಬಡವರು ಭಿಕ್ಷುಕರು ಅಂಗವಿಹೀನರು ಮುಂತಾದವರ ವಿಷಯದಲ್ಲಿ ಆ ಮೃದು ಹೃದಯಳು ಎದೆಕರಗಿ ತನಗೆಂದು ಏನನ್ನೂ ಇರಿಸಿಕೊಳ್ಳದೆ ಅವರಿಗಿತ್ತು ಅವರ ಮನಸ್ಸನ್ನು ಸಂತೋಷಪಡಿಸುತ್ತಿದ್ದುದುಂಟು. ಆಕೆಯ ಸೇವೆಗೆಂದರೆ, ಅರಮನೆಯ ದಾದಿಯರು ನಾನು ತಾನೆಂದು ಮುಂದೆ ಬಂದು, ಹೇಳಿದ ಕೆಲಸವನ್ನು ಶಿರಸಾವಹಿಸಿ ಮಾಡುವರು. ಅವರ ಮಂದಹಾಸಯುಕ್ತ ಮುಖಕಮಲವು ಸರ್ವರ ಮನಸ್ಸನ್ನೂ ಸ್ವಾಧೀನಪಡಿಸಿಕೊಂಡು ಅವರ ಹೃದಯವನ್ನು ಗೆದ್ದುಕೊಳ್ಳುವಲ್ಲಿ ಎಂದೂ ಅಪಜಯ ಹೊಂದಿದುದಿಲ್ಲ.

ಹೀಗೆ ಸದ್ಗುಣಮಣಿ ಭೂಷಣಗಳಿಂದ ಅಲಂಕೃತಳಾಗಿದ್ದ ತಮ್ಮ ಮಗಳಾದ ಕನ್ಯಾಶಿರೋಮಣಿ ಲಕ್ಷ್ಮಮ್ಮಣ್ಣಿಯು ವಿವಾಹ ಯೋಗ್ಯ ವಯಸ್ಕಳಾಗಲು, ಆಕೆಗೆ ಅನುರೂಪ ವರನು ಯಾರೋ, ಆತನನ್ನು ಎಲ್ಲಿ ಹುಡುಕುವುದು ಎಂದು ಮುಂತಾಗಿ ಗೋಪಾಲರಾಜ ಅರಸರು ಕೆಲಕಾಲ ಮಹಾಚಿಂತಾಕ್ರಾಂತರಾಗಿದ್ದರು. ಆದರೆ, ಈ ವಿಚಾರದಲ್ಲಿ ಅವರು ವಿಶೇಷ ಪರಿ

ಶ್ರಮ ಮಾಡದೆಯೇ ಅತ್ಯುತ್ತಮ ಸಂಬಂಧವೇ ದೊರೆತುದು ಅವರಿಗೆ ಪರಮ ಹರ್ಷವನ್ನುಂಟುಮಾಡಿತು. ಆಗ ಮೈಸೂರು ರಾಜಸಿಂಹಾಸನಕ್ಕೆ ಅಧಿಪತಿಗಳಾಗಿದ್ದ ಇಮ್ಮಡಿ ಕೃಷ್ಣರಾಜ ಒಡೆಯರವರು, ಸರದಾರ ಗೋಪಾಲರಾಜೇ ಅರಸರ ಮಗಳ ದಿವ್ಯರೂಪ ವೈಭವವನ್ನು ಕರ್ಣಾಕರ್ಣಿಕೆಯಾಗಿ ಕೇಳಿ, ಆ ಸ್ತ್ರೀ ಶಿರೋಮಣಿಗೆ ತಮ್ಮ ಹೃದಯಪೀಠದಲ್ಲಿ ಸ್ಥಾನ ಕೊಡಬೇಕೆಂದು ಸಂಕಲ್ಪಿಸಿದರು. ಮಹಾರಾಜರ ಮನಸ್ಸಿನಲ್ಲಿ ಹುಟ್ಟಿದ ಈ ಅಭಿಪ್ರಾಯವು, ಯೋಗ್ಯ ಬಂಧುಜನರ ಮೂಲಕ ಸರದಾರ ಗೋಪಾಲರಾಜ ಅರಸರಿಗೆ ಅರಿಕೆಯಾಗಲಾಗಿ, ಅವರೂ ಅವರ ಪತ್ನಿಯೂ ಮಹದಾನಂದ ಪರವಶರಾಗಿ, ಆ ಸರ್ವೋತ್ತಮ ಸಂಬಂಧಕ್ಕೆ ಒಡನೆ ತಮ್ಮ ಸಮ್ಮತಿಯನ್ನಿತ್ತರು. ಸರಿ, ಮುಂದೆ ಹೇಳಬೇಕಾದುದೇನು! ಉಭಯ ಪಕ್ಷಗಳವರಲ್ಲೂ ವಿವಾಹ ಸಂಬಂಧದ ಸಾಮಗ್ರಿಗಳು ಸಿದ್ಧವಾಗ ತೊಡಗಿದುವು. ರಾಜ್ಯಾಧಿಪತಿಯಾದ ತಮ್ಮ ಅಳಿಯನಿಗೆ ಯೋಗ್ಯ ಸತ್ಕಾರ ಪೂರ್ವಕವಾಗಿ ಕನ್ಯಾದಾನ ಮಾಡಬೇಕೆಂದು ಗೋಪಾಲರಾಜ ಅರಸರು ತಮ್ಮ ಶಕ್ತಿಮೀರಿ ಪ್ರಯತ್ನಮಾಡತೊಡಗಿದರು. ಇನ್ನು ಸ್ವಯಂ ರಾಜರೇ ಆದ ಇಮ್ಮಡಿ ಕೃಷ್ಣರಾಜ ಒಡೆಯರು, ಈ ಮೊದಲೇ ವಿವಾಹವಾಗಿದ್ದ ಇಬ್ಬರು ಪತ್ನಿಯರಮೇಲೆ ಮೂರನೆಯದಾಗಿ, ಮನಮೆಚ್ಚಿ ಮಾಡಿಕೊಳ್ಳಬೇಕೆನಿಸಿದ್ದ ಈ ವಿವಾಹಕ್ಕಾಗಿ ಎಷ್ಟು ಸಂಭ್ರಮದಿಂದ ಸಿದ್ಧತೆ ಮಾಡಿದ್ದರೆಂದು ಹೇಳಬೇಕಾದುದೇನು? ಶಾಲಿವಾಹನ ಶಕದ ೧೬೮೨ನೆಯ ಪ್ರಮಾಥಿ ಸಂವತ್ಸರದ ಮಾಘಮಾಸದ ಒಂದಾನೊಂದು ಶುಭ ದಿನದ ಶುಭ ಮುಹೂರ್ತದಲ್ಲಿ ವಿವಾಹ ಮುಹೂರ್ತವು ನಿಶ್ಚಯಮಾಡಲ್ಪಟ್ಟಿತು. ದೇಶದ ಅನೇಕಮಂದಿ ಮುಖ್ಯಾಧಿಕಾರಿಗಳೂ, ಇತರ ಸಂಸ್ಥಾನಗಳ ಹಲವುಮಂದಿ ಮಿತ್ರರಾಜರೂ, ದೇಶ ದೇಶಾಂತರಗಳಿಂದ ಭೂಸುರವರ್ಗವೂ, ಪ್ರಜಾಮುಖ್ಯರೂ, ಅಲ್ಲದೆ ಇತರ ಅನೇಕಾನೇಕಮಂದಿ ಪ್ರಜಾಸಮೂಹವೂ ಬಂದು ನೆರೆದರು. ಭವ್ಯವಾದ ಕಲ್ಯಾಣ ಮಂಟಪವು ಸಿದ್ಧವಾಗಿ, ಅಲ್ಲಿ ನವರತ್ನಮಣಿ ಖಚಿತವಾದ ತೋರಣ ಮೇಲ್ಕಟ್ಟುಗಳಿಂದ ಶೃಂಗಾರವಾಗಿದ್ದ ಹಸೆ ಜಗುಲಿಯಲ್ಲಿ ಲಕ್ಷ್ಮೀನಾರಾಯಣರಂತೆಯೂ, ರತಿಮನ್ಮಥರಂತೆಯೂ ಒಪ್ಪುತ್ತಿದ್ದ ನೂತನ ವಧೂವರರು ನೆರೆದ ಸಹಸ್ರಾರುಮಂದಿ ಪ್ರೇಕ್ಷಕರ ಕಣ್ಣುಗಳಿಗೆ

ಹಬ್ಬವನ್ನುಂಟುಮಾಡುತ್ತ ವಿರಾಜಿಸಿದರು. ವಿಧ್ಯುಕ್ತವಾಗಿ ನಡೆಯಬೇಕಾದ ವಿವಾಹಾಂಗವಾದ ಸಕಲ ಶೋಭನ ಕರ್ಮಗಳೂ ಸಾಂಗವಾಗಿ ನಡೆದುವು. ದಿಕ್ತಟಗಳು ಬಿರಿದುಹೋಗುವಂತೆ ಭೇರೀ ಮೃದಂಗಾದಿ ವಾದ್ಯಗಳೂ ಓಲಗ ತಾಳಮೇಳಗಳೂ ಬಾಜಿಸಲ್ಪಟ್ಟುವು. ಬ್ರಾಹ್ಮಣ ಸುವಾಸಿನಿಯರಿಗೆ ಬಹುವಿಧ ದಕ್ಷಿಣೆ ದಾನಗಳೂ, ನೆರೆದ ಸಮಸ್ತರಿಗೂ ಗಂಧ ಪುಷ್ಪ ತಾಂಬೂಲಾದಿಗಳೂ ಅಮಿತವಾಗಿ ಹಂಚಲ್ಪಟ್ಟುವು. ಚತುರ್ವರ್ಣಗಳವರಿಗೂ, ಷಡ್ರುಚಿ ಪೂರ್ಣವಾದ ದಿವ್ಯ ಮೃಷ್ಟಾನ್ನ ಭೋಜನವು ದೊರೆತು, ತನ್ಮೂಲಕ ಸಕಲರೂ ಪರಮಾನಂದಪಟ್ಟರು. ವಧುವಿಗೆ ವರನೂ ವರನಿಗೆ ವಧುವೂ ಅನುರೂಪರಾಗಿ-'ಇಂತಹ ಅನುಕೂಲ-ಅನುರೂಪ ದಾಂಪತ್ಯವು ಜನ್ಮಾಂತರೀಯ ಸುಕೃತ ಫಲದಿಂದ ಪ್ರಾಪ್ತವಾಗುವುದು. ಈ ನೂತನ ರಾಜದಂಪತಿಗಳು ನೂರುಕಾಲ ಸಂಸಾರ ಸುಖಭೋಗಗಳನ್ನನುಭವಿಸಿಕೊಂಡು ಪ್ರಜಾಗರ್ವಕ್ಕೆ ಮಾತಾಪಿತೃಗಳಾಗಿ ಮಹೋನ್ನತರಾಗಿರಲಿ'' ಎಂದು ನೆರೆದ ಸಮಸ್ತರೂ ಉಚ್ಚಸ್ವರದಿಂದ ಹರಸಿ ಆಶೀರ್ವದಿಸಿದರು. ಈ ಕಲ್ಯಾಣ ಸಮಯದಲ್ಲಿ ವಿಚಿತ್ರತರವಾದ ಒಂದು ಹಸೆ ಜಗುಲಿಯನ್ನು ನಿರ್ಮಾಣಮಾಡಿ ದೊರೆಗಳವರ ಸನ್ನಿಧಿಗೆ ತಂದು ಒಪ್ಪಿಸಿದ ಚನ್ನನೆಂಬೊಬ್ಬ ಕೆಲಸಗಾರನ ಜಾಣ್ಮೆಗೆ ಮೆಚ್ಚಿ ಉದಾರ ಹೃದಯರಾದ ಶ್ರೀ ಇಮ್ಮಡಿ ಕೃಷ್ಣರಾಜ ಒಡೆಯರು, ಅವನಿಗೆ ಅರುವತ್ತು ವರಹಗಳ ವರಮಾನವಿರುವ ಒಂದು ಜಮೀನನ್ನು ಉಂಬಳಿ ಹಾಕಿಕೊಡುವಂತೆ ಆಜ್ಞೆ ಮಾಡಿದರಂತೆ!

ತರುವಾಯ ದೊರೆಗಳು ಸರ್ವಾಧಿಕಾರಿಯಾದ ಹೈದರಲ್ಲಿಖಾನನ ಸಹಾಯದಿಂದ ರಾಜ್ಯಭಾರ ಮಾಡುತ್ತ, ದೇಶವನ್ನು ಸರ್ವವಿಧದಿಂದಲೂ ಉತ್ತಮ ಸ್ಥಿತಿಗೆ ತರುವುದರಲ್ಲೇ ಅಹರ್ನಿಶಿ ನಿರತರಾಗಿದ್ದರು. ಹೈದರಲ್ಲಿ ಯಾದರೂ, ದ್ರೋಹ ಚಿಂತನೆಯಿಲ್ಲದೆ, ಪ್ರತಿಯೊಂದು ಕಾರ್ಯವನ್ನು ನೆರವೇರಿಸುವ ವಿಷಯದಲ್ಲೂ ಮಹಾರಾಜರ ಅಪ್ಪಣೆಯನ್ನು ಕೇಳಿ ಅದರಂತೆ ನಡೆಯುತ್ತಾ, ಅಚ್ಚುಮೆಚ್ಚಾಗಿದ್ದನು. ಸರ್ವಾಧಿಕಾರವನ್ನು ವಹಿಸಿಕೊಂಡು ಹೈದರಲ್ಲಿಯು ಸೈನ್ಯವನ್ನು ಸ್ವಾಧೀನಕ್ಕೆ ತಂದುಕೊಂಡು, ಆಗಾಗ ದಂಡೆತ್ತಿ ಬರುತ್ತಿದ್ದ ಮರಾಟೆಯವರು ಮಹಮ್ಮದೀಯರಾಜರು ಮುಂತಾದವರ ಹಾವಳಿಗಳಿಗೆ ಎದುರಾಗಿ ಧೈರ್ಯದಿಂದ ದೇಶವನ್ನು ಕಾಪಾಡಿಕೊಂ

ಡು ಬಂದ ಸಾಹಸಕ್ಕೆ ದೊರೆಗಳವರು ಪರಮ ಸುಪ್ರೀತರಾಗಿ ಅತನಿಗೆ ಸಕಲ ಸರದಾರರೂ ಪ್ರಜೆ ಪರಿವಾರಗಳವರೂ ನೆರೆದಿದ್ದ ಸಭೆಯಲ್ಲಿ 'ನವಾಬ ಹೈದರಲ್ಲೀಖಾನ್ ಬಹದ್ದೂರ್' ಎಂಬ ಬಿರುದನ್ನು ಕೊಟ್ಟು ಗೌರವಿಸಿದರು.

ಹೀಗೆ ಮಹಾರಾಜರ ಸಂಪೂರ್ಣ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾದ ಹೈದರಲ್ಲೀಖಾನನು, ಶ್ರೀರಂಗಪಟ್ಟಣವೇ ಸೈನ್ಯದ ಠಾಣ್ಯವಾಗಿದ್ದುದರಿಂದ ಅಲ್ಲೇ ನೆಲೆಸಿ, ಆ ಪಟ್ಟಣದ ಕೋಟೆಯನ್ನು ವಿಸ್ತಾರಗೊಳಿಸಿ ಬಂದೋಬಸ್ತಾಗಿ ಕಟ್ಟಿಸಿ, ತರುವಾಯ ಸೋದೆ, ಸವಣೂರು, ಘಟ್ಟದ ಕೆಳಗಿನ ಪ್ರಾಂತಗಳು, ಕಲ್ಲೀಕೋಟೆ ಮುಂತಾದ ಹಲವು ಪ್ರಾಂತಗಳನ್ನು ಜಯಿಸಿ ಸ್ವಾಧೀನಗೊಂಡುದಲ್ಲದೆ, ಒಳನಾಡಿನ ಅನೇಕ ಪಾಳೆಯಗಾರರನ್ನೂ ಗೆದ್ದು ದೊರೆಗಳವರ ದೇಶವನ್ನು ಹಲವು ವಿಧಗಳಿಂದ ಅಭಿವೃದ್ಧಿಗೊಳಿಸಿದನು.

ನವಾಬನು ಕಲ್ಲೀಕೋಟೆಯಮೇಲೆ ದಂಡೆತ್ತಿ ನಡೆದಿದ್ದಾಗ್ಗೆ ಎಂದರೆ ಕ್ರಿ. ಶ. ೧೭೬೬ನೆಯ ಸಂವತ್ಸರದಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರು ದಿವಂಗತರಾದರು. ಈ ಸಮಾಚಾರವು ತಿಳಿದೊಡನೆಯೇ ನವಾಬನು, ಶ್ರೀರಂಗಪಟ್ಟಣದ ಕಿಲ್ಲೇದಾರನಾಗಿದ್ದ ಮೊಖದುಂ ಸಾಬಿಗೆ,-"ಒಡನೆ ರಾಜಧಾನಿಗೆ ಹೋಗಿ ಮಹಾಮಾತೃಶ್ರೀಯವರಿಗೆ ತನ್ನ ಪರವಾಗಿ ಸಮಾಧಾನೋಕ್ತಿಗಳನ್ನು ಹೇಳುವುದಲ್ಲದೆ, ಅರಮನೆಯ ಶಾಸ್ತ್ರ ಸಂಪ್ರದಾಯವನ್ನು ಅನುಸರಿಸಿ, ದೊರೆಗಳವರಿಗೆ ಪರಲೋಕ ಕ್ರಿಯೆಗಳನ್ನೆಲ್ಲ ನಡೆಸಿ ತರುವಾಯ, ಮಹಾಮಾತೃಶ್ರೀ ಚೆಲುವಾಜಮ್ಮಣ್ಣಿಯವರ ಅಪ್ಪಣೆಯ ಮೇರೆಗೆ ಚಿಕ್ಕ ದೊರೆಗಳವರಿಗೆ ಪಟ್ಟಾಭಿಷೇಕ ಮಾಡಿಸುವವನಾಗು" ಎಂದು ಬರೆಸಿ ಕಳುಹಿಸಿದನು. ಎಲ್ಲಾ ವಿಚಾರಗಳೂ ನವಾಬನು ಅಪೇಕ್ಷಿಸಿದ್ದಂತೆಯೇ ನಡೆದು, ರಾಜಪುತ್ರರಾದ ನಂಜರಾಜ ಒಡೆಯರಿಗೆ, ಪಟ್ಟಾಭಿಷೇಕ ಮಹೋತ್ಸವವೂ ವಿಜೃಂಭಣೆಯಿಂದ ನಡೆಯಿತು. ಈ ನಂಜರಾಜ ಒಡೆಯರು, ಕೇವಲ ಬಾಲ್ಯದಲ್ಲೇ ಎಂದರೆ ಇನ್ನೂ ನಾಲ್ಕನೆಯ ಪ್ರಾಯದಲ್ಲೇ ಪಟ್ಟಾಭಿಷಿಕ್ತರಾಗಿ, ಮುಂದೆ ಕೇವಲ ನಾಲ್ಕುವರ್ಷ ಮಾತ್ರವೇ ಜೀವಿಸಿದ್ದು, ಕ್ರಿ. ಶ. ೧೭೭೦ನೆಯ ಸಂವತ್ಸರದಲ್ಲೇ ಕಾಲಾಧೀನರಾದರು. ಇವರ ತರುವಾಯ, ಬೆಟ್ಟದ ಚಾಮರಾಜ ಒಡೆಯರೆಂಬುವರಿಗೆ, ಮಾತೃಶ್ರೀ ಲಕ್ಷ್ಮಮ್ಮಣ್ಣಿಯವರ ಅಪ್ಪಣೆಯ ಮೇರೆಗೆ ಹೈದರಲ್ಲೀಖಾನನು ಪಟ್ಟಾಭಿಷೇಕಮಾ

ಡಿಸಿ ಎಂದಿನಂತೆ ಸರ್ವಾಧಿಕಾರವನ್ನು ನೋಡುತ್ತಿದ್ದನು. ಪಟ್ಟವಾಗುವಾಗ್ಗೆ ಇವರಿಗೂ ಕೇವಲ ಹತ್ತು ವರ್ಷ ಮಾತ್ರವೇ ವಯಸ್ಸು. ಇವರು ಸಹ ತರುವಾಯ ಆರು ವರ್ಷಕಾಲ ಮಾತ್ರ ಜೀವಿಸಿ ಕ್ರಿ. ಶ. ೧೭೭೬ನೆಯ ಸಂವತ್ಸರದಲ್ಲಿ ಕಾಲಧರ್ಮವನ್ನು ಹೊಂದಿದರು. ಹೀಗೆ ಈ ಇಬ್ಬರೂ ವಯಸ್ಸಿಗೆ ಬಾರದೆಯೂ, ಪತ್ನೀ ಪುತ್ರಾದಿಗಳಿಲ್ಲದೆಯೂ ಮೃತಪಟ್ಟುದರಿಂದ ಈ ದೀರ್ಘಕಾಲದಲ್ಲಿ ನವಾಬ ಹೈದರಲ್ಲೀಖಾನನ ಆಧಿಪತ್ಯವು ಅವ್ಯಾಹತವಾಗಿ ನಡೆದುಬಂದು ದಿನದಿನಕ್ಕೆ ಆತನು ಬಲಗೊಳ್ಳಸಾಗಿದನು.

ರಾಜವಂಶ ಸಂಜನಿತರಾದ ನಂಜರಾಜ ಒಡೆಯರೂ ಬೆಟ್ಟದ ಚಾಮರಾಜ ಒಡೆಯರೂ ಮೇಲ್ಕಂಡಂತೆ ಅಕಾಲದಲ್ಲಿ ಮರಣಹೊಂದಿದುದರಿಂದ ರಾಜಸಿಂಹಾಸನವು ಪುನಃ ಬರಿದಾಯಿತು. ಈ ಪರಿಸ್ಥಿತಿಯು ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರನ್ನು ವಿಶೇಷ ದುಃಖಕ್ಕೆ ಈಡುಮಾಡಿತು. ತಮಗೆ ಸಂತಾನವಿಲ್ಲ. ರಾಜ್ಯದಲ್ಲಿ ದಿನೇ ದಿನೇ ಮುಸಲ್ಮಾನರ ಪ್ರಾಬಲ್ಯವು ಅಳತೆಗೆಟ್ಟು ಬೆಳೆಯುತ್ತಿದೆ. ಆರ್ಷೇಯ ರಾಜವಂಶವನ್ನು ನಾಮಮಾತ್ರವಾಗಿಟ್ಟು, ಸಕಲ ಕಾರ್ಯಭಾರಗಳನ್ನೂ ಅಧಿಕಾರಿಗಳೇ ನಿರಂಕುಶವಾಗಿ ನಡೆಯಿಸುತ್ತಿದ್ದಾರೆ. ಮುಂದೆ ಕೆಲವು ದಿನಗಳಲ್ಲೇ ಮೈಸೂರು ರಾಜವಂಶವೇ ನಾಮಾವಶೇಷವಾಗುವುದೋ ಎಂಬ ದುಸ್ಥಿತಿಯು ತೋರುತ್ತಿದೆ. ಈ ಪರಿಸ್ಥಿತಿಯನ್ನು ದೀರ್ಘಾಲೋಚನಾಪರರೂ ಸೂಕ್ಷ್ಮಮತಿಗಳೂ ಆದ ಲಕ್ಷ್ಮಮ್ಮಣ್ಣಿಯವರು ಸಾವಧಾನವಾಗಿ ಯೋಚಿಸಿ, ಇದಕ್ಕೆ ಈಗಲೇ ಪ್ರತೀಕಾರವನ್ನು ಯೋಚಿಸದಿದ್ದರೆ ಪ್ರಬಲತಮನಾದ ಹೈದರಾಲಿಯ ಸಾಹಸ ಪರಾಕ್ರಮಗಳ ಫಲವಾಗಿ ರಾಜವಂಶವು ನಿಸ್ಸಂಶಯವಾಗಿ ನಿರ್ನಾಮವಾಗದಿರದೆಂದು ಯೋಚಿಸಿದರು. ಔರಸ ಸಂತಾನವಿಹೀನವಾದ ರಾಜವಂಶಕ್ಕೆ ದತ್ತ ಸ್ವೀಕಾರದಿಂದಲಾದರೂ ಒಂದು ದಿಕ್ಕನ್ನು ಕಲ್ಪಿಸಬೇಕೆಂದು ಚಿಂತಿಸಿದರು. ತಮ್ಮ ತಂಗಿಯ ಮಗ ಕಳಲೆಯ ನರಸರಾಜಯ್ಯನನ್ನಾಗಲೀ, ತಮ್ಮ ಸವತಿಯ ಮಗಳ ಮಗ ತಗಡೂರಿನ ಸಿದ್ಧರಾಜಯ್ಯನನ್ನಾಗಲೀ, ಸ್ವೀಕಾರಮಾಡಿಕೊಳ್ಳಬೇಕೆಂದು ಅವರ ಮನಸ್ಸಿಗೆ ತೋರಿತು. ಆದರೆ ಕೇವಲ ಗೃಹಕೃತ್ಯಕ್ಕೆ ಸಂಬಂಧಪಟ್ಟ ಈ ಕಾರ್ಯವನ್ನಾದರೂ ಅವರು ಸ್ವತಂತ್ರಿಸಿ ಮಾಡುವಂತಿರಲಿಲ್ಲ. ಸರ್ವಾಧಿಕಾರಿಯಾದ ನವಾಬ್ ಹೈದರಾಲಿ

ಯ ಅನುಮತಿಯಿಲ್ಲದೆ, ಕೇವಲ ತೃಣಮಾತ್ರ ಕಾರ್ಯವೂ ನಡೆಯುವಂತಿರಲಿಲ್ಲವಾಗಿ, ತಮ್ಮ ಈ ಉದ್ದೇಶವನ್ನು ಮಹಾರಾಣಿಯವರು ಆತನಿಗೆ ತಿಳಿಯಪಡಿಸಿದರು. ಆ ಸಂಗತಿಯನ್ನು ಕೇಳಿದ ಆತನು ಹೇಳಿದ ಮಾತುಗಳು, ಮನನ ಯೋಗ್ಯವಾಗಿವೆ. *'ತಾಯೇ, ಸರ್ವೋತ್ತಮವಾದ ತಮ್ಮ ವಂಶವು ಯೋಗ್ಯರಾದ ಪುತ್ರರಿಂದ ಪ್ರಕಾಶ ಪಡೆಯಬೇಕೇ ಹೊರತು ಬೇರೆಯಲ್ಲ. ತಮ್ಮ ವಂಶದವರು ಆಸೇತು ಹಿಮಾಚಲವಾಗಿ ಪ್ರಸಿದ್ಧರಾಗಿಯೂ ಮಹಾ ಪರಾಕ್ರಮಶಾಲಿಯಾಗಿಯೂ, ಮಹಾ ದಾತೃಗಳಾಗಿಯೂ, ಧರ್ಮದಲ್ಲಿಯೇ ಆಸಕ್ತರಾಗಿಯೂ, ಇದ್ದುದಲ್ಲದೆ ಸೌಂದರ್ಯಾದಿ ಗುಣಗಳಿಂದಲೂ ಯುಕ್ತರಾಗಿ ಇದ್ದರಾದ ಕಾರಣ ತಾವು ಅವೇ ಸದ್ಗುಣಗಳುಳ್ಳ ಪುತ್ರರನ್ನು ಪರೀಕ್ಷಿಸಿ ಸ್ವೀಕಾರಮಾಡಿಕೊಂಡು ಪಟ್ಟವನ್ನು ಕಟ್ಟಬೇಕು. ಈಗ ತಾವು ಸ್ವೀಕಾರಮಾಡಿಕೊಳ್ಳಬೇಕೆಂದು ನಿಶ್ಚಯ ಮಾಡಿಕೊಂಡಿರುವ ಪುತ್ರರುಗಳಲ್ಲಿ ಒಬ್ಬರು ವಕ್ರವಾದ ಕುಂಟುಕಾಲುಳ್ಳವರಾಗಿಯೂ ಮತ್ತೊಬ್ಬರು ಶ್ವೇತಕುಷ್ಠ ರೋಗವುಳ್ಳವರಾಗಿಯೂ, ಮಂಕಾದ ಬುದ್ಧಿಯುಳ್ಳವರಾಗಿಯೂ ಇರುವರು. ಆದಕಾರಣ ಇವರಿಬ್ಬರನ್ನೂ ಬಿಟ್ಟು ಇವರಿಗಿಂತ ಸೌಂದರ್ಯಾದ್ಯನೇಕ ಗುಣಗಳುಳ್ಳ ಬಾಲಕರುಗಳನ್ನು ಕರೆಸಿ, ಅವರುಗಳ ಪರೀಕ್ಷೆಯನ್ನು ಮಾಡುವ ಕಾಲದಲ್ಲಿ, ಈ ಸಂಸ್ಥಾನಕ್ಕೆ ಮುಖ್ಯಾಭಿಮಾನಿಯಾದ ಶ್ರೀ ಚಾಮುಂಡೇಶ್ವರಿ ಅಮ್ಮನವರು ಪೂರ್ವಪುಣ್ಯ ಪ್ರಭಾವದಿಂದ ಯಾರಲ್ಲಿ ಕಟಾಕ್ಷವನ್ನಿಡುವರೋ ಅವರೇ ರಾಜ್ಯಪದವಿಗೆ ಯೋಗ್ಯರಾಗಿರುವರು. ಅವರ ಬುದ್ಧಿಯನ್ನು ಪರೀಕ್ಷಿಮಾಡಿ, ಅವರನ್ನು ಸ್ವೀಕಾರಮಾಡಿಕೊಂಡು ಪಟ್ಟಕಟ್ಟಬೇಕು" ಎಂದು ಬಿನ್ನವಿಸಿದನು. ಹೈದರಲ್ಲಿಯು, ಯುಕ್ತಿಯುಕ್ತವಾದ ಈ ಮಾತುಗಳಿಗೆ ವಿರೋಧ ಹೇಳುವುದು ಸಾಧ್ಯವಿರಲಿಲ್ಲ. ಆದರೂ ಮಾತೃಶ್ರೀಯವರು ತಮ್ಮ ಉದ್ದೇಶವು ನೆರವೇರಲಿಲ್ಲವಲ್ಲಾ-ತಮ್ಮ ಮನಸ್ಸಿನಂತೆ, ತಮ್ಮ ಸಂಬಂಧೀಕರಲ್ಲೇ ದತ್ತು ತೆಗೆದುಕೊಳ್ಳಲು ಅವಕಾಶವಿಲ್ಲವಲ್ಲಾ, ಎಂದು ಮರುಗಿ ಉಪಾಯವಿಲ್ಲದೆ,-'ರಾಜವಂಶ ಕ್ಷೇಮ ಚಿಂತನೆಯನ್ನು ಮನಸ್ಸಿನಲ್ಲಿಟ್ಟು ಹೇಗೆ ಸೂಕ್ತವೋ ಹಾಗೆ ಮಾಡಿ, ಉತ್ತಮ ರಾಜಪುತ್ರನನ್ನು ರಾಜವಂಶಕ್ಕೆ ದತ್ತುಮಾಡಿಸಬೇಕು'

*ಶ್ರೀಮನ್ಮಹಾರಾಜರವರ ವಂಶಾವಳಿ. ಪುಟ ೨೦೭-೨೦೮

ಎಂದು ಸಮಯೋಚಿತವಾಗಿ ನುಡಿದು ಅನುಮತಿಯಿತ್ತು ಕಳುಹಿಸಿದರು. ಒಡನೆ ಹೈದರಾಲಿಯು ಶ್ರೀರಂಗಪಟ್ಟಣಕ್ಕೆ ನಡೆದು, ಅಲ್ಲಿ ತನ್ನ ಅರಮನೆಯ ಸಭಾಂಗಣದಲ್ಲಿ ಒಂದು ದೊಡ್ಡ ಸಭೆಯನ್ನು ನೆರೆಯಿಸಲು ಏರ್ಪಡಿಸಿದನು. ಆ ಸಭೆಮನೆಯಲ್ಲಿ ಒಂದೆಡೆಯಲ್ಲಿ ಖರ್ಜೂರ ದ್ರಾಕ್ಷಿ ಕಲ್ಲುಸಕ್ಕರೆ ಮುಂತಾದ ತಿಂಡಿ ದಿನಸುಗಳನ್ನೂ ಇರಿಸಿದನು. ಇನ್ನೊಂದೆಡೆಯಲ್ಲಿ ವಿಚಿತ್ರವಾದ ನಾನಾ ವಿಧ ವಸ್ತ್ರಭೂಷಣಾದಿಗಳನ್ನೂ, ಬೇರೊಂದೆಡೆಯಲ್ಲಿ ವಿವಿಧ ಆಟಗೆಯ ಸಾಮಾನುಗಳನ್ನೂ, ಮತ್ತೊಂದು ಸ್ಥಳದಲ್ಲಿ ಒಂದು ಕನ್ನಡಿಯನ್ನೂ ಒಂದು ಕಠಾರಿಯನ್ನೂ ಇರಿಸಿದ್ದನು. ಆ ಸಭೆಗೆ ರಾಜವಂಶಕ್ಕೆ ಹತ್ತಿರದ-ದೂರದ ಸಂಬಂಧಿಕರಾದ ಅನೇಕಮಂದಿ ಚಿಕ್ಕ ಚಿಕ್ಕ ರಾಜಪುತ್ರರನ್ನೂ ಆಹ್ವಾನಿಸಿ, ಅವರಲ್ಲ ಯಾರಿಗೆ ಯಾವ ಪದಾರ್ಥವು ಇಷ್ಟವಾಗುವುದೋ ಅದನ್ನು ತೆಗೆದುಕೊಳ್ಳಲೆಂದು ಸ್ವೇಚ್ಛೆಯಾಗಿ ಬಿಟ್ಟುಬಿಟ್ಟನು. ಆ ಬಾಲಕರು, ತಮ್ಮ ಪೂರ್ವ ಸುಕೃತಾನುಸಾರವಾಗಿ ವಿಧಿ ಪ್ರೇರಿತರಾಗಿಯೋ ಎಂಬಂತೆ, ಬೇರೆ ಬೇರೆ ಪದಾರ್ಥಗಳಿದ್ದ ಸ್ಥಳಗಳಿಗೆ ಹೋಗಿ ತಮತಮಗೆ ಇಷ್ಟವಾದ ಪದಾರ್ಥಗಳನ್ನು ತೆಗೆದುಕೊಂಡರು. ಅವರಲ್ಲಿ ಚಾಮುಂಡೇಶ್ವರಿಯ ಕೃಪಾಕಟಾಕ್ಷಕ್ಕೆ ಪಾತ್ರರೂ, ಪೂರ್ವಪುಣ್ಯ ಯೋಗವು ಫಲಿಸಿ ಸುಕೃತಶಾಲಿಗಳಾಗಿದ್ದವರೂ ಅದ, ಚಾಮರಾಜರೆಂಬ ಮೂರುವರ್ಷದ ಬಾಲಕರು, ಆ ಸಭಾಜನಗಳೆಲ್ಲರೂ ಸಂತೋಷದಿಂದ ನೋಡುತ್ತಿರಲು, ಅಲ್ಲಿರಿಸಿದ್ದ ಕಠಾರಿಯನ್ನೂ ಕನ್ನಡಿಯನ್ನೂ ಎತ್ತಿಕೊಂಡರು. ನವಾಬ ಹೈದರಲ್ಲಿಯು ಅದನ್ನು ಕಂಡು,-'ಪ್ರಭುಶಕ್ತಿ ಸೂಚಿತವಾದ ಈ ಪ್ರತಿಭೆಯು ಸಾಮಾನ್ಯವಾದುದಲ್ಲ. ಇವರೇ ನಮಗೆ ರಾಜರಾಗತಕ್ಕವರು' ಎಂದು ನುಡಿದು, ಒಡನೆ ಎಲ್ಲರೂ ಎದ್ದುನಿಂತು ಅವರನ್ನು ಗೌರವಿಸುವಂತೆ ಆಜ್ಞಾಪಿಸಿ,-ಮಹಾರಾಜ ಪದವಿಗೆ ಯೋಗ್ಯವಾದ ಪೀಠವನ್ನು ತರಿಸಿ, ಆ ರಾಜಪುತ್ರರನ್ನು ಮುಹೂರ್ತಮಾಡಿಸಿ, ಸಕಲ ಸಾಮಾಜಿಕರುಗಳಿಂದಲೂ ಅವರವರ ಮರ್ಯಾದಾನುಗುಣವಾಗಿ ಮುಜರೆಮಾಡಿಸಿ, ತಾನೂ ನಜರೊಪ್ಪಿಸಿ, ಸಕಲರಿಗೂ ಹೂವಿನಹಾರ ವೀಳಯ ಫಲಾದಿಗಳನ್ನು ಒಪ್ಪಿಸಿ, ಅವರೇ ರಾಜಸಿಂಹಾಸನಕ್ಕೆ ಬಾಧ್ಯಸ್ಥರೆಂದು ಪ್ರಕಟಿಸಿದನು.



## ಅಧ್ಯಾಯ ೪ "ಹೈದರಾಲಿಯ ಮರಣ"

ನವಾಬ ಹೈದರಲ್ಲೀಖಾನನು ಏರ್ಪಡಿಸಿದ ಈ ವಿಚಿತ್ರ ಪದ್ಧತಿಯಿಂದ ರಾಜಪೀಠಕ್ಕೆ ಚುನಾವಣೆಯಾದ ರಾಜಪುತ್ರನು, ಅರಕುತಾರದ ದೇವರಾಜೇ ಅರಸಿನವರ ಕುಟುಂಬ ಹೊನ್ನಾಜಮ್ಮಣ್ಣಿಯವರ ಗರ್ಭಸುಧಾಂಬುಧಿಯಲ್ಲಿ ಜನಿಸಿದ ಚಾಮರಾಜನೆಂಬ ಬಾಲಕನೆಂಬ ಸಮಾಚಾರವು, ಮಹಾ ಮಾತೃಶ್ರೀ ಲಕ್ಷ್ಮಮ್ಮಣ್ಣಿಯವರಿಗೆ ತಿಳಿಸಲ್ಪಟ್ಟಿತು. ಆ ಸಂಗತಿಯನ್ನು ಕೇಳಿದ ಅವರು, ತಮ್ಮ ಮನಸ್ಸಿನಲ್ಲಿದ್ದಂತೆ ನಡೆಯಲು ಅವಕಾಶವಿಲ್ಲವಲ್ಲಾ ಎಂಬ ಅಸಹನೆಯಿಂದಲೂ, ತಮ್ಮ ಯತ್ನವೇನೂ ನಡೆಯುವಂತಿಲ್ಲವಲ್ಲಾ ಎಂಬ ವ್ಯಸನದಿಂದಲೂ, ಈ ದತ್ತು ಸಂಬಂಧವು ತಮ್ಮ ಮನಸ್ಸಿಗೆ ಸಮ್ಮತವಲ್ಲವಿದ್ದರೂ, ಸಮ್ಮತಿಪಟ್ಟವರಂತೆಯೇ ನಟನೆಮಾಡಿ, ಸಮಯೋಚಿತವಾದ ಪ್ರತ್ಯುತ್ತರವನ್ನು ಹೈದರಾಲಿಗೆ ಹೇಳಿಕಳುಹಿಸಿದರು. ತರುವಾಯ ನವಾಬನು. ಶಾ. ಶ. ೧೬೯೮ನೆಯ ದುರ್ಮುಖಿ ಸಂ||ದ ನಿಜ ಭಾದ್ರಪದ ಶುದ್ಧ ೧೫ ರಲ್ಲಿ ಲಕ್ಷ್ಮಮ್ಮಣ್ಣಿಯವರಿಗೆ ಬಲಾತ್ಕಾರದಿಂದ ಆ ಬಾಲಕನನ್ನು ದತ್ತುಮಾಡಿಸಿ, ಯಥಾಶಾಸ್ತ್ರವಾಗಿ ಪಟ್ಟಾಭಿಷೇಕ ಮಹೋತ್ಸವವನ್ನೂ ನೆರವೇರಿಸಿದನು. ರಾಜಕುಮಾರರಿಗೆ ಖಾಸಾ ಚಾಮರಾಜ ಒಡೆಯರೆಂಬ ನಾಮಧೇಯವನ್ನಿಟ್ಟು ಪಟ್ಟಾಭಿಷೇಕ ಮಾಡಿದರು.

ತರುವಾಯ, ಅರಮನೆಯನ್ನು ಸೇರಿದ ರಾಜಪುತ್ರ ಖಾಸಾ ಚಾಮರಾಜ ಒಡೆಯರು, ದಿನದಿನಕ್ಕೆ ಪ್ರವರ್ಧಮಾನರಾಗುತ್ತಿದ್ದರು. ಅವರ ಪೋಷಣೆಯನ್ನು ಪ್ರಾರಂಭಕ್ಕೆ ಮಾತೃಶ್ರೀ ಲಕ್ಷ್ಮಮ್ಮಣ್ಣಿಯವರೇ ವಹಿಸಿಕೊಂಡಿದ್ದರಾದರೂ, ಮಹಾ ತಂತ್ರ ಕುಶಲನಾದ ಹೈದರಾಲಿಯು, ಈ ದತ್ತು ಸಂಬಂಧ ವಿಷಯದಲ್ಲಿ ರಾಣಿಯವರಿಗೆ ಸಮಾಧಾನವಿಲ್ಲವೆಂಬುದನ್ನು ತಿಳಿದವನಾಗಿ, ಮುಂದೆ ರಾಜರಿಗೆ ಅವರಿಂದ ಏನಾದರೂ ಅಪಾಯವುಂಟಾಗಬಹುದೆಂದೆಣಿಸಿ, ರಾಜಪುತ್ರರನ್ನು ಅವರ ಪೋಷಣೆಯಿಂದ ತಪ್ಪಿಸಿ, ಅವರ ಸವತಿಯರಾದ ಮುದ್ದು ಮಲ್ಲಾಜಮ್ಮಯ್ಯನವರೆಂಬುವರ ಸ್ವಾಧೀನದಲ್ಲಿರಿಸಿದನು. ಲಕ್ಷ್ಮಮ್ಮಣ್ಣಿಯವರು ಅರಮನೆಯ ನಾಟಕ ಶಾಲೆಯ ಬೊಕ್ಕಸದ ತೊಟ್ಟಿಯಲ್ಲಿ ವಾಸಮಾಡಿಕೊಂಡಿರಬೇಕೆಂದು ಏರ್ಪಾಟು ಮಾಡಿದನು.

ಮುಂದೆ ರಾಜಮನೆತನದವರು ಹೈದರಾಲಿಯ ಸಂಪೂರ್ಣಾಧಿಕಾರಕ್ಕೇ ಒಳಪಟ್ಟಂತಾಯಿತು. ನವಾಬ ಹೈದರಾಲಿಯು ಸರ್ವಾಧಿಕಾರಿಯಾಗಿ, ಸಮಸ್ತ ರಾಜಕಾರ್ಯಗಳಲ್ಲೂ, ಮಹಾರಾಣಿಯವರ ಅನುಮತಿಯನ್ನು ಪಡೆಯಬೇಕಾಗಿದ್ದರೂ ಕಾಲಕ್ರಮದಲ್ಲಿ ಆತನು ಆ ನಿರ್ಬಂಧವನ್ನು ಸಂಪೂರ್ಣವಾಗಿ ಪರಿತ್ಯಜಿಸಿ ಸಕಲ ರಾಜಕಾರ್ಯಗಳಲ್ಲೂ ಸರ್ವತಂತ್ರ ಸ್ವತಂತ್ರನೋ ಎಂಬಂತೆಯೇ ಪ್ರವರ್ತಿಸತೊಡಗಿದನು. ದಿನದಿನಕ್ಕೆ ಸೈನ್ಯವನ್ನು ವಿಶೇಷವಾಗಿ ಸೇರಿಸಿ ಅವರನ್ನು ಕವಾಯಿತು ಮೊದಲಾದ ಯುದ್ಧ ವಿದ್ಯಾಶಿಕ್ಷಣೆಯಿಂದ ಸಿದ್ಧಪಡಿಸಿ, ಅವರ ಸಹಾಯದಿಂದ ಸುತ್ತಮುತ್ತಲಿನ ಅನೇಕ ಸೀಮೆಗಳಮೇಲೆ ದಂಡೆತ್ತಿ ನಡೆದು ಸ್ವಾಧೀನಗೊಳಿಸಿಕೊಳ್ಳುತ್ತಾ ಧನಬಲ - ಜನ ಬಲಗಳಿಂದ ಪ್ರಬಲಿಸುತ್ತಾ ಇದ್ದನು. ಚಿತ್ರದುರ್ಗ ಮತ್ತು ಕಡಪೆಗಳಂತಹ ಸುಪ್ರಸಿದ್ಧ ದುರ್ಗಗಳು ಸಹ ಆತನಿಂದ ಜಯಿಸಲ್ಪಟ್ಟುವು. ಆ ಕಾಲದಲ್ಲಿ ಆತನ ಸೈನ್ಯದಲ್ಲಿ ೩೯೫೦೦ ಕುದುರೆ ಸವಾರರು ೬೪೦೦ ಬಾರಿಸವರು, ೧೨೪೦೦೦ ಒಲೆಕಾರರು ಮತ್ತು ಮಿಕ್ಕ ಸೈನಿಕರು ಸೇರಿ ಒಟ್ಟು ೨,೨೬೦೦೦ ಸೈನ್ಯವಿತ್ತು. ಇಂತಹ ಅಪಾರವಾದ ಸೈನ್ಯ ಸಹಾಯದಿಂದ ಆತನು ದಕ್ಷಿಣದಲ್ಲಿ ರಾಮೇಶ್ವರದ ಬಾಗಿಲಿನಿಂದ ಸುತ್ತಲೂ ಕನ್ಯಾಕೋಟಿ ಸಮುದ್ರ, ಕೊಡೆಯಾಲ, ಕೃಷ್ಣಾನದಿ, ಗದ್ವಾಲ, ನಲ್ಲೂರು, ಸರ್ವಪಲ್ಲಿ, ಮದ್ರಾಸು ಸಮೀಪದವರೆಗೂ ಉತ್ತರದಲ್ಲಿ ಪೂನಾಪಟ್ಟಣದವರೆಗೂ ಮೈಸೂರು ರಾಜ್ಯವನ್ನು ವಿಸ್ತರಿಸಿ ಒಟ್ಟು ೩೬೩ ಗಡಿಗಳನ್ನು ರಾಜ್ಯಾಡಳಿತಕ್ಕೆ ಒಳಪಡಿಸಿದ್ದನು. ಆಗಿನ ಲೆಕ್ಕದಂತೆ ರಾಜ್ಯಾದಾಯವು ಎರಡು ಕೋಟಿ ಮೂವತ್ತು ಲಕ್ಷ ವರಹಗಳಾಗಿತ್ತು.

ರಾಜ್ಯವೇನೋ ಇಷ್ಟುಮಟ್ಟಿನ ಅಭಿವೃದ್ಧಿ ಸ್ಥಿತಿಯಲ್ಲಿದ್ದರೂ, ರಾಜ್ಯಕ್ಕೆ ನಿಜವಾಗಿ ಬಾಧ್ಯಸ್ಥರಾಗಿದ್ದ ರಾಜವಂಶೀಕರಿಗೆ ಮಾತ್ರ ದಿನದಿನಕ್ಕೆ ನಿರ್ಬಂಧಗಳೂ, ಅಸಹನೀಯ ಹಿಂಸೆ ಕಿರುಕುಳಗಳೂ ಹೆಚ್ಚುತ್ತಾ ಹೋದುವು. ಈ ಪರಿಸ್ಥಿತಿಯನ್ನು ಸಾವಧಾನವಾಗಿ ಯೋಚಿಸಿ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು, ಈ ದುಸ್ಥಿತಿಯಿಂದ ಹೇಗಾದರೂ ಪಾರಾಗಬೇಕೆಂದು ಉಪಾಯವನ್ನು ಹುಡುಕಲು ಮೊದಲುಮಾಡಿದರು. ಆಗ ಚೆನ್ನಪಟ್ಟಣ ಎಂದರೆ ಈಗಿನ ಮದ್ರಾಸು ಪಟ್ಟಣದಲ್ಲಿದ್ದ ಇಂಗ್ಲಿಷ್ ಗವರ್ನರರೊಂದಿಗೆ

ಬಹು ಗೋಪ್ಯವಾಗಿ ಪತ್ರ ವ್ಯವಹಾರವನ್ನು ನಡೆಯಿಸಲಾಗಿದರು. ಮೈಸೂರು ರಾಜ್ಯವನ್ನು ಮಹಮ್ಮದೀಯರ ಕೈಗೆ ಬೀಳದಂತೆ ದಕ್ಕಿಸಿಕೊಳ್ಳುವ ನಿಮಿತ್ತವಾಗಿ ಆಕೆಯು ಇಂಗ್ಲೀಷ್ ಪ್ರಭುತ್ವದವರ ಸಹಾಯವನ್ನು ಕೇಳುವುದಕ್ಕಾಗಿಯೂ ಆ ಸಂಬಂಧ ಕೆಲಸ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿಯೂ ತಿರುಮಲರಾಯನೆಂಬ ಒಬ್ಬ ಬ್ರಾಹ್ಮಣ ವಕೀಲನನ್ನು ಮದರಾಸಿಗೆ ಕಳುಹಿಸಿದರು. ಅಂತಃಪುರವನ್ನು ಬಿಟ್ಟು ಹೊರಕ್ಕೆ ಬಂದರಿಯದ ಒಬ್ಬ ರಾಜಸ್ತ್ರೀಯು, ರಾಜ್ಯದಲ್ಲಿ ಹೆಚ್ಚಿ ಹೋಗುತ್ತಿದ್ದ ಶತ್ರು ಪ್ರಾಬಲ್ಯವನ್ನು ನಿರ್ಮೂಲಗೊಳಿಸಲೆಳೆಸಿ, ಕೈಕೊಂಡ ಈ ಸಾಹಸ ಕಾರ್ಯವು ಪ್ರಶಂಸಾರ್ಹವಾಗಿರುವುದು. ಆ ಕಾಲದಲ್ಲಿ ಆಕೆಯು ತಿರುಮಲರಾಯನಿಗೆ ಬರೆಸಿ ಕಳುಹಿಸುತ್ತಿದ್ದ ಕಾಗದಗಳ ಮೇಲಿನಿಂದ ಆಕೆಗಿದ್ದ ರಾಜ್ಯಕಾರ್ಯ ಧುರಂಧರತ್ವವನ್ನು ತಿಳಿಯಬಹುದು. ತಿರುಮಲರಾಯನಿಗೆ ಬರೆಸಿದ ಒಂದಾದೊಂದು ಪತ್ರದಲ್ಲಿ,—'ನೀವು ಲೇಶಮಾತ್ರವೂ ಆಲಸ್ಯವಾಡದೆ ಈ ನಿಮಿಷವೇ ಪ್ರಯಾಣಮಾಡಿ, ಮದರಾಸನ್ನು ಸೇರಿ, ಅಲ್ಲಿ ಲಾಡ್ ಪಿಂಗಾಟು ದೊರೆಯನ್ನು ಸಂದರ್ಶಿಸಿ, ಪುನಃ ನಮ್ಮ ರಾಜ್ಯಪ್ರಾಪ್ತಿಗೆ ಸಾಧಕವಾದ ವಿಚಾರಗಳನ್ನು ಉಚಿತವಾದ ಮಾತುಗಳಿಂದ ಆತನೊಡನೆ ಚರ್ಚಿಸಬೇಕು. ಅವರ ಸೈನ್ಯದ ಖರ್ಚಿಗಾಗಿ ಒಂದು ಕೋಟಿ ರೂಪಾಯಿಗಳನ್ನೂ, ದರ್ಬಾರು ಖರ್ಚಿಗಾಗಿ ಮೂರು ಲಕ್ಷ ರೂಪಾಯಿಗಳನ್ನೂ ಕೊಡುವುದಕ್ಕೆ ನಾವು ಸಿದ್ಧರಾಗಿದ್ದೇವೆಂಬ ವಿಚಾರವನ್ನು ಅವರಿಗೆ ಸ್ಪಷ್ಟವಾಗಿ ತಿಳಿಸಿರಿ. ಪಿಂಗಾಟು ದೊರೆಗೆ ನಾವು ಪ್ರತ್ಯೇಕವಾಗಿ ಬರೆದಿರುವ ಪತ್ರದಲ್ಲಿ ನೀವು ನಮ್ಮ ಕಡೆಯ ಪ್ರತಿನಿಧಿಯೆಂದೂ ಸಮಯಾನುಸಾರವಾಗಿ ರಾಜಕಾರ್ಯವನ್ನು ಕುರಿತು ಸಂಧಿಮಾಡಿಕೊಳ್ಳುವುದಕ್ಕೂ ನಿಮಗೆ ಸ್ವಾತಂತ್ರ್ಯಶಕ್ತಿಯನ್ನು ವಹಿಸಿದ್ದೇವೆಂದೂ ತಿಳಿಸಿದ್ದೇವೆ. ನೀವು ಯಾವುದಾದರೊಂದು ಮಾರ್ಗದಿಂದ ಭಗೀರಥ ಪ್ರಯತ್ನಮಾಡಿ ರಾಜ್ಯವನ್ನು ಪುನಃ ನಮ್ಮ ರಾಜವಂಶಕ್ಕೆ ಗಳಿಸಿಕೊಡುವಿರಾದರೆ ರಾಜ್ಯಾದಾಯದಲ್ಲಿ ನಿಮಗೆ ಶೇಕಡಾ ೧೦ರಂತೆ ಬಹುಮಾನ ಕೊಡುವುದಲ್ಲದೆ, ವಂಶಪಾರಂಪರ್ಯವಾಗಿ ಸಂಸ್ಥಾನದ ದಿವಾನಗಿರಿಯನ್ನೇ ನಿಮಗೆ ವಹಿಸುತ್ತೇವೆ" ಎಂದು ಬರೆಸಿದ್ದರು.

ಈ ಪತ್ರವನ್ನು ಅನುಸರಿಸಿ ವಕೀಲ ತಿರುಮಲರಾವು ಮದರಾಸಿನಲ್ಲಿ ಗವರ್ನರನ್ನು ಕಂಡು, ಮೈಸೂರಿನ ರಾಜಕಾರ್ಯವನ್ನು ಕುರಿತು ಪ್ರಸ್ತಾಪ ನಡೆಸಿದನು. ಆದರೆ ಒಂದು ತೀರ್ಮಾನಕ್ಕೆ ಬರುವ ವೇಳೆಗೆ ಗವರ್ನರಾದ ಆ ಪಿಂಗಾಟು ದೊರೆಯು ವಿಷಯದಲ್ಲಿ ಕಂಪೆನಿಯವರಿಗೆ ಏನೋ ಅಸಮಾಧಾನವುಂಟಾದುದರಿಂದ ಆತನನ್ನು ವಾಪಸು ಕರೆಸಿಕೊಂಡರು. ಈ ಕಾರಣದಿಂದ ಇವರೆಗೆ ತಿರುಮಲರಾವು ಮಾಡಿದ ಪ್ರಯತ್ನವೆಲ್ಲವೂ ವ್ಯರ್ಥವಾಯಿತು. ಮುಂದೆ ಮಾಡುವ ಕಾರ್ಯವೆಂಥದೆಂದು ತೋರದೆ ಆತನು ಕೆಲ ಕಾಲ ತಂಜಾವೂರಿನಲ್ಲಿ ವಾಸಮಾಡಿಕೊಂಡಿದ್ದನು.

ಇತ್ತ ಹೈದರನ ಪ್ರಾಬಲ್ಯವು ದಿನದಿನಕ್ಕೆ ಹೆಚ್ಚುತ್ತಲೇ ಇದ್ದಿತು. ಆತನು ತನ್ನ ಅಪಾರ ಸೈನ್ಯ ಸಹಾಯ ಬಲದಿಂದ ಮದ್ರಾಸಿನಮೇಲೆ ದಂಡೆತ್ತಿ ನಡೆದು ಇಂಗ್ಲೀಷರನ್ನೇ ಈ ದೇಶದಿಂದ ಓಡಿಸಬೇಕೆಂದು ಪ್ರಯತ್ನಿಸಿದನು. ಈ ಸಂಗತಿಯು, ಮದರಾಸಿನ ಗವರ್ನರಾಗಿ ಬಂದ ಲಾರ್ಡ್ ಮ್ಯಾಕರ್ಟನೆ ಎಂಬಾತನಿಗೆ ತಿಳಿಯಿತು. ಸಮೀಪದಲ್ಲೇ ಅಂತಹ ಪ್ರಬಲ ಶತ್ರುವನ್ನಿಟ್ಟುಕೊಂಡು ಉದಾಸೀನತೆಯಿಂದಿರುವುದು ಅಪಾಯವೆಂದೆಣಿಸಿ, ಆತನು ಪ್ರತೀಕಾರೋಪಾಯವನ್ನು ಕುರಿತು ಯೋಚಿಸತೊಡಗಿದನು. ಆ ಕಾಲಕ್ಕೆ ಪುನಃ ತಿರುಮಲರಾಯನು ಆತನನ್ನು ಸಂದರ್ಶಿಸಿ, ಮಹಾರಾಣಿ ಲಕ್ಷ್ಮಮ್ಮಣ್ಣಿಯ ಕೋರಿಕೆಯನ್ನು ಶ್ರುತಪಡಿಸಿದನು. ದಿನದಿನಕ್ಕೆ ಪ್ರಬಲಿಸುತ್ತಿದ್ದ ಹೈದರನಮೇಲೆ ತಾವೇ ಸ್ವತಂತ್ರಿಸಿ ನಿಂತು ಯುದ್ಧಮಾಡುವುದಕ್ಕಿಂತಲೂ, ಲಕ್ಷ್ಮಮ್ಮಣ್ಣಿಯವರ ಸಹಾಯಗೊಂಡು ಅವನನ್ನು ಎದುರಿಸುವುದು ಉಚಿತವೆಂದು ಆತನು ಯೋಚಿಸಿದನು. ತರುವಾಯ ಸಾವಕಾಶಮಾಡದೆ, ಆಗ ತಂಜಾವೂರಿನಲ್ಲಿ ರೆಸಿಡೆಂಟಾಗಿದ್ದ ಸಲ್ಲಿವನ್ ಎಂಬ ಸರದಾರನನ್ನು ಆ ಕೆಲಸಕ್ಕಾಗಿ ನಿಯಮಿಸಿದನು. ೧೭೮೨ನೆಯ ಸಂವತ್ಸರದ ಅಕ್ಟೋಬರು ೨೮ನೆಯ ದಿನ ತಿರುಮಲರಾಯನಿಗೂ ಸಲ್ಲಿವನ್ ದೊರೆಗೂ ಸಂಧಿಯಾಯಿತು. ಅದೇ ಸಂವತ್ಸರದ ನವಂಬರು ೭೭ರಲ್ಲಿ ಮದರಾಸು ಗೌರ್ನರು ಆ ಸಂಧಿಯ ಷರತ್ತುಗಳಿಗೆ ಒಪ್ಪಿದರು. ಆಗಿನ ಸಂದರ್ಭದಲ್ಲಿ ಇಂಗ್ಲಿಷರ ಸಹಾಯವಿಲ್ಲದೆ, ರಾಜ್ಯವು ತಮಗೆ ದಕ್ಕುವ ಆಶೋತ್ತರವೇ ಇಲ್ಲದಿದ್ದುದರಿಂದ ಮಹಾರಾಣಿ ಲಕ್ಷ್ಮಮ್ಮಣ್ಣಿಯವರೂ, ಆ ಕರಾರಿಗೆ

ತಮ್ಮ ಸಮ್ಮತಿಯನ್ನಿತ್ತರು. ಹೀಗೆ ಎಲ್ಲವೂ ಸಿದ್ಧವಾಯಿತು. ಇಂಗ್ಲೀಷರು, ಸೈನ್ಯ ಸರಂಜಾಮುಗಳನ್ನು ಸಿದ್ಧಗೊಳಿಸಿಕೊಂಡು, ಮೈಸೂರನ್ನು ಬಂಧ ಮುಕ್ತ ಮಾಡಲು ಕೃತಸಂಕಲ್ಪರಾದರು. ಆ ಸಂದರ್ಭದಲ್ಲೇ ಅವರಿಗೆ ಮತ್ತಷ್ಟು ಉತ್ಸಾಹ ಜನಕವಾಗಿರುವಂತೆ, ಮಹಾರಾಣಿಯವರು ಮತ್ತೊಂದು ಪತ್ರವನ್ನೂ ಬರೆಸಿದರು. ಅದರಲ್ಲಿ ಈಗ ಅವರು ಮಾಡುವ ಉಪಕಾರಕ್ಕೆ ಪ್ರತ್ಯುಪಕಾರವಾಗಿ, ಸಂವತ್ಸರಕ್ಕೆ ೭೫ ಲಕ್ಷ ರೂಪಾಯಿಯ ಕಪ್ಪವನ್ನೂ, ೧೫ ಲಕ್ಷ ರೂಪಾಯಿಯ ದೇಶವನ್ನೂ ಇಂಗ್ಲೀಷರಿಗೆ ಕೊಡುತ್ತೇವೆಂದು ಒಕ್ಕಣೆಯಿತ್ತು. ಇಂಗ್ಲೀಷಿನವರ ಸೈನ್ಯವು ಸಮೀಪಕ್ಕೆ ಬಂದೊಡನೆಯೇ ಶ್ರೀರಂಗಪಟ್ಟಣದಲ್ಲಿದ್ದ ರಾಣಿಯ ಪಕ್ಷದವರಾದ ಸೈನ್ಯದವರೆಲ್ಲರೂ ಹೈದರನ ಸೈನ್ಯದಮೇಲೆ ತಿರುಗಿ ಬೀಳಬೇಕೆಂದೂ, ಹೀಗೆ ಒಳದೇಶ ಹೊರದೇಶಗಳೆರಡರಿಂದಲೂ ಶತ್ರುಸೈನ್ಯದಮೇಲೆ ತಿರುಗಿಬಿದ್ದು ಅದನ್ನು ಹಣ್ಣಿಗೆ ತರಬೇಕೆಂಬುದೂ ಅವರ ಅಭಿಪ್ರಾಯವಾಗಿದ್ದಿತು. ಆಗ ಶ್ರೀರಂಗಪಟ್ಟಣದಲ್ಲಿ ಅಧಿಕಾರದಲ್ಲಿದ್ದ ಶಾಮಯ್ಯ ಎಂಬ ಶೂರನಾದ ಸರದಾರನೊಬ್ಬನು, ರಾಣಿಯವರ ಈ ಕಾರ್ಯಕ್ಕೆ ಅನುಕೂಲನಾಗಿದ್ದನು. ರಾಣಿಯವರು, ಶ್ರೀರಂಗಪಟ್ಟಣದಲ್ಲಿ ತಮ್ಮ ಕಡೆಯಿಂದ ನಡೆಯಬೇಕಾದ ಕಾರ್ಯಗಳಿಗೆಲ್ಲ ಈ ಶಾಮಯ್ಯನನ್ನೇ ಅಧಿಪತಿಯನ್ನಾಗಿ ನಿಯಮಿಸಿದರು. ಮತ್ತು ಈ ಸಂಗತಿಯನ್ನು ಕುರಿತು, ತಿರುಮಲರಾಯನಿಗೆ ಒಂದು ಪತ್ರವನ್ನೂ ಬರೆಯಿಸಿದರು. ಅದರಲ್ಲಿ-'ಶ್ರೀರಂಗಪಟ್ಟಣದಲ್ಲಿರುವ ಸರದಾರ ಶಾಮಯ್ಯನೂ ಇತರ ಕೆಲಮಂದಿ ಅಧಿಕಾರಿಗಳೂ ನಮಗೆ ಅನುಕೂಲರಾಗಿದ್ದಾರೆ. ಆದುದರಿಂದ ಇಂಗ್ಲೀಷು ಸೈನ್ಯವು ಇಲ್ಲಿಗೆ ಬಂದೊಡನೆಯೇ ನಾವು ವಿಶೇಷ ಪ್ರಯಾಸವಿಲ್ಲದೆಯೇ, ಧನಾಗಾರವನ್ನೂ ಕೋಟೆಯನ್ನೂ ವಶಪಡಿಸಿಕೊಳ್ಳಬಹುದು. ಆದುದರಿಂದ ನೀವು ಗಜ್ಜಲಹಟ್ಟಿ ಕಾವೇರಿಪುರದ ಮಾರ್ಗವಾಗಿ, ಇಂಗ್ಲೀಷು ಸೇನೆಯನ್ನು ಅತಿ ತ್ವರೆಯಾಗಿ ಕಳುಹಿಸುವುದು" ಎಂದಿತ್ತು'.

ಹೀಗೆ ಎಲ್ಲವೂ ಒಂದು ಸುಮುಖ ಸ್ಥಿತಿಗೆ ಬಂದಿದ್ದ ವೇಳೆಯಲ್ಲಿ ರಾಣಿಯವರ ಒಬ್ಬ ಸೇವಕನು ಸ್ವಾಮಿನೀದ್ರೋಹಿಯಾಗಿ ಒಡನೆ ಈ ಸಂಗತಿಗಳನ್ನೆಲ್ಲ ಹೈದರನಿಗೆ ತಿಳಿಯಪಡಿಸಿದನು. ಆ ಸಂಗತಿಯನ್ನು ಕೇಳಿದ ಹೈದ

ದನು, ಮಹಾ ಕ್ರೋಧಾವೇಶ ಪರವಶನಾಗಿ, ೧೭೮೩ನೆಯ ಜೂಲೈ ೨೩ನೆಯ ದಿನ ರಾಣಿಯವರ ಪಕ್ಷವರ್ಗಕ್ಕೆ ಸೇರಿದವರೆಂದು ಸಂಶಯ ತೋರಿದ ಜನಗಳನ್ನೆಲ್ಲಾ ಹಿಡಿಸಿ ನಿರ್ಬಂಧದಲ್ಲಿಡಿಸಿದನು. ಕೆಲವರನ್ನು ಕೊಲ್ಲಿಸಿದನು. ಮಿಕ್ಕ ಕೆಲವರಿಗೆ ಕಿವಿ ಮೂಗುಗಳನ್ನು ಕೊಯಿಸಿದನು. ತಮ್ಮ ಕಾರ್ಯಕ್ಕೆ ಮಧ್ಯದಲ್ಲಿ ಹೀಗೆ ಅನಿರೀಕ್ಷಿತವಾದ ವಿಘ್ನವುಂಟಾದರೂ ರಾಣಿಯವರು ಅದಕ್ಕಾಗಿ ಅಧೈರ್ಯಪಟ್ಟು ಹಿಂಜರಿದು ಕೂಡದೆ, ಹೈದರ್ ಮತ್ತು ಟಿಪ್ಪು ಇವರ ಸಂಪೂರ್ಣ ವಿನಾಶಕ್ಕೇ ಪ್ರಯತ್ನಮಾಡತೊಡಗಿದರು. ಅಬಲೆಯಾಗಿದ್ದರೂ ಆ ಕಾಲದಲ್ಲಿ ರಾಣಿಯವರು ಪ್ರಕಾಶಪಡಿಸದ ಧೈರ್ಯವು ಸಾಮಾನ್ಯವಾದುದಲ್ಲ. ಹೈದರನ ಸೈನ್ಯ ಸಹಾಯವೂ, ಟಿಪ್ಪುವಿನ ಶೌರ್ಯ ಪ್ರತಾಪಗಳೂ ಆಗ್ಗ ಇಂಗ್ಲೀಷಿನವರಿಗೆ ಸಹ ಭಯಪ್ರದವಾಗಿದ್ದುವು. ಟಿಪ್ಪುವನ್ನು ಅವರು 'ಮೈಸೂರು ಹುಲಿ' ಎಂದುಕೊಂಡು, ಅಂತಹ ಶೂರನನ್ನು ನಾವು ಯುದ್ಧದಲ್ಲಿ ಜಯಿಸಬಲ್ಲೆವೆ ಎಂದು ಶಂಕೆಗೊಂಡಿದ್ದರು. ಹೀಗೆ ಮಹಾ ಶೂರರಿಗೇ ಎದೆನಡುಗುವಂತಹ ದುಸ್ಕರ ಸಮಯದಲ್ಲೂ, ಆ ವೃದ್ಧರಾಣಿಯವರು ಶತ್ರುಗಳನ್ನು ನಾಶಗೊಳಿಸಿ ತಮ್ಮ ಪಿತಾರ್ಜಿತವಾದ ರಾಜ್ಯವನ್ನು ಪುನಃ ಸಂಪಾದಿಸುವೆವೆಂದು ಮಾಡುತ್ತಿದ್ದ ಪ್ರಯತ್ನವು ಅವರ ಮನೋದಾರ್ಢ್ಯವನ್ನೂ ಸ್ವದೇಶಾಭಿಮಾನವನ್ನೂ ವ್ಯಕ್ತಗೊಳಿಸುತ್ತದೆ. ೧೭೯೦ನೆಯ ಸಂವತ್ಸರದಲ್ಲೊಂದು ವೇಳೆ, ಅವರು ಜನರಲ್ ಮೆಡೋಸ್ ಎಂಬ ಸರದಾರನಿಗೆ ಉತ್ಸಾಹಪ್ರದವಾದ ಒಂದು ಪತ್ರವನ್ನು ಬರೆದರು. ಅದಕ್ಕೆ ಪ್ರತ್ಯುತ್ತರವಾಗಿ ಆತನಿಂದ ಬಂದ ಪತ್ರವು ಸಂಪೂರ್ಣ ನಿರುತ್ಸಾಹಜನಕವಾಗಿದ್ದಿತು. -ಟಿಪ್ಪುವು ಎಂದು ನಶಿಸುವನೋ, ದೇಶವೆಂದು ಶತ್ರು ನಿರ್ಮುಕ್ತವಾಗಿ ನಿಮ್ಮ ಕೈ ಸೇರುವುದೋ ಪರಮೇಶ್ವರನಿಗೇ ಗೊತ್ತು! ವಿಜಯ ಪ್ರಾಪ್ತಿಯು ಪರಮೇಶ್ವರಾಧೀನದ ಮಾತು. - ನಮಗೆ ದೇವರು ಯಶಸ್ಸಾಮರ್ಥ್ಯಗಳನ್ನು ಕೊಟ್ಟರೆ, ಯೋಗ್ಯವೆಂದು ತೋಚಿದರೆ-ನಾವು ಅತ್ಯಾನಂದದಿಂದ ಮೈಸೂರು ರಾಜ್ಯವನ್ನು ನಿಮಗೆ ಸಮರ್ಪಿಸುವೆವು. ರಾಜ್ಯವನ್ನು ಯಾರು ಯಾಗ ಹೇಗೆ ವಿಭಾಗಿಸಿಕೊಳ್ಳಬೇಕೆಂಬ ಸಂಗತಿಯನ್ನು ಕುರಿತು ಈಗ ಏನೆಂದು ಹೇಳಲೂ ಸಾಧ್ಯವಿಲ್ಲ. ಮರಾಠೆಯವರೂ, ನಿಜಾಮನೂ

ನಮಗೆ ಮಿತ್ರರಾದುದರಿಂದ ಅವರ ಆಲೋಚನೆಯನ್ನು ಅನುಸರಿಸಿ ಆ ಕಾರ್ಯವನ್ನು ಕುರಿತು ಯೋಚಿಸಬೇಕಾಗುತ್ತದೆ. ಸಂಪೂರ್ಣ ಯುದ್ಧ ವ್ಯಯವನ್ನೂ, ಗೆದ್ದ ತಗುವಾಯ ಸೈನಿಕರಿಗೆ ಬಹುಮಾನಗಳನ್ನೂ ಕೊಡುತ್ತೇವೆಂದು ನೀವು ಬರೆಸಿದ್ದೀರಿ. ಇದು ಬಹು ಯುಕ್ತವಾದ ಕಾರ್ಯವೇ' ಹೀಗೆಂದು ಆ ಪತ್ರದಲ್ಲಿದ್ದಿತು.

ಯಾರನ್ನು ವೀರಾಗ್ರೇಸರರೆಂದು ಆಶ್ರಯಿಗೊಂಡು, ಅವರ ಸಹಾಯದಿಂದ ತಮ್ಮ ಶತ್ರುವನ್ನು ವಧಿಸಿ ಕಾರ್ಯಸಾಧನೆ ಮಾಡಬಹುದೆಂದು ಬೆಟ್ಟದಷ್ಟು ಆಸೆಯನ್ನಿಟ್ಟುಕೊಂಡಿದ್ದರೋ, ಅಂತಹ ಆಂಗ್ಲೇಯ ಸರದಾರರಿಂದ ಇಂತಹ ಪುಡಿಮಾತುಗಳ ಪ್ರತ್ಯುತ್ತರ ಬಂದರೆ, ಮಹಾರಾಣಿಯವರು ಇನ್ನು ಹೇಗೆತಾನೇ ಧೈರ್ಯವಾಗಿರಲು ಸಾಧ್ಯವಾದೀತು! ಆದರೂ ಆಕೆಯು ಅಧೈರ್ಯಗೊಳ್ಳಲಿಲ್ಲ-ಎದೆನಡುಗಲಿಲ್ಲ. ರಾಣಿಯವರು, ಇಂತಹ ನಿರುತ್ಸಾಹ ಸಂದರ್ಭದಲ್ಲೂ 'ಸತ್ಯಮೇವ ಜಯತೇ' ಎಂಬ ದೃಢನಂಬಿಕೆಯಿಂಗಲೇ ಕಾರ್ಯಗಳನ್ನು ನಡೆಸುತ್ತಿದ್ದರು.

ರಾಜಕಾರ್ಯವು ಇಷ್ಟುಮಟ್ಟಿನ ಇಕ್ಕಟ್ಟಿನ ಸ್ಥಿತಿಯಲ್ಲಿದ್ದಾಗಲೇ ಹೈದರಾಲಿಯು ಕಲ್ಲೀಕೋಟೆಯ ಪ್ರಾಂತದಲ್ಲಿ ಪುಂಡೆದ್ದ ನಾಯಿಮಾರರನ್ನು ಅಡಗಿಸಬೇಕೆಂದು ತನ್ನ ಮಗ ಟಿಪ್ಪುಸುಲ್ತಾನನನ್ನು ಸೈನ್ಯಸಮೇತ ಆ ಪ್ರಾಂತಕ್ಕೆ ಕಳುಹಿಸಿದನು. ಮುಂದೆ ಒಂದೆರಡು ತಿಂಗಳೊಳಗಾಗಿಯೇ ಆತನಿಗೆ ಬೆನ್ನುಫಣಿ ಎಂಬ ವ್ರಣಜಾಢ್ಯವು ಸಂಭವಿಸಿ ಬಹಳ ಉಪದ್ರವಕಾರಿಯಾಗಿ ಪರಿಣಮಿಸಿತು. ದಿನದಿನಕ್ಕೆ ರೋಗಬಾಧೆಯು ಬಲವಾಗುತ್ತಿರಲು ನವಾಬನು ಇನ್ನು ತನ್ನ ದೇಹವುಳಿಯುವುದಿಲ್ಲವೆಂದು ತಿಳಿದವನಾಗಿ ತನ್ನ ಆಪ್ತ ಅಧಿಕಾರಿಗಳಾದ, ಅಬೂಮಹಮ್ಮದ್ ಮಿರ್ದೆ, ತೋಷೀಖಾನೆ ಕೃಷ್ಣರಾಯ, ಪೂರ್ಣಯ್ಯನವರು, ಅಂಚೆ ಶಾಮಯ್ಯ, ಮೀರ್ ಮಹಮ್ಮದ್‌ಸಾದಕ್, ಎಂಬ ಈ ಐದು ಜನಗಳನ್ನುಬಳಿಗೆ ಕರೆದು,—* ದೊರೆಗಳವರಾದ ಇಮ್ಮಡಿ ಕೃಷ್ಣರಾಜ ಒಡೆಯರವರು, ಸ್ವಲ್ಪ ಚಾಕರಿಯಲ್ಲಿದ್ದ ನನಗೆ ಸರ್ವಾಧಿಕಾರವನ್ನು ಕೊಟ್ಟುದರಿಂದ, ನಾನು † 'ನಮ್ಮಕ್‌ಹರಾಮ'ನೆನಿಸಿಕೊಳ್ಳದೆ, ಇದುವರೆಗೂ ಸ್ವಾಮಿ ಭಕ್ತಿಯಿಂದಲೇ ಚಾಕರಿಮಾಡಿಕೊಂಡು 'ಇರುತ್ತಿದ್ದೆನು.

* ಶ್ರೀಮನ್ಮಹಾರಾಜರವರ ವಂಶಾವಳಿ, ಪುಟ. ೨೩೨

† ಕೃತಘ್ನ

ಮುಂದೆ ನನ್ನ ಮಗ ಟೀಪೂಸುಲ್ತಾನನೂ ಇದೇ ಮೇರೆಗೆ ನಡೆದುಕೊಂಡರೆ, ಈ ಅಧಿಕಾರವು ಅವನಿಗೆ ಇರುವುದು. ದುಷ್ಟಜನಗಳ ಮಾತುಗಳಿಂದಲೂ, ಅವನ ಕೆಟ್ಟನಡತೆಯಿಂದಲೂ, ಏನಾದರೂ ಹೆಚ್ಚು ಕಡಮೆಯಾಗಿ ನಡೆದರೆ ಅವನು ಕೆಟ್ಟುಹೋಗುವನು. ನೀವುಗಳು ಕಲ್ಲೀಕೋಟೆಗೆ ಹೋಗಿರುವ ನನ್ನ ಮಗನಾದ ಟೀಪೂಸುಲ್ತಾನನನ್ನು ಶೀಘ್ರವಾಗಿ ಕರೆಸಿ, ಈ ವಿವರವನ್ನು ಭಯಪಡದೆ ಅವನಿಗೆ ಹೇಳಿ ಈ ಅಧಿಕಾರದಲ್ಲಿ ಅವನನ್ನು ಕುಳ್ಳಿರಿಸಿ, ಜೀವನವನ್ನು ಮಾಡಿಕೊಂಡು ಹೋಗುವರಾಗಿರಿ" ಎಂದು ರಹಸ್ಯವಾಗಿ ಹೇಳಿ, ಮುಂದೆ ಬಹು ನಿಸ್ತ್ರಾಣವಾಗಲು ೧೭೮೨ನೆಯ ಇಸವಿಗೆ ಸರಿಯಾದ ಶಾ. ಶ. ೧೭೦೪ನೆಯ ಶುಭಕೃತು ಸಂವತ್ಸರದ ಮಾರ್ಗಶಿರ ಶುದ್ಧ ೩ ಶನಿವಾರ ಮಧ್ಯಾಹ್ನ ಆರ್ಕಾಟು ದಂಡಿನಲ್ಲಿ ತೀರಿಹೋದನು.



## ಅಧ್ಯಾಯ ೫ "ಮುಮ್ಮಡಿ ಕೃಷ್ಣರಾಜ ಒಡೆಯರು"

ತನ್ನ ತಂದೆಯಾದ ನವಾಬ್ ಹೈದರಾಲಿಯ ಮರಣ ವಾರ್ತೆಯನ್ನು ಕೇಳಿದೊಡನೆಯೇ ಟೀಪೂಸುಲ್ತಾನನು, ಲೇಶಮಾತ್ರವೂ ಸಾವಕಾಶಮಾಡದೆ ಹೊರಟು ಶ್ರೀರಂಗಪಟ್ಟಣಕ್ಕೆ ಬಂದು, ದೊರೆಗಳವರನ್ನು ಕಂಡು, ಕೋಲಾರಕ್ಕೆ ಕಳುಹಿಸಿದ್ದ ತಮ್ಮ ತಂದೆಯ ಶರೀರವನ್ನು ಪುನಃ ಶ್ರೀರಂಗಪಟ್ಟಣಕ್ಕೆ ತರಿಸಿಕೊಂಡು, ತಮ್ಮ ಜಾತಿ ಸಂಪ್ರದಾಯದಮೇರೆಗೆ ಗೋರಿಯನ್ನು ಮಾಡಿಸಿ, ಫಕೀರರುಗಳಿಗೂ ಬಡಬಗ್ಗರಿಗೂ ಅನ್ನ ವಸ್ತ್ರಾದಿಗಳನ್ನಿತ್ತು,-ಹೀಗೆ ತನ್ನ ಮತಪದ್ಧತಿಯ ಪ್ರಕಾರ ಮೃತನಿಗೆ ಆತ್ಮ ಶಾಂತಿಯ ಕೃತ್ಯಗಳನ್ನು ನೆರವೇರಿಸಿ ತರುವಾಯ ರಾಜಕಾರ್ಯಗಳನ್ನು ಕುರಿತು ಗಮನಿಸತೊಡಗಿದನು. ಪ್ರಾರಂಭದ ಕೆಲಕಾಲ ಟೀಪುವು ವಿಹಿತವಾಗಿ ರಾಜಕಾರ್ಯಗಳನ್ನು ನಡೆಯಿಸುತ್ತಿದ್ದಂತೆಯೇ ಕಂಡುಬರುತ್ತದೆ. ಈ ಕಾಲದಲ್ಲೇ ಖಾಸಾ ಚಾಮರಾಜ ಒಡೆಯರವರ ಸ್ವೀಕೃತ ಜನನಿಯವರಾದ ಲಕ್ಷ್ಮಮ್ಮಣ್ಣಿಯವರ ಅಪ್ಪಣೆಯ ಮೇರೆಗೆ ದೊರೆಗಳಿಗೆ ಎರಡು ವಿವಾಹಗ

ಳನ್ನು ಮಾಡಿಸಿದರು. ಎರಡನೆಯ ಪತ್ನಿಯವರಾದ ಕೆಂಪದೇವಾಜಮ್ಮಣ್ಣಿಯವರು, ಮುಂದೆ ಕಾಲಕ್ರಮದಲ್ಲಿ ಪುತ್ರನನ್ನು ಪಡೆದು, ಶಿಶುವಿನೊಂದಿಗೆ ತೀರಿಹೋಗಲು, ದೊರೆಗಳು ಪರಿಜನ ಪುರಜನರ ಮತ್ತು ಆಪ್ತ ಅಧಿಕಾರಿಗಳ ಸಲಹೆಯನ್ನು ಅನುಸರಿಸಿ ಪಂಚ ಕಲ್ಯಾಣವನ್ನು ಮಾಡಿಕೊಂಡು ಸುಖವಾಗಿದ್ದರು.

ಹೀಗೆ ಕೆಲವು ದಿನಗಳ ರಾಜ್ಯಾಪತ್ಯವು ನಡೆದಮೇಲೆ, ಟೀಪೂಸುಲ್ತಾನನ ಗುಣ ನಡತೆಗಳು ಬದಲಾಯಿಸಿದುವು. ಆ ಕಾಲದಲ್ಲಿ ಆತನ ನಡತೆಯು ಹೇಗಿತ್ತೆಂಬುದನ್ನು ಶ್ರೀಮನ್ಮಹಾರಾಜರವರ ವಂಶಾವಳಿ ಎಂಬ ಗ್ರಂಥವು ಹೀಗೆ ವರ್ಣಿಸುತ್ತದೆ. (ಪುಟ ೨೩೯)—"ಕೆಲವು ದಿವಸದಮೇಲೆ (ಟಿಪ್ಪುವು) ತನ್ನ ತಂದೆ ಹೇಳಿದ್ದ ಕೀರ್ತಿಯನ್ನುಂಟುಮಾಡತಕ್ಕ ಮಾತುಗಳನ್ನೆಲ್ಲ ಮರೆತು, ತಾನು ಮುಂದೆ ಕೆಟ್ಟುಹೋಗತಕ್ಕ ಬಗೆಯನ್ನು ತಿಳಿದುಕೊಳ್ಳದೆ, ಯುಕ್ತಾಯುಕ್ತ ವಿಚಾರವನ್ನು ಮಾಡದೆ, ಐಶ್ವರ್ಯಗಳಿಂದ ಮತ್ತನಾಗಿ, ದುರ್ಜನರ ದುರಾಲೋಚನೆಗೆ ಒಳಗಾಗಿ, ಸಜ್ಜನರನ್ನು ಬಾಧೆಪಡಿಸಿ, ವರ್ಣಾಶ್ರಮ ಧರ್ಮಗಳನ್ನು ಕೆಡಿಸುತ್ತ, ಉತ್ತಮರಾದ ಸಕಲ ಜಾತಿ ಜನರುಗಳನ್ನೂ, ತನ್ನ ಜಾತಿಗೆ ಸೇರಿಸಿಕೊಳ್ಳಬೇಕೆಂದು, ಕೆಲವು ಜನಗಳನ್ನು ಚೇಲಿಯವರನ್ನಾಗಿ ಮಾಡಿಕೊಂಡು, ದೇವಾದಾಯ, ಬ್ರಹ್ಮಾದಾಯ, ಸೀಮೆಗಳಲ್ಲಿರುವ ದೇವರುಗಳ ವಸ್ತ್ರಾಭರಣಗಳನ್ನು ತೆಗೆದುಕೊಂಡು, ಗುಡಿ ಗೋಪುರ ತಟಾಕಾರಾಮ ಕಟ್ಟೆ ಕಾಲುವೆ ಸೇತುವೆ ಸೋಪಾನ ಮುಂತಾದ ಅನೇಕ ಧರ್ಮಕಾರ್ಯಗಳನ್ನು ನಾಶಮಾಡಿದನು. ದುಷ್ಟರಾದ ತನ್ನ ಜಾತಿಯ ಜನರಿಗೇ ಪ್ರಾಬಲ್ಯವನ್ನು ಕೊಟ್ಟು, ಅರಸುಗಳು ಮುಂತಾದ ಉತ್ತಮ ವರ್ಣಾಶ್ರಮ ಜನರುಗಳ ಗ್ರಾಮ ಭೂಮಿ ಸಂಬಳ ಮೊದಲಾದ ಜೀವನಗಳನ್ನು ತಪ್ಪಿಸಿ ದೇಶಭ್ರಷ್ಟರನ್ನಾಗಿ ಮಾಡಿದನು. ತನ್ನಲ್ಲಿ ಅಧಿಕಾರ ಮಾಡುತ್ತಲಿರುವ ಜನರುಗಳ ಅಪರಾಧಾನುಗಣವಾಗಿ ಶಿಕ್ಷೆಯನ್ನು ಮಾಡಿಸದೆ, ಅಧಿಕವಾಗಿ ಅವರುಗಳಿಗೆ ಅಂಗಭಂಗಗಳನ್ನೂ, ಪ್ರಾಣಾಂತ ಶಿಕ್ಷೆಗಳನ್ನೂ ಮಾಡಿಸುತ್ತಿದ್ದನು. ಹೀಗೆ ದುಷ್ಟ ಜನಗಳನ್ನು ಪ್ರಾಬಲ್ಯಕ್ಕೆ ತಂದು, ಸಜ್ಜನರಿಗೆ ಅನೇಕ ಬಾಧೆಗಳನ್ನುಂಟುಮಾಡಿ, ದೊರೆಗಳವರ ಸಿಂಹಾಸನದಂತೆ ಅನೇಕ ನವರತ್ನಗಳಿಂದ ವ್ಯಾಘ್ರಪೀಠವನ್ನು ಮಾಡಿಸಿ, ಅದರಮೇಲೆ ಕುಳಿ

ತುಕೊಂಡು, ತಾನೇ ಬಾದಷಾಹನೆನಿಸಿಕೊಳ್ಳಬೇಕೆಂಬ ಕುತೂಹಲದಿಂದ ಇರುತ್ತಿದ್ದನು."

ಖಾಸಾ ಚಾಮರಾಜ ಒಡೆಯರು, ಈತನ ದುಶ್ಚರಿತ್ರೆಯನ್ನೂ ಪ್ರಜಾ ಕ್ಷೋಭೆಯನ್ನೂ ಕೇಳಿ, ಮಹದ್ವ್ಯಸನಾಕ್ರಾಂತರಾಗಿ, ತಮ್ಮ ರಾಜ್ಯಕ್ಕೆ ದಿಕ್ಕಾಗಿರುವಂತಹ ದೀರ್ಘಾಯುರಾರೋಗ್ಯವುಳ್ಳ ಪುತ್ರರತ್ನವನ್ನು ಕರುಣಿಸಬೇಕೆಂದು ನಂಜನಗೂಡಿನ ಶ್ರೀಕಂಠೇಶ್ವರಸ್ವಾಮಿಯನ್ನು ಆರಾಧಿಸಿ ಕೋಟಿ ಪಂಚಾಕ್ಷರೀ ಜಪ ಹೋಮ ತರ್ಪಣಾದಿ ಕಾರ್ಯಗಳನ್ನು ನಡೆಸಿದರು. ಈ ಕಾರ್ಯಗಳಲ್ಲೆಲ್ಲಾ ನಮ್ಮ ಕಥಾನಾಯಿಕೆಯವರು ಸೂತ್ರಧಾರಿಗಳಂತಿದ್ದು ಸರ್ವಕಾರ್ಯಗಳಲ್ಲೂ ದೊರೆಗಳವರಿಗೆ ಮಾರ್ಗದರ್ಶಕರಾಗಿದ್ದು ಗೃಹಕೃತ್ಯದ ಸಕಲ ಕಾರ್ಯಗಳನ್ನೂ ನಿರ್ವಹಿಸುತ್ತಿದ್ದರು. ಮುಂದೆ ಯುಕ್ತಕಾಲದಲ್ಲಿ ರಾಜಪತ್ನಿ ಕೆಂಪನಂಜಮ್ಮಣ್ಣಿಯವರು ಗರ್ಭಧಾರಣೆ ಮಾಡಿ ನವಮಾಸ ಕಳೆಯಲು ಪುರುಷ ಶಿಶುವನ್ನು ಪ್ರಸವಿಸಿದರು. ಈ ಶಿಶುವಿಗೆ ನಂಜರಾಜ ಒಡೆಯರೆಂದು ನಾಮಕರಣ ಮಾಡಿದರು. ಇವರೇ ಮುಂದೆ ಮುಮ್ಮಡಿ ಕೃಷ್ಣರಾಜ ಒಡೆಯರೆಂದು ಪ್ರಸಿದ್ಧರಾದವರು.

ಸರ್ವಾಧಿಕಾರಿ ಟೀಪೂಸುಲ್ತಾನನ ಪ್ರಾಬಲ್ಯವು ದಿನದಿನಕ್ಕೆ ಹೆಚ್ಚುತ್ತಾ ಹೋಯಿತು. ಮೇಲೆಹೇಳಿದಂತೆ, ಈತನು ವ್ಯಾಘ್ರಾಸನವನ್ನು ಮಾಡಿಸಿಕೊಂಡು ತಾನೇ ನವಾಬನೆಂದು ಹೇಳಿಸಿಕೊಳ್ಳಬೇಕೆಂಬ ಹವಣಿಕೆಯಲ್ಲಿದ್ದನು. ಆತನ ಈ ಆಶಯಕ್ಕೆ ಆರ್ಷೇಯ ರಾಜವಂಶವು ವಿಘ್ನಕಾರಿಯಾಗಿದ್ದಿತೆಂದು ಪ್ರತ್ಯೇಕ ಹೇಳಬೇಕಾದುದಿಲ್ಲವಷ್ಟೆ! ಅದನ್ನು ಎಷ್ಟು ಶೀಘ್ರವಾಗಿ ನಿರ್ನಾಮಗೊಳಿಸಿದರೆ, ತನ್ನ ಮನೋಭೀಷ್ಟವು ಅಷ್ಟು ಶೀಘ್ರವಾಗಿ ನೆರವೇರಲಿರುವುದೆಂಬುದು ಅವನಿಗೆ ಸ್ಪಷ್ಟವಾಯಿತು. ಈ ಮಧ್ಯೆ ಖಾಸಾ ಚಾಮರಾಜ ಒಡೆಯರಿಗೆ ಪುತ್ರಸಂತಾನ ಪ್ರಾಪ್ತಿಯಾದುದು ಅವನಿಗೆ ಶಿರೋವೇದನೆಯನ್ನುಂಟುಮಾಡಿತೆಂಬುದಕ್ಕೆ ಸಂದೇಹವಿಲ್ಲ. ರಾಜವಂಶವು ಪ್ರಬಲಿಸಿದಷ್ಟೂ, ತನ್ನ ಅಧಿಕಾರದ ಸ್ಥಿರತ್ವಕ್ಕೆ ಭಂಗವುಂಟಾಗುವುದೆಂಬುದು ಅವನಿಗೆ ಸ್ಪಷ್ಟವಾಯಿತು. ಅವರನ್ನು ಎಷ್ಟು ಶೀಘ್ರವಾಗಿ ನಾಶಗೊಳಿಸಿದರೆ, ತಾನು ಏಕಾಧಿಪತ್ಯಮಾಡಲು ಮಧ್ಯದಲ್ಲಿನ ಕಂಟಕವು ತೊಲಗಿ, ಮಾರ್ಗವು ಅಷ್ಟು ಸುಗಮವಾಗುವುದೆಂದು ಯೋಚಿಸಿಕೊಂಡಿದ್ದನು.

ಆವನು ಹೀಗೆ ಯೋಚಿಸಿಕೊಂಡಿದ್ದ ಕಾಲದಲ್ಲೇ, ಇತ್ತ ರಾಜವಂಶದಲ್ಲೂ ಒಂದು ಅಗಾಧ ನಷ್ಟ ಸಂಭವಿಸಿತು. ಖಾಸಾ ಚಾಮರಾಜ ಒಡೆಯರು, ಕ್ರಿ. ಶ. ೧೭೯೬ನೆಯ ಸಂವತ್ಸರದಲ್ಲಿ ಸ್ವರ್ಗಸ್ಥರಾದರು. ಇದು ಅವನ ಕಾರ್ಯಕ್ಕೆ ಅತಿಶಯ ಅನುಕೂಲತೆಯನ್ನುಂಟುಮಾಡಿತೆಂದು ಹೇಳಬೇಕಾದುದೇನು! ಖಾಸಾ ಚಾಮರಾಜ ಒಡೆಯರ ಮರಣದಿಂದ, ಇನ್ನು ರಾಜವಂಶದಲ್ಲಿ ಮೂರು ನಾಲ್ಕು ಮಂದಿ ಸ್ತ್ರೀಯರೂ, ಎರಡು ವರ್ಷದ ಒಂದು ಮಗುವೂ ಮಾತ್ರ ಉಳಿದಂತಾಯಿತು. ದಕ್ಷರಾದ ಪುರುಷರು ರಾಜ್ಯಾಧಿಪತ್ಯಮಾಡುತ್ತಿದ್ದ ಕಾಲದಲ್ಲೇ-ತುಟಿವಿಸಾರದ ಹಲ್ಲಿನಂತೆ-ಪ ಬಲಿಸಿ ಸರ್ವಾಧಿಕಾರಮಾಡಿ, ಅವರನ್ನು ನಾಮಮಾತ್ರ ರಾಜರನ್ನಾಗಿಸಿದ್ದ ಧೂರ್ತ ಟಿಪ್ಪೂಸುಲ್ತಾನನು ಈಗ ಅವರ ಮರಣದಿಂದ ಕೇವಲ ಅನಾಥರಾದ ರಾಜವಂಶೀಕರನ್ನು ಹೇಗೆ ಕಾಣತೊಡಗಿದನು, ಹೇಗೆ ನೋಡಿಕೊಳ್ಳುತ್ತಿದ್ದನು, ಅವರ ಅನುಕೂಲತೆಗಳಿಗೆ ಹೇಗೆ ಸಹಾಯಕನಾಗಿದ್ದನು, ಎಂಬ ಸಂಗತಿಗಳನ್ನು ಹೇಳಬೇಕಾದುದೇನು! ಆ ಸಂದರ್ಭದಲ್ಲಿ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು, ಮದರಾಸಿನಲ್ಲಿದ್ದ ತಮ್ಮ ಕಡೆಯ ವಕೀಲರಾದ ತಿರುಮಲರಾಯರಿಗೆ ಬರೆದಿದ್ದ ಒಂದು ಪತ್ರದಿಂದ, ಆಗ ರಾಜಕುಟುಂಬದವರು, ಎಂತಹ ದುರಂತ ಸಂಕಟಕ್ಕೆ ಒಳಪಟ್ಟಿದ್ದರೆಂಬುದು ಸ್ಪಷ್ಟವಾಗುತ್ತದೆ. ಆ ಪತ್ರವನ್ನು 'ಅಬಲಾಸಚ್ಚರಿತ್ರ ರತ್ನಮಾಲಾ' ಎಂಬ ಆಂಧ್ರ ಗ್ರಂಥದಿಂದ ತರ್ಜುಮೆಗೊಳಿಸಿ, ಇಲ್ಲಿ ಯಥಾವತ್ತಾಗಿ ಕೊಡಲೆಳಸುತ್ತೇವೆ.

''ನಾವು ನಮ್ಮ ದೀನಾವಸ್ಥೆಯನ್ನು ಕುರಿತು, ಈವರೆಗೆ ಹಲವುವೇಳೆ ನಿಮಗೆ ತಿಳಿಸಿದ್ದೇವೆ. ನೀವು ಮೈಸೂರನ್ನು ಬಿಟ್ಟು ನಡೆದು ಈಗ್ಗೆ ಇಪ್ಪತ್ತೆರಡು ವರ್ಷಗಳಾಗುತ್ತಿವೆ. ನಾವು ಪ್ರತಿದಿನವೂ, ಈ ಯವನ ರಾಕ್ಷಸನು ಕೊಡುತ್ತಿರುವ ಅನೇಕ ವಿಧವಾದ ಬಾಧೆಗಳನ್ನು ಅನುಭವಿಸುತ್ತಲೇ ಇದ್ದೇವೆ. ಅವನು ಸ್ಫೋಟಕ ರೋಗದ ಕಾರಣವನ್ನು ಕಲ್ಪಿಸಿ, ಚಾಮರಾಜ ಒಡೆಯರನ್ನು ಗುಪ್ತವಾಗಿ ಕೊಲ್ಲಿಸಿದನು. ನಮಗೆ ಶರೀರಾಚ್ಛಾದನೆಗೆ ಒಂದು ವಸ್ತ್ರವೂ ದೊರಕದಂತೆ ಮಾಡಿಟ್ಟು ಅಗಾಧ ಬಾಧೆಪಡಿಸುತ್ತಿದ್ದಾನೆ. ನಮ್ಮನ್ನು ರಾಜಮಂದಿರದಲ್ಲಿ ಇರಗೊಡಿಸದೆ ಅಲ್ಲಿಂದ ಹೊರಕ್ಕೆ ಹೊರಡಿಸಿದನು. ನಾವು ಅಲ್ಲಿಂದ ಹೊರಟು ಬರುವಾಗ ಅರಮನೆಯ

ಕಾವಲಿನವರು ನಮ್ಮಲ್ಲಿ ಬೆಲೆಯುಳ್ಳ ಪದಾರ್ಥಗಳಿವೆಯೋ ಎಂಬ ಬಗ್ಗೆ ನಮ್ಮನ್ನು ಪರೀಕ್ಷಿಸಿ ಹೊರಕ್ಕೆ ಬಿಡುವಂತೆ ಆಜ್ಞಾಪಿಸಿ, ಹೀಗೆ ಅಗಾಧ ಅಪಮಾನಕ್ಕೆ ಗುರಿಮಾಡಿದನು. ಮಾತ್ರವಲ್ಲ-ಅವರು ನಮ್ಮ ಮೈಮೇಲಿನ ನಗಗಳನ್ನೆಲ್ಲ ಸುಲಿದುಕೊಂಡು, ಉಟ್ಟುಕೊಳ್ಳುವುದಕ್ಕೆ ಒಂದು ಮೈಲಿಗೆಯ ವಸ್ತ್ರವನ್ನು ಕೊಟ್ಟರು. ನಮಗೆ ವಾಸಕ್ಕೆ ಕಾಂತಿರಾವು ಇವರ ಹಳೆಯ ಮನೆಯಲ್ಲಿ ಒಂದೆಡೆ ಸ್ವಲ್ಪ ಸ್ಥಳಕೊಟ್ಟಿದ್ದಾರೆ. ನಮ್ಮ ಸುತ್ತಲೂ ಮುಸಲ್ಮಾನ ಸಿಪಾಯಿಗಳ ಪಹರೆಯಿದೆ. ನಮ್ಮ ದಾಸಿಯರಾಗಿದ್ದ ಅವ್ವೇರುಗಳನ್ನೆಲ್ಲ ಮಹಮ್ಮದೀಯ ಮತಸ್ಥರನ್ನಾಗಿ ಮಾಡಿಸಿ, ಅವರನ್ನು ಅತಿ ನಿಕೃಷ್ಟವಾದ ಕಾರ್ಯಗಳಿಗೆ ನಿಯಮಿಸುತ್ತಿದ್ದಾನೆ. ಮತ್ತೆ ಕೆಲವರನ್ನು ಅತಿ ದೂಷ್ಯವಾದ ವೇಶ್ಯಾವೃತ್ತಿಯನ್ನು ಅವಲಂಬಿಸುವಂತೆ ನಿರ್ಬಂಧಗೊಳಿಸಿದ್ದಾನೆ. ಮಿಕ್ಕ ಕೆಲವರಿಂದ ಶೌಕಚತುಷಗಳನ್ನು ತೊಳೆಸುತ್ತಿದ್ದಾನೆ. ಪ್ರತಿದಿನವೂ ನಮಗೆ ಭಿಕ್ಷದವರಿಗೆ ಕೊಟ್ಟಂತೆ, ಭತ್ತೆಯು ಕೊಡಲ್ಪಡುತ್ತಿದೆ. ನಮಗೆ ಅಡಿಗೆಗೆ ಹಿತ್ತಾಳೆ ತಾಮ್ರದ ಪಾತ್ರೆಗಳಿಗೆ ಕೂಡ ಲಭ್ಯವಿಲ್ಲ-ನಾವು ಗಡಿಗೆಗಳಲ್ಲಿ ಅಡಿಗೆಮಾಡಿಕೊಂಡು, ಎಲೆಗಳಲ್ಲಿ ಊಟಮಾಡುತ್ತಿದ್ದೇವೆ ಟಿಪ್ಪೂವು ಶೀಘ್ರದಲ್ಲೇ ನಮ್ಮ ಪ್ರಾಣಹರಣಮಾಡುತ್ತೇನೆಂದು ಪ್ರತಿಜ್ಞೆಮಾಡಿದ್ದಾನಂತೆ! ನಮ್ಮ ಪ್ರಾಣಗಳನ್ನು ಎಂದು ಆಹುತಿಗೊಳ್ಳುವನೋ ತಿಳಿಯದು. ಹೀಗೆ ಅದೃಷ್ಟಹೀನರಾದ ನಮಗೆ ಸಹಾಯಮಾಡಲು ಪ್ರಯತ್ನಿಸಿ, ನೀವು ಅಗಾಧ ಕಷ್ಟಗಳಿಗೆ ಒಳಪಟ್ಟಿರಿ. ನಮಗೋಸ್ಕರವಾಗಿ ಇಂಗ್ಲೀಷಿನವರೊಂದಿಗೆ ಸ್ನೇಹವನ್ನು ಸಂಪಾದಿಸಲಿಚ್ಛಿಸಿ, ಜಾರ್ಜ ಸಲ್ಲಿವನ್ ದೊರೆಯೊಂದಿಗೂ, ಇತರ ಸರದಾರರೊಂದಿಗೂ ಸಂಭಾಷಣೆ ನಡೆಸಿ, ಅವರು ನಮಗೆ ಸಹಾಯಕರಾಗುವಂತೆ ಪ್ರಯತ್ನಮಾಡಿದಿರಿ. ಇಷ್ಟುಮಾತ್ರವಲ್ಲ, ನಮಗಾಗಿ ನಿಮ್ಮ ಮಿತ್ರರನ್ನೂ ಬಾಂಧವರನ್ನೂ ಈ ಯವನ ರಾಕ್ಷಸನಿಗೆ ಆಹುತಿಯಾಗಿ ಅರ್ಪಿಸಿದಿರಿ. ಹೀಗೆ ನಿಮಗೆ ಪ್ರಾಪ್ತವಾದ ಸಂಕಟ ಪರಂಪರೆಗಳನ್ನು ಯೋಚಿಸಿಕೊಂಡರೇ ನನ್ನ ಎದೆ ಬಿರಿದು ಹೋಗುತ್ತದೆ. ಇಷ್ಟುಬಗೆಯ ಕಷ್ಟನಷ್ಟಗಳು ಪ್ರಾಪ್ತವಾದರೂ ಇನ್ನೂ ನಮ್ಮ ಪ್ರಯತ್ನವು ಸಫಲವಾಗಿ ನಮ್ಮ ರಾಜ್ಯಕ್ಕೆ ಸ್ವಾತಂತ್ರ್ಯವು ಲಭಿಸದಿರುವುದು ಅಧಿಕ ಸಂತಾಪಕರವಾಗಿದೆ. ಇನ್ನು ಕೆಲವು ದಿನಗಳಲ್ಲೇ ನಾವು

ನಾಶವಾಗುವೆವೆಂಬುದಕ್ಕೆ ಸಂದೇಹವುಳಿದಿಲ್ಲ. ಟಿಪ್ಪುವಿನ ಬಳಿ ಈಗೊಬ್ಬ ಫ್ರೆಂಚ್ ವಕೀಲನು ಬಂದಿದ್ದಾನೆ. ಅವನು, ನಮ್ಮನ್ನು (ರಾಣೀ ಲಕ್ಷ್ಮಮ್ಮಣ್ಣಿಯವರನ್ನು) ಕೊಲ್ಲದಿದ್ದರೆ, ಸದ್ಯದಲ್ಲೇ ಟಿಪ್ಪುವಿಗೆ ನಾಶ ಸಂಭವಿಸುವುದೆಂದು ಅವರಿಗೆ ಉಪದೇಶಮಾಡಿದ್ದಾನಂತೆ. ಆದರಮೇಲೆ ನನ್ನನ್ನು ಶೀಘ್ರವಾಗಿಯೇ ಕೊಲ್ಲಬೇಕೆಂದು ನಿಶ್ಚಯಿಸಿದ್ದಾರೆಯಂತೆ! ಟಿಪ್ಪುವಿಗೂ ಫ್ರೆಂಚರಿಗೂ ನಡೆದ ಸಂಧಿ ಕರಾರಿನ ನಕಲೊಂದನ್ನು ಇದರೊಂದಿಗೆ ಕಳುಹಿಸಿದ್ದೇನೆ. ನೀವು ಇದನ್ನು ತಪ್ಪದೆ, ಇಂಗ್ಲಿಷ್ ಗೌರ್ನರ್‌ರವರಿಗೆ ತೋರಿಸಬೇಕು. ಫ್ರೆಂಚರು ಇಲ್ಲಿಗೆ ಬಂದು ಠಾಣ್ಯ ಹಾಕುವುದಕ್ಕೆ ಮುಂಚಿತವಾಗಿಯೇ ಇಂಗ್ಲೀಷರು ತಮ್ಮ ಸೈನ್ಯವನ್ನು ಕಳುಹಿಸಿ ಈ ಯುವನ ರಾಕ್ಷಸನ ಗರ್ವವನ್ನು ಅಡಗಿಸದಿದ್ದರೆ, ಮುಂದೆ ಕಂಪೆನಿಯವರ ರಾಜ್ಯಕ್ಕೇ ಅಗಾಧ ಭಯವು ಪ್ರಾಪ್ತವಾಗಬಹುದು. ಆಗ ಎಲ್ಲರ ಪ್ರಾಣಕ್ಕೂ ಅಪಾಯವುಂಟಾಗದಿರದು. ಈವರೆಗೆ ಎರಡು ಮೂರು ಸಾರಿ ಮಾಡಿದಂತೆ, ಈ ಬಾರಿಯೂ ಇಂಗ್ಲೀಷರು ವಿಳಂಬಮಾಡುವರಾದರೆ, ಫ್ರೆಂಚರು ಟಿಪ್ಪುವಿನೊಂದಿಗೆ ಕಲೆತು ಭಯಂಕರವಾದ ಅಗ್ನಿಯು ಪ್ರಚಂಡ ಮಾರುತನೊಂದಿಗೆ ಬೆರೆತಂತೆ ಸಕಲ ದೇಶಗಳನ್ನೂ ಹಾಳುಮಾಡಿ ಪ್ರಜಾಸಂಹಾರಮಾಡಲು ಹಿಂಜರಿಯರು. ಇಂಗ್ಲೀಷರಿಗೆ ನಮ್ಮ ವಿಜ್ಞಾಪನೆಯನ್ನು ಕುರಿತೂ, ನಮ್ಮ ಪ್ರಾಣರಕ್ಷಣೆಯನ್ನು ಕುರಿತೂ ಲಕ್ಷ್ಯವುಂಟಾಗದಿದ್ದರೆ ಹೋಗಲಿ, ಅವರ ರಾಜ್ಯದ ಸುರಕ್ಷಣೆಗಾಗಿಯಾದರೂ ಅತಿ ತ್ವರಿತವಾಗಿ ಸೈನ್ಯಗಳನ್ನು ಕಳುಹಿಸಬೇಕೆಂದು ನೀವು ಅವರೊಂದಿಗೆ ಖಂಡಿತವಾಗಿ ಹೇಳಿರಿ. ಅವರೆಗೆ ಹೇಗಾದರೂ ಮಾಡಿ ನಾವು ಪ್ರಾಣಗಳನ್ನು ಹಿಡಿದುಕೊಂಡಿರುವೆವು.

"ರಾಜ್ಯವು ನಮಗೆ ದೊರಕಿದರೆ, ಇಂಗ್ಲೀಷರಿಗೆ ಒಂದುಕೋಟಿರೂಪಾಯಿಗಳನ್ನು ಕೊಡಲೊಪ್ಪುತ್ತೇವೆ. ನೀವು ಸಲ್ಲಿವರ್ ದೊರೆಯೊಂದಿಗಾದರೂ ಕರಾರು ನಾಮೆಯನ್ನು ಮಾಡಿಕೊಳ್ಳಿರಿ. ಸಲ್ಲಿವರ್ ಮೊದಲಾದ ಸರದಾರರಿಗೆಲ್ಲರಿಗೂ, ವಾಸಯೋಗ್ಯವಾಗಿ ಅಗ್ರಹಾರಗಳನ್ನು ಕೊಡುತ್ತೇವೆ. ಈ ಯುವನ ರಾಜನು ಮಹಾಕ್ರೂರನಾಗಿರುವುದರಿಂದ ಪ್ರಜೆಗಳಿಗೆ ಅಧಿಕ ಬಾಧೆಯುಂಟಾಗುತ್ತಿದೆ. ಆದ್ದರಿಂದ ಸೇನೆಗಳಲ್ಲಿರುವ ಸೈನಿಕರೆಲ್ಲರೂ ಅವನಿಗೆ ವಿರೋಧಿಗಳಾಗಿಯೇ ಇದ್ದಾರೆ. ಇಂತಹ ಸಂದರ್ಭದಲ್ಲಿ,

ಇಂಗ್ಲೀಷು ಸೈನ್ಯಕ್ಕೆ ಇಲ್ಲಿನ ಸೈನ್ಯದಿಂದ ಅಧಿಕ ಸಹಾಯವೊದಗಬಹುದು. ಇಲ್ಲಿರುವವರೆಲ್ಲರೂ ಅವನ ನಾಶವನ್ನೇ ಕೋರುತ್ತಿದ್ದಾರೆ. ಇಂಗ್ಲೀಷು ಸೈನ್ಯವು ಯಾವಮಾರ್ಗದಿಂದ ಬಂದರೂ ಅವರಿಗೆ ಭೋಜನಾದಿ ಸಾಮಾಗ್ರಿಗಳಿಗೆ ಯಾವ ಅಟಂಕವೂ ಇಲ್ಲದೆ, ಅನುಕೂಲದೊರಕುವುದು. ಆದುದರಿಂದ ನೀವು ನಿಮ್ಮ ಸಾಮರ್ಥ್ಯವನ್ನೆಲ್ಲ ಖರ್ಚುಮಾಡಿ ಯುದ್ಧ ಪ್ರಯತ್ನ ಮಾಡುವಿರಾದರೆ, ಶ್ರೀರಂಗನಾಥನು ತಪ್ಪದೆ ನಿಮಗೆ ಸಹಾಯಮಾಡುವನೆಂದು ನಂಬುತ್ತೇನೆ.''

ಆ ಕಾಲದಲ್ಲಿ ಮೈಸೂರು ರಾಜವಂಶದವರ ಸ್ಥಿತಿಯೂ, ರಾಜ್ಯದ ಸ್ಥಿತಿಯೂ ಹೇಗಿದ್ದುವೆಂಬುದು ಈ ಪತ್ರದಿಂದ ಸ್ಪಷ್ಟವಾಗಿ ತಿಳಿಯ ಬರುತ್ತದೆಯಲ್ಲವೆ! ಅಂತಹ ಭಯಂಕರ ಸಮಯದಲ್ಲಿ ಯವನ ವೀರನಾದ ಟಿಪ್ಪುವಿಗೆ ವಿರುದ್ಧವಾಗಿ ಪ್ರಯತ್ನ ನಡೆಸುವುದೆಂದರೆ ಅದೆಷ್ಟು ಪ್ರಾಣಾಪಾಯಕರವಾದುದೆಂಬುದನ್ನು, ವಾಚಕ ಮಹಾಶಯರು ಯೋಚಿಸಬಹುದು. ಆದರೂ, ಅಂತಹ ಮಹಾಸಂಕಟ ಸಮಯದಲ್ಲೂ ಎದೆಗೆಡದೆ, ನಿಸ್ತರಂಗ ಸಮುದ್ರದಂತೆ ಮನಶ್ಶಾಂತಿಯನ್ನು ತಾಳಿಕೊಂಡು, ಅಚಲ ಪರ್ವತದಂತೆ ಧೈರ್ಯವನ್ನು ಅವಲಂಬಿಸಿ, ಕಾರ್ಯಪ್ರಯತ್ನ ನಡೆಸಿಯೇ ಇದ್ದರೆಂಬುವನ್ನು ತಿಳಿದು ಎಂತಹ ಧೀರರೂ, ಆಶ್ಚರ್ಯಪಡಬೇಕಾಗಿದೆ. ಅಸಮಾನ ಸ್ತ್ರೀ ಧೈರ್ಯದ ಪ್ರತ್ಯಕ್ಷ ಉದಾಹರಣೆಯಾದ ಈ ಮಹಾರಾಣಿಯವರ ಈ ಕಾರ್ಯವು ಚರಿತ್ರಕಾರರಿಂದ ಸುವರ್ಣಾಕ್ಷರಗಳಲ್ಲಿ ವರ್ಣಿಸಿ ಬರೆದಿಡಲ್ಪಡಲು ಅರ್ಹವಾಗಿದೆ

ಮಹಾರಾಣಿಯವರು ಬರೆಸಿ ಕಳುಹಿಸಿದ್ದ ಪತ್ರದ ಸಂಗತಿಯು, ಇಂಗ್ಲೀಷ್ ಗವರ್ನರಿಗೆ ಮನವರಿಕೆ ಮಾಡಲ್ಪಟ್ಟಿತು. ದಿನದಿನಕ್ಕೆ ಹೆಚ್ಚಿ ಹೋಗುತ್ತಿದ್ದ ಟಿಪ್ಪುವನ್ನು ಇನ್ನೂ ಉದಾಸೀನಭಾವದಿಂದ ಬಿಟ್ಟರುವುದು ತಮಗೇ ಅಪಾಯ ಹೇತುವೆಂಬುದು ಅವರಿಗೂ ಗೋಚರವಾಯಿತು. ಆದುದರಿಂದ ಇನ್ನು ಅವನೊಂದಿಗೆ ಯುದ್ಧಮಾಡಬೇಕಾದುದೇ ಸರಿಯೆಂದು ಕಲ್ಕತ್ತೆಯಲ್ಲಿನ ಗವರ್ನರು ಜನರಲ್ ಸಾಹೇಬನು ನಿರ್ಧರಮಾಡಿದನು. ಒಡನೆ ಯುದ್ಧ ವಿದ್ಯಾ ವಿಶಾರದರಾದ ಜನರಲ್ ಹ್ಯಾರಿಸ್, ವೆಲ್ಲೆಸ್ಲಿ ಮುಂತಾದ ಸರದಾರರುಗಳನ್ನು ಸೈನ್ಯಸಮೇತ ಕಳುಹಿಸಿದನು. ಅವರು ಪೂನಾ

ಪೇಶ್ವೆಯೊಂದಿಗೂ ಹೈದರಾಬಾದಿನ ನಿಜಾಮನೊಂದಿಗೂ ಯೋಗ್ಯಕರಾರುಗಳನ್ನು ಮಾಡಿಕೊಂಡು ೧೭೯೯ನೆಯ ಇಸವಿಯಲ್ಲಿ ಶ್ರೀರಂಗಪಟ್ಟಣದ ಮೇಲೆ ದಂಡೆತ್ತಿ ಬಂದರು. ತರುವಾಯ ಶ್ರೀರಂಗಪಟ್ಟಣದಲ್ಲಿ ಮೈಸೂರು ಸೈನ್ಯಕ್ಕೂ ಇಂಗ್ಲೀಷು ಸೈನ್ಯಕ್ಕೂ ನಡೆದ ಘೋರಸಂಗ್ರಾಮ ವಿಚಾರವು ಐತಿಹಾಸಕ ಸುಪ್ರಸಿದ್ಧ ವಿಷಯವಾದುದರಿಂದ ಆ ಸಂಗತಿಯನ್ನು ಇಲ್ಲಿ ವರ್ಣಿಸಬೇಕಾದುದು ಅನಾವಶ್ಯಕವು. ಆ ಘೋರಯುದ್ಧದ ಪರಿಣಾಮವಾಗಿ ೧೭೯೯ನೆಯ ವರ್ಷದ ಮೇ ತಿಂಗಳು ೪ನೇ ತಾರೀಖಿನಲ್ಲಿ ಟಿಪ್ಪುಸುಲ್ತಾನನು ಹತನಾಗಲು ಮೈಸೂರು ರಾಜಸಿಂಹಾಸನವು ಬಂಧಮುಕ್ತವಾಯಿತು. ರಾಜವಂಶೀಕರೂ ಶತ್ರುಬಾಧೆಯಿಂದ ಬಿಡಲ್ಪಟ್ಟು ಸ್ವತಂತ್ರರಾದರು.

ಟಿಪ್ಪುಸುಲ್ತಾನನ ಮರಣದೊಂದಿಗೆ ಯುದ್ಧವು ಶಮನವಾಯಿತು. ಸ್ವಾಧೀನವಾದ ರಾಜ್ಯವನ್ನು ಇಂಗ್ಲೀಷರೂ ಮರಾಟಿಯವರೂ ನಿಜಾಮನೂ ಹಂಚಿಕೊಂಡರು. ಹೀಗೆ ವಿಭಾಗ ಮಾಡಿಕೊಳ್ಳುವಾಗ ಪೂರ್ವದ ರಾಜವಂಶದ ಪರವಾಗಿ ತಮಗೆ ಅಧಿಕಸಹಾಯ ಮಾಡಿದ ಮಹಾರಾಣಿ ಲಕ್ಷ್ಮಮ್ಮಣ್ಣಿಯವರನ್ನು ಮರೆಯದೆ ಅವರ ಆಲೋಚನೆಗೆ ಅನುಸಾರವಾಗಿ, ಈಗಿರುವಷ್ಟು ದೇಶವು ರಾಜವಂಶಕ್ಕೆ ಸಲ್ಲುವಂತೆ ಏರ್ಪಡಿಸಿ ವಿಂಗಡಿಸಿಟ್ಟರು. ಲಕ್ಷ್ಮಮ್ಮಣ್ಣಿಯವರೂ ಸಹ ವಯೋವೃದ್ಧರೂ ವಿಚಾರಜ್ಞರೂ ಆದ ಪೂರ್ಣಯ್ಯನೆಂಬ ಮಂತ್ರಿಪುಂಗವರ ಆಲೋಚನೆಯನ್ನು ಕೇಳಿಯೇ ಯಾವಕೆಲಸವನ್ನಾದರೂ ಮಾಡುತ್ತಾ ಕಂಪನಿಯವರ ಸಂಗಡ ಮಾಡಿಕೊಳ್ಳಬೇಕಾದ ಕೌಲು ಕರಾರುಗಳನ್ನೆಲ್ಲ ಮಾಡಿಕೊಂಡರು. ಅಕೆಯ ಆಲೋಚನೆಯನ್ನನುಸರಿಸಿಯೇ ಆಗ ಮೈಸೂರು ರಾಜವಂಶಕ್ಕೆ ಬಂದ ರಾಜ್ಯಭಾಗವನ್ನು ಐದುವಯಸ್ಸಿನ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಒಪ್ಪಿಸಿ ಪಟ್ಟಾಭಿಷೇಕಮಾಡಬೇಕೆಂದು ಜನರಲ್ ಹ್ಯಾರಿಸ್, ವೆಲ್ಲೆಸ್ಲಿ ಮೊದಲಾದ ಇಂಗ್ಲೀಷು ಸರದಾರರು ಒಪ್ಪಿ ಪಟ್ಟಾಭಿಷೇಕಕ್ಕೆ ಬೇಕಾದ ಅನುಕೂಲತೆಗಳನ್ನೆಲ್ಲ ಸಿದ್ಧಪಡಿಸುವಂತೆ ದಿವಾನ್ ಪೂರ್ಣಯ್ಯನವರಿಗೆ ಹೇಳಿದರು. ಪೂರ್ಣಯ್ಯನವರು ಆ ಸಂತೋಷ ವಾರ್ತೆಯನ್ನು ಒಡನೆ ಮಹಾರಾಣಿ ಲಕ್ಷ್ಮಮ್ಮಣ್ಣಿಯರಿಗೆ ತಿಳಿಸಿ ಅವರ ಅಜ್ಞಾನುಸಾರವಾಗ ಧೊರೆಗಳವರನ್ನು

ಶ್ರೀರಂಗ ಪಟ್ಟಣದಿಂದ ಮೈಸೂರು ನಜರುಬಾದು ಎಂಬ ಕೋಟೆಯ ಅರಮನೆಯಲ್ಲಿ ಇಳಿಸಿ ಪಟ್ಟಾಭಿಷೇಕಕ್ಕೋಸ್ಕರ ಆಗಬೇಕಾದ ಸರ್ವಸಾಮಗ್ರಿಗಳನ್ನೂ ಸಿದ್ಧಗೊಳಿಸಿದರು.

ವಿಧ್ಯುಕ್ತವಾಗಿ ನಡೆಯಬೇಕಾದ ಮಂಗಳಸ್ನಾನ ಹವನ ಹೋಮಾದಿ ಶುಭ ಕರ್ಮಗಳೆಲ್ಲವೂ ಕ್ರಮವಾಗಿ ನಡೆಯಲು ಲಕ್ಷ್ಮೀನಾರಾಯಣ ದೇವಸ್ಥಾನದಲ್ಲಿ ಅಲಂಕಾರಮಾಡಿದ್ದ ಭದ್ರಪೀಠದಲ್ಲಿ ಮಹಾರಾಜರು ಮುಹೂರ್ತಮಾಡಿದರು. ಆಗ ಸೇರಿದ್ದ ಅಸಂಖ್ಯಾತ ಜನರೂ ಆರ್ಷೇಯವಾದ ರಾಜವಂಶವು ಹೀಗೆ ಪ್ರವರ್ಧಮಾನವಾಯಿತಲ್ಲಾ ಎಂಬ ಸಂತೋಷದಿಂದ ಆನಂದಬಾಷ್ಪಗಳನ್ನು ಸುರಿಸುತ್ತಾ ಕೈಚಪ್ಪಳೆಗಳಿಂದಲೂ ಕೋಲಾಹಲದಿಂದಲೂ ತಮ್ಮ ವಿಶೇಷ ಸಂತೋಷವನ್ನು ವ್ಯಕ್ತಪಡಿಸಿದರು. ಬ್ರಾಹ್ಮಣರು ಉಚ್ಚಸ್ವರದಿಂದ ಮಾಡುತ್ತಿದ್ದ ವೇದಘೋಷವೂ ಮಂಗಳವಾದ್ಯಗಳರವವೂ ಅಶೇಷ ಪ್ರಜೆಗಳೂ ಮಾಡುತ್ತಿದ್ದ ಜಯಜಯಕಾರವೂ ಕಿವಿಗಳನ್ನು ಕಿವುಡಾಗಿಸುತ್ತಿರಲು, ದಿವ್ಯಸುಮುಹೂರ್ತ ವೇಳೆಯು ಪ್ರಾಪ್ತವಾಯಿತು. ಆಗ ಒಂದು ಪಾರ್ಶ್ವದಲ್ಲಿ ಹೈದರಾಬಾದಿನ ನಿಜಾಮನ ಪ್ರತಿನಿಧಿಯಾಗಿ ಬಂದಿದ್ದ ಮೀರ್ ಆಲಮನೂ ಮತ್ತೊಂದು ಕಡೆ ಚಕ್ರವರ್ತಿಯವರ ಪ್ರತಿನಿಧಿಯಾಗಿ ಬಂದಿದ್ದ ಜನರಲ್ ಹ್ಯಾರಿಸ್ ಸಾಹೇಬನೂ ನಿಂತು ಮಹಾರಾಜರಿಗೆ ಹಸ್ತಲಾಘವ ಕೊಡುತ್ತಾ ಅವರನ್ನು ದಿವ್ಯರತ್ನ ಸಿಂಹಾಸನದ ಮೇಲೆ ಏರಿಸಿ ಕುಳ್ಳಿರಿಸಿದರು. ಖಾಸಾ ಚಾಮರಾಜ ಒಡೆಯರ ಮಕ್ಕಳಾದ ನಂಜರಾಜವಡೆಯರು ಮುಮ್ಮಡಿ ಕೃಷ್ಣರಾಜ ಒಡೆಯರೆಂಬ ನಾಮಧೇಯದಿಂದ ಹೀಗೆ ರಾಜ್ಯಭಿಷೇಕವನ್ನು ಹೊಂದಿ ರತ್ನಸಿಂಹಾಸನಾರೂಢರಾಗಿ ಪ್ರಕಾಶಿಸಿದರು.



# ಉಪಸಂಹಾರ

ಮಹಾಮಾತೃ ಶ್ರೀ ಲಕ್ಷ್ಮಮ್ಮಣ್ಣಿಯವರು ಇಮ್ಮಡಿ ಕೃಷ್ಣರಾಜ ಒಡೆಯರೊಂದಿಗೆ ಪರಿಣೀತರಾದ ತರುವಾಯ ೫೧ ವರ್ಷಕಾಲ ಜೀವಿಸಿ ಇಹಲೋಕ ವ್ಯಾಪಾರ ನಿರತರಾಗಿದ್ದರು. ಆದರೆ ಈ ಐವತ್ತೊಂದು ವರ್ಷಗಳಲ್ಲಿ ರಾಜಭವನದಲ್ಲಿ ಪತಿಯೊಂದಿಗೆ ಸಂಸಾರ ಸುಖವನ್ನನುಭವಿಸಿದುದು ಏಳುವರ್ಷಕಾಲ ಮಾತ್ರ. ಮಿಕ್ಕ ನಾಲ್ವತ್ನಾಲ್ಕು ವರ್ಷಕಾಲವನ್ನೂ ವೈಧವ್ಯಾನುಭವದಲ್ಲೇ ಕಳೆದ ಈಕೆಯು, ಅಗಾಧ ಕಷ್ಟ ತಾಪತ್ರಯಗಳನ್ನೂ ಮನಃಕ್ಲೇಶವನ್ನೂ ಅನುಭವಿಸಿದರು. ರಾಜ್ಯಕ್ಕೆ ಬಾಧ್ಯಸ್ಥರಾದ ಸಪತ್ನೀಪುತ್ರರೀರ್ವರೂ ಬಾಲ್ಯದಲ್ಲೇ ಮೃತರಾಗಲು, ಪರಾಕ್ರಾಂತವಾಗುತ್ತಿದ್ದ ಆರ್ಷೇಯರಾಜ್ಯದ ಬಾಧ್ಯತೆಯನ್ನು ತಮ್ಮ ವಂಶಕ್ಕೇ ದಕ್ಕಿಸಿಕೊಳ್ಳುವ ಕಾರ್ಯದಲ್ಲಿ ಈ ಮಹಾರಾಣಿಯವರು ಪ್ರದರ್ಶಿಸಿದ ಧೈರ್ಯಸಾಹಸ ದೂರಾಲೋಚನೆಗಳು ಪ್ರಶಂಸಾರ್ಹವಾಗಿವೆ.

ಮಹಾರಾಣಿಯವರ ಪ್ರಕೃತಿಯು ಬಹು ಉದಾರವಾದುದು. ಅವರ ಧೈರ್ಯವೂ ಅಪಾರವಾದುದು. ಇದನ್ನು ತಿಳಿಸಲು ಅರಮನೆಯಲ್ಲಿ ಜರುಗಿದ ಒಂದು ಸಂಗತಿಯನ್ನು ಇಲ್ಲಿ ಉದಹರಿಸಬಹುದಾಗಿದೆ. ೧೭೯೬ನೆಯ ಸಂ||ದಲ್ಲಿ ರಾಜಧಾನಿಯಲ್ಲಿ ಸಿಡುಬುರೋಗವು ವ್ಯಾಪಿಸಿ, ಮಹಾರಾಜ ಖಾಸಾ ಚಾಮರಾಜ ಒಡೆಯರು ಆ ರೋಗಕ್ಕೆ ತುತ್ತಾದರು. ಅತ್ಯುಲ್ಬಣ ಸ್ಥಿತಿಯಲ್ಲಿದ್ದ ಆ ಹತವ್ಯಾಧಿಯ ಬಾಧೆಯನ್ನು ಸಹಿಸಲಾರದೆ, ಜನಗಳು ಅತಿಶಯ ತಳಮಳಗೊಳ್ಳತೊಡಗಿದರು. ಯಾವ ಕ್ಷಣದಲ್ಲಿ ಯಾರಿಗೆ ಆ ರೋಗಬಾಧೆಯು ಪ್ರಾಪ್ತವಾಗಿ ಏನು ಅನಾಹುತ ಸಂಭವಿಸುವುದೋ ಎಂದು ಎಲ್ಲರೂ ಭಯಭ್ರಾಂತರಾಗಿದ್ದರು. ಆಗ ಈ ದೇಶದಲ್ಲಿ ರೆಸಿಡೆಂಟಾಗಿದ್ದ ಮೇಜರ್ ವಿಲ್ಕ್ಸ್ ಎಂಬಾತನು, – 'ಇಂಗ್ಲೆಂಡುದೇಶದ ಒಬ್ಬಾನೊಬ್ಬ ವೈದ್ಯನು, ಸಿಡುಬನ್ನು ಕೃತ್ರಿಮ ಸಾಧನದಿಂದ ಎಬ್ಬಿಸಿ, ಆ ರೋಗದ ಪ್ರಾಬಲ್ಯವನ್ನು ತಗ್ಗಿಸಿ, ಜನರಿಗೆ ಆರೋಗ್ಯವನ್ನುಂಟುಮಾಡುವ ಉಪಾಯವನ್ನು ಕಂಡು ಹಿಡಿದಿದ್ದಾನೆ' ಎಂಬ ವಾರ್ತೆಯನ್ನು ಶ್ರೀ ಲಕ್ಷ್ಮಮ್ಮಣ್ಣಿಯವರಿಗೆ ತಿಳಿಸಿದನು. ಆದನ್ನು ಕೇಳಿದ ಮಹಾರಾಣಿಯವರು, – ಆ ಭಯಂಕರವಾದ ರೋಗಬಾಧೆಯನ್ನು ಅಷ್ಟು ಸುಲಭವಾಗಿ ಪರಿಹರಿಸುವ ಉಪಾಯವ

ಸ್ನು ಕಂಡು ಹಿಡಿದುದಕ್ಕಾಗಿ ಅತ್ಯಂತ ಸಂತೋಷಪಟ್ಟು, ಆದರ ಪ್ರಯೋಗವನ್ನು ತಮ್ಮ ಅರಮನೆಯಲ್ಲೇ ನಡೆಯಿಸಬಹುದೆಂದು ಅನುಮತಿಕೊಟ್ಟರು. ಒಡನೆ ಅವರ ಸೊಸೆಯವರಾದ ಲಕ್ಷ್ಮೀವಿಲಾಸ ಸನ್ನಿಧಾನದ ಮಹಾರಾಣಿಯವರಿಗೇ ಈ ಪ್ರಯೋಗವು ನಡೆಯಿಸಲ್ಪಟ್ಟು, ಅದು ಸಫಲವಾಯಿತು. ಆ ಸಂಗತಿಯನ್ನು ತಿಳಿದು ರಾಜಧಾನಿಯ ನಿವಾಸಿಗಳು ನೂರಾರು ಸಂಖ್ಯೆಯಿಂದ ಆ ಚಿಕಿತ್ಸೆಯನ್ನು ಮಾಡಿಕೊಂಡು ಬದುಕಿದರು. ಮಾತ್ರವಲ್ಲ, ಮದ್ರಾಸು ಗವರ್ನರು ಸಾಹೇಬರು, ಮಹಾರಾಣಿಯವರ ಈ ಸಾಹಸ ಕಾರ್ಯವನ್ನು ರೆಸಿಡೆಂಟಿನ ಮೂಲಕ ತಿಳಿದು, ಬಹು ಆಶ್ಚರ್ಯಪಟ್ಟುದಲ್ಲದೆ, ದಿವಾನ್ ಪೂರ್ಣಯ್ಯನವರ ಮುಖಾಂತರವಾಗಿ ಆ ಸಂಪೂರ್ಣ ವೃತ್ತಾಂತವನ್ನೂ ತರಿಸಿಕೊಂಡು ಆ ಪ್ರಾಂತದಲ್ಲಿ ಪ್ರಚುರಪಡಿಸಲು, ಜನಗಳು ಲೇಶಮಾತ್ರವೂ ಸಂಶಯಗೊಳ್ಳದೆ, ಸಹಸ್ರಾರು ಸಂಖ್ಯೆಯಿಂದ ಆ ಚಿಕಿತ್ಸೆ ಮಾಡಿಸಿಕೊಂಡು ಬದುಕಿಕೊಂಡರು.

ವೃದ್ಧರಾದ ಲಕ್ಷ್ಮಮ್ಮಣ್ಣಿಯವರು ಬಾಲ ರಾಜರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ತಮ್ಮ ಪ್ರಾಣಕ್ಕಿಂತಲೂ ಹೆಚ್ಚೆಂದು ನೋಡಿಕೊಳ್ಳುತ್ತಾ, ಸರ್ವದಾ ಅವರ ಶ್ರೇಯಶ್ಚಿಂತನೆಯಲ್ಲೇ ಕಾಲ ಕಳೆಯುತ್ತಿದ್ದರು. ದೊರೆಗಳಿಗೆ ಪಟ್ಟವಾದ ಆರನೆಯ ವರ್ಷ ಅವರನ್ನು ಕರೆದುಕೊಂಡು ಕುಲದೇವತೆಯಾದ ಶ್ರೀ ಚಾಮುಂಡೇಶ್ವರೀ ದರ್ಶನಕ್ಕಾಗಿ ಬೆಟ್ಟಕ್ಕೂ, ಮಾರನೆಯ ವರ್ಷ ಶ್ರೀಕಂಠೇಶ್ವರನ ದರ್ಶನಕ್ಕಾಗಿ ನಂಜನಗೂಡಿಗೂ ದಯಮಾಡಿಸಿ, ಬಹು ವಿಜೃಂಭಣೆಯಿಂದ ಸ್ವಾಮಿ ಸೇವೆಯನ್ನೂ ಅಗಾಧ ದಾನ ಧರ್ಮಗಳನ್ನೂ ಮಾಡಿ ರಾಜಧಾನಿಗೆ ಹಿಂದಿರುಗಿದರು.

ಭಾರತ ದೇಶದಲ್ಲಿ-ಯುದ್ಧಯುಗವೆಂದು ಪ್ರಸಿದ್ಧವಾಗಿದ್ದ ಹದಿನೆಂಟನೆಯ ಶತಮಾನದಲ್ಲಿ,, ಅನೇಕ ಪ್ರಾಂತಗಳಲ್ಲಿ ವಿವಿಧ ಬದಲಾವಣೆಗಳೂ, ರಾಜ್ಯ ವಿಪ್ಲವಗಳೂ ಉಂಟಾದುವು. ಆದರೆ, ಅಂತಹ ಕಷ್ಟ ಕಾಲದಲ್ಲಿ ಮಾಳವ ದೇಶದಲ್ಲಿ - ಹೋಳ್ಕರ್ ರಾಜ್ಯದ ಆಳ್ವಿಕೆಯನ್ನು ಕೈಕೊಂಡು ಧರ್ಮ ರಾಜ್ಯಪಾಲನೆಯನ್ನು ಸ್ಥಾಪಿಸಿದ ಅಹಲ್ಯಾಬಾಯಿಯೂ, ಬಂಗಾಳಾ ದೇಶದಲ್ಲಿರುವ ನಾಟೂರು ಸಂಸ್ಥಾನದ ರಾಜ್ಯಸೂತ್ರಗಳನ್ನು ಹಿಡಿದು

ನಡೆಯಿಸಿದ ರಾಣೀ ಭವಾನಿಯೂ, ನಮ್ಮ ಮೈಸೂರು ಸಂಸ್ಥಾನದ ಆರ್ಷೇಯ ರಾಜವಂಶಕ್ಕೆ ಭಾಗ್ಯಾಧಿದೇವತೆಯಂತೆ ಪ್ರಾಪ್ತರಾಗಿ ಅದನ್ನು ಸಂರಕ್ಷಿಸಿ ಜೀರ್ಣೋದ್ಧಾರಗೊಳಿಸಿದ ಮಹಾ ಮಾತೃಶ್ರೀ ಲಕ್ಷ್ಮಮ್ಮಣ್ಣಿಯವರೂ ಸಮಕಾಲೀನರಾಗಿದ್ದು ಕೀರ್ತಿಶೇಷರಾದ ಸ್ತ್ರೀಶಿರೋಮಣಿಯರು. ಪ್ರಕೃತ ಪಾಶ್ಚಾತ್ಯ ನಾಗರಿಕತೆಯ ಶೆಳಿಪಿಗೂ ಪರದಾಸ್ಯಕ್ಕೂ ಒಳಪಟ್ಟು ತನ್ನ ಸರ್ವಸ್ವವನ್ನೂ ಸೂರೆಗೊಟ್ಟಿರುವ ಭಾರತ ದೇಶಮಾತೆಯ ಗರ್ಭಸುಧಾಂಬುಧಿಯಲ್ಲಿ ಅಂತಃಕರಣ ಪೂರ್ವಕವಾದ ದೈವಭಕ್ತಿಯನ್ನೂ, ಧೈರ್ಯ ಸಾಹಸಗಳನ್ನೂ, ರಾಜತಂತ್ರ ಕೌಶಲಗಳನ್ನೂಗಳಿಸಿದ ಇಂತಹ ನಾರೀ ಶಿರೋಮಣಿಯರು ಜನನ ಹೊಂದುತ್ತಿರುವುದು ಸುಚಿಸ್ತೆಯೆನ್ನಲು ಸಂದೇಹವೇನಿದೆ! ಪ್ರಾತಃಸ್ಮರಣೀಯರಾದ ಈ ಅಹಲ್ಯಾಬಾಯಿ, ರಾಣೀಭವಾನಿ, ಮತ್ತು ಲಕ್ಷ್ಮಮ್ಮಣ್ಣಿ ಈ ರತ್ನತ್ರಯಗಳ ದಿವ್ಯ ಪ್ರಭೆಯು ನಮ್ಮ ನಾರೀ ವೃಂದದ ಮೇಲೂ ಪ್ರಸರಿಸಿ, ಅವರಲ್ಲೂ ದೈವಭಕ್ತಿಯನ್ನೂ ಧೈರ್ಯ ಸಾಹಸಗಳನ್ನೂ ಉದಾರ ಧ್ಯೇಯಕ್ಕಾಗಿ ನಿಸ್ವಾರ್ಥತೆಯಿಂದ ಶ್ರಮಿಸುವಂತಹ ದೃಢಚಿತ್ತತೆಯನ್ನೂ ಪ್ರಸಾದಿಸಲಿ.

ತಥಾಸ್ತು.



*A letter of grateful acknowledgement written by the widow of Chikka Krishna Raja or Immadi Krishna Raja, and the widow of Chamaraj to the British Darbar, on 24th June 1799.*

'Your having conferred on our child the government of Mysore, Nagar and their dependencies, and appointed Purnaiya to be the Diwan. has afforded us the greatest happiness. Forty years have elapsed since our government ceased. Now you have favoured our boy with the government of this country and nominated Purnaiya to be his Diwan. We shall, while the sun and the moon continue, commit no offence against your government. We shall at all times consider our selves as under your Protection and orders. Your having established us must for ever be fresh in the memory of our posterity, from one generation to another Our offspring can never forget an attachment to your government on whose support we shall depend.'

(Sd) Lachhmi Ammani

" Dewaji Ammani



—॥ ಶ್ರೀರಾಮಸಹಾಯಂ ॥—

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)



### ಮುನ್ನುಡಿ:—

ಲೋಕದಲ್ಲಿ 'ದೇಹಿ ಎಂದವರಿಗೆ ನಾಸ್ತಿ' ಎನ್ನದೆ, ಕೊಡುಗೈವೀರರೆಂದು ಪ್ರಖ್ಯಾತರಾದ, ದಧೀಚಿ, ರಂತಿದೇವ, ಶಿಬಿಚಕ್ರವರ್ತಿ, ಕರ್ಣ, ಜೀಮೂತವಾಹನ ಮುಂತಾದ ನರಶ್ರೇಷ್ಠರಲ್ಲಿ ನಮ್ಮ ಕಥಾನಾಯಕನಾದ ಬಲಿಚಕ್ರವರ್ತಿಯೂ ಒಬ್ಬನು. ಈ ಮಹನೀಯರೆಲ್ಲರೂ, ದಾನ ಕೊಡುವುದರಲ್ಲಿ ಪರಮ ನಿಷ್ಠೆಯುಳ್ಳವರಾಗಿ, ಹಾಗೆ ತಾವು ಕೊಡುವ ದಾನದಿಂದ ತಮ್ಮ ಪರಿಣಾಮವೇನಾಗುವುದೆಂಬುದನ್ನು ಕೂಡ ಲೆಕ್ಕಿಸದಿದ್ದವರು. ಇವರಲ್ಲಿ ಒಬ್ಬಾತನು, ಪರೋಪಕಾರಕ್ಕಾಗಿ ತನ್ನ ಬೆನ್ನೆಲುಬನ್ನೇ ದಾನವಾಗಿ ಕೊಟ್ಟುಬಿಟ್ಟ ಮಹಾತ್ಮನು. ಇನ್ನೊಬ್ಬಾತನು ನಾಲ್ವತ್ತೆಂಟುದಿನ ಉಪವಾಸವಾಗಿ ಪಾರಣೆಯ ದಿನ ತಾನು ಮಾಡಿಟ್ಟುಕೊಂಡಿದ್ದ ಅನ್ನವೆಲ್ಲವನ್ನೂ ಬೇಡಿದವರಿಗೆ ಕೊಟ್ಟುಬಿಟ್ಟು ನಿಶ್ಚಿಂತನಾಗಿ ನಿಂತ ಧೀರನು. ಮತ್ತೊಬ್ಬಾತನು ತನಗೆ ಬಂದು ಶರಣುಬಿದ್ದ ಒಂದು ಕಪೋತದ ಪ್ರಾಣರಕ್ಷಣೆಗಾಗಿ, ತನ್ನ ದೇಹದ ಮಾಂಸವನ್ನೇ ಕೊಯ್ದುಕೊಟ್ಟು ಅದನ್ನು ಶತ್ರುಮುಖಕ್ಕೆ ಬೀಳದಂತೆ ಬದುಕಿಸಿದ ಮಹೋದಾರನು. ಇನ್ನೊಬ್ಬಾತನು, ತನಗೆ ಪ್ರಾಣಾಧಾರಕ ವಸ್ತುಗಳೆಂದು ತಿಳಿದಿದ್ದ ತನ್ನ ದೇಹಸ್ಥವಾಗಿದ್ದ ಅಮೃತಕಲಶ ಕರ್ಣಕುಂಡಲಗಳನ್ನು ಸಹ, ಬೇಡಿದವನಿಗೆ ಹಿಂಜರಿಯದೆ ದಾನಮಾಡಿ 'ದಾನದಲ್ಲಿ ಕರ್ಣ - ಕೊಡುಗೈ ಶೂರ' ಎಂದು ಹೊಗಳಿಸಿಕೊಂಡ ತ್ಯಾಗಿ ಶಿರೋಮಣಿಯು. ಜೀಮೂತವಾಹನನು, ಒಂದು ನಾಗಸರ್ಪವನ್ನು ಬದುಕಿಸುವುದಕ್ಕಾಗಿ, ತನ್ನ ದೇಹವನ್ನೇ ಗರುಡನಿಗೆ ಆಹಾರವಾಗಿ ಒಪ್ಪಿಸಿದ ಪರಮೋದಾರಿಯು. ಇವರೆಲ್ಲರಂತೆಯೇ, ನಮ್ಮ ಕಥಾನಾಯಕನಾದರೂ, ತಾನು ಕೊಡುತ್ತೇನೆಂದು ಸಂಕಲ್ಪಿಸಿದ್ದ ದಾನದಿಂದ ತನ್ನ ಸರ್ವನಾಶವಾಗುವುದೆಂದು ತಿಳಿದಿದ್ದರೂ, ಹಿಂಜರಿಯದೆ ಲೋಭ

ಬುದ್ಧಿಯನ್ನು ಹೊಂದದೆ, ಧೈರ್ಯದಿಂದ ತನ್ನ ರಾಜ್ಯಕೋಶಾದಿ ತ್ರಿಭುವನ ಸಾಮ್ರಾಜ್ಯವನ್ನೂ ದಾನವಾಗಿ ಕೊಟ್ಟು ದಾನಿಗಳಲ್ಲಿ ಅಗ್ರಗಣ್ಯನೆಂದು ಪ್ರಖ್ಯಾತನಾದನು. ಹೀಗೆ ನಮ್ಮ ಮಾತೃಭೂಮಿಯಲ್ಲಿ, ಇತರ ಎಲ್ಲಾ ವಿಚಾರಗಳಲ್ಲೂ ಅಗ್ರಗಾಮಿಗಳೆನಿಸಿ ಲೋಕಕ್ಕೇ ಉದಾಹರಣಸ್ವರೂಪರಾಗಿರುವ ಮಹನೀಯರು ಜನ್ಮವೆತ್ತಿದಂತೆಯೇ, ದಾನ ಕೊಡುವಿಕೆಯಲ್ಲೂ ಪರಮಾವಧಿ ಸ್ಥಿತಿಯನ್ನು ಪ್ರದರ್ಶಿಸಿದ ಪುರುಷಶ್ರೇಷ್ಠರು ಜನ್ಮಿಸಿರುವರು.—

ನಮ್ಮ ದೇಶದಲ್ಲಿ ದಾನ ಕೊಡುವಿಕೆಯೆಂಬುದು - ಏನೋ ಅವನವನ ಇಷ್ಟವಿದ್ದಂತೆ ನಡೆಯಬೇಕಾದ ಒಂದು ಕ್ರಿಯೆ ಎಂಬಂತಾಗದೆ, ಪ್ರತಿಯೊಬ್ಬನ ಮೇಲೂ ಹೊತ್ತ ಒಂದು ಧಾರ್ಮಿಕ ನಿಬಂಧನೆಯಾಗಿ ಪರಿಣಮಿಸಿದೆ. 'ದಾನ-ಪ್ರತಿಗ್ರಹ'—'ಇತರರಿಗೆ ಕೊಡುವಿಕೆ ಮತ್ತು ತಾನೂ ಸ್ವೀಕಾರ ಮಾಡುವಿಕೆ' ಇವು ಬ್ರಾಹ್ಮಣನಿಗೆ ವಿಧಿಸಿದ ಷಟ್ಕರ್ಮಗಳಲ್ಲಿ ಸೇರಿದುವು. ಎಂದರೆ, ಇನ್ನೊಬ್ಬನು ತನಗೆ ಕೊಡಬೇಕೆಂಬ ಉದ್ದೇಶದಿಂದ ತಾನು ಅವನಿಗೆ ಕೊಡಬೇಕೆಂಬುದು ಇದರ ಅರ್ಥವಲ್ಲ. ಬ್ರಾಹ್ಮಣನಿಗೆ, ತಾನು ಇತರರಿಂದ ಪಡೆವ ಅಧಿಕಾರ ಮಾತ್ರವಲ್ಲ - ಇತರರಿಗೆ ತನ್ನಲ್ಲಿದ್ದುದನ್ನು ಲೋಭವಿಲ್ಲದೆ ಕೊಡಬೇಕಾದ ಕರ್ತವ್ಯವೂ ಉಂಟು ಎಂಬುದು ಇದರಿಂದ ಸಿದ್ಧವಾಗುತ್ತದೆ. ಆದುದರಿಂದ ಯಾವನೊಬ್ಬನೂ - ತಾನು ತೆಗೆದುಕೊಳ್ಳಲು ಮಾತ್ರ ಬಾಧ್ಯ, ಕೊಡುವುದಕ್ಕಾಗಿಯಲ್ಲ - ಎಂದು ಭಾವಿಸಬಾರದು. ಪ್ರತಿಯೊಬ್ಬನಿಗೂ ಪ್ರಪಂಚದಿಂದ ಸಕಲ ವಸ್ತುಗಳನ್ನೂ ಪಡೆಯಲು ಹೇಗೆ ಸ್ವಾತಂತ್ರ್ಯವುಂಟೋ, ಹಾಗೆಯೇ ನಿಸ್ಪೃಹತೆಯಿಂದ ದಾನಮಾಡಲೂ ಹಿಂದೆ ಮುಂದೆ ನೋಡದಂತಹ ಉದಾರಭಾವವಿರಬೇಕು. ತಾನು ಪಡೆದಂತೆಯೇ ದಾನ ಮಾಡದೆ ಸ್ವಾರ್ಥತೆಯಿಂದ ಅಪಹಾರ ಮಾಡುವ ಬುದ್ಧಿಯು ಯಾವನಿಗಿರುವುದೋ ಅವನು ಕಳ್ಳನೆನಿಸಿಕೊಳ್ಳುವನೆಂದು ಭಗವದ್ವಚನವಿದೆ.

ಈಗಿನ ನಮ್ಮ ದೇಶಸ್ಥಿತಿಯಲ್ಲಿ ಇಂತಹ ತ್ಯಾಗಶೀಲರ ಸಂಖ್ಯೆಯು ಅಪಾರವಾಗಿ ಹೆಚ್ಚಬೇಕಾದ ಆವಶ್ಯಕವೊದಗಿದೆ. ಧನ ಧಾನ್ಯ ವಸ್ತು

ಕ್ಷೇತ್ರಗಳು ಮಾತ್ರವಲ್ಲ - ಉತ್ತಮ ಧ್ಯೇಯ ಸಾಧನೆಗಾಗಿ ತಾವು ಬಹು ಪ್ರೇಮದಿಂದ ಬೆಳೆಸಿದ ತಮ್ಮ ದೇಹಗಳನ್ನೇ ಧಾರೆಯನ್ನೆರೆಯಬೇಕಾದ ಸಂದರ್ಭವು ಪ್ರಾಪ್ತಿಸಿದೆ. ಪ್ರತಿಫಲವನ್ನಪೇಕ್ಷಿಸದೆ ಮಾಡುವ ತ್ಯಾಗವೇ ಸರ್ವ ಶ್ರೇಷ್ಠವಾದ ತ್ಯಾಗವಲ್ಲವೆ? ಅದರಂತೆಯೇ, ಈಗ ಮಾಡಬೇಕಾಗಿರುವ ತ್ಯಾಗದಿಂದಲೂ, ಎಂತಹ ಫಲವು ಲಭ್ಯವಾಗುವುದು ಎಂದು ಯೋಚಿಸಬೇಕಾದುದಿಲ್ಲ. ದಾನಿಯ ಹೃದಯವು ಎಷ್ಟು ಪರಿಶುದ್ಧವಾಗಿರುವುದೋ ಅದಕ್ಕಾಗಿ ಪ್ರಾಪ್ತವಾಗುವ ಫಲವೂ ಅಷ್ಟು ಉತ್ಕೃಷ್ಟವಾದುದೇ ಆಗಿರುವುದು. ನಿಷ್ಕಾಮ ಭಾವದಿಂದ ಮಾಡಲ್ಪಟ್ಟ ಯಾವುದೊಂದು ಕರ್ಮವೂ ಬಂಧಕವಾಗದು.—ಅಷ್ಟೇ ಅಲ್ಲ, ದಶಾಧಿಕ ಶತಾಧಿಕ ಫಲಪ್ರದವಾಗದೆ ಎಂದಿಗೂ ವ್ಯರ್ಥವಾಗದು.

ಇಂತಹ ತ್ಯಾಗ ಮಹಿಮೆಯನ್ನು ಸ್ವಂತ ಆಚರಣೆಯಿಂದ ಪ್ರಪಂಚಕ್ಕೆ ಪ್ರದರ್ಶನಮಾಡಿ, ಅಚಂದ್ರಾರ್ಕ ಕೀರ್ತಿ ಸಂಪಾದನೆ ಮಾಡಿದ ಈ ಬಲಿಚಕ್ರವರ್ತಿಯ ಚರಿತ್ರೆಯೂ, ಕರ್ಣಾಟಕ ದೇಶದ ಬಾಲಕ ಬಾಲಿಕೆಯರಿಗೆ ಪ್ರಿಯಕರವಾಗಿರಲಿ! ಕರ್ಣಾಟಕ ಮಹಾ ಜನರು, ಗ್ರಂಥಮಾಲೆಯ ವಿಷಯದಲ್ಲಿ ಎಂದಿನಂತೆಯೇ ಉದಾರ ಭಾವವನ್ನಿಟ್ಟು ಸ್ವಹಸ್ತ ಪರಹಸ್ತ ಪ್ರೋತ್ಸಾಹಿಸುತ್ತ ಬರಲಿ ಎಂಬುದೇ ನಮ್ಮ ಪ್ರಾರ್ಥನೆ.

ಬೆಂಗಳೂರು ನಗರ,
ತಾ|| ೧೫-೬-೧೯೩೦.

ಇತಿ ಸುಜನ ವಿಧೇಯ,
**ಯಂ. ರಾಮರಾವ್.**

---

ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.—೧೯೩೦.—೩೦೦೦, ಪ್ರತಿಗಳು.

### ಶಾರ್ದೂಲ ವಿಕ್ರೀಡಿತ ವೃತ್ತಮು:—

ಆದಿನ್ ಶ್ರೀಸತಿಕೊಪ್ಪುಪೈ ದನುವುಪೈ ನಂಸೋತ್ತರೀಯಂಬುಪೈ
ಬಾದಾಬ್ಜಂಬುಲಪೈ ಗಪೋಲತಟಿಪೈ ಬಾಲಿಂಡ್ಲಪೈ ನೂತ್ನಮ
ರ್ಯಾದಂ ಜೆಂದುಕರಂಬು ಗ್ರಿಂದಗುಟ ಮೀದೈ ನಾಕರಂಬುಂಟ ಮೇಲ್
ಗಾದೇ ರಾಜ್ಯಮುಗೀಜ್ಯಮುನ್ ಸತತಮೇ ಕಾಯಂಬು ನಾಪಾಯಮೇ !

### ಮತ್ತೇಭ ವಿಕ್ರೀಡಿತಮು:—

ಸಿರಯುಂಬೈನ ನಿಬಂಧನ್ಮೈನ ಧರಣೀ ಸಿರ್ಮೂಲನಂಬೈನ ದು
ರ್ಮರಣಾಂಬೈನ ಗುಲಾಂತಮ್ಮೈನ ನಿಜಮುನ್ ರಾನಿಮ್ಮು ಕಾನಿಮ್ಮುಪೋ
ಹರಿಯೈನನ್ ಹರುಡೈನ ನೀರಜಭವುಂಡಭ್ಯಾಗತುಂಡೈನ ನೌ
ದಿರುಗನ್ ನೇರದು ನಾದು ಜಿಹ್ವ ವಿನುಮಾ ಧೀವರ್ಯ ವೇಯೇಟಿಕಿನ್

### ಕಂದ:—

ಮೇರುವು ದಲಕ್ರಿಂದೈನನು
ಬಾರಾವಾರಂಬು ಲಿಂಕ ಬಾರಿನ ಲೋಲೋ
ಧಾರುಣಿ ರಜಮ್ಮೈ ಪೋಯಿನ
ಧಾರಾಧ್ವಮು ಬದ್ಧಮ್ಮೈನ ದಪ್ಪ ಕಯಿತ್ತ್ರನ್

(ಆಂಧ್ರ ಭಾಗವತಮು.)

**ಬಲಿಚಕ್ರವರ್ತಿ.**

॥ ಶ್ರೀರಾಮಸಹಾಯಂ ॥

ತ್ಯಾಗಿ ಶಿರೋಮಣಿ

# ಬಲಿ ಚಕ್ರವರ್ತಿ



## ಅಧ್ಯಾಯ ೧ — "ತ್ರಿಲೋಕಾಧಿಪತ್ಯ"

ನಮ್ಮ ಮಾತೃಭೂಮಿಯಾದ ಈ ಭಾರತದೇಶವು ವಿಚಿತ್ರ ಚರಿತ್ರೆಯುಳ್ಳದ್ದು. ಮಿಕ್ಕ ದೇಶಗಳ ಚರಿತ್ರೆಗಳಾದರೆ, ಈ ಲೋಕದಲ್ಲೇ ಹುಟ್ಟಿ ಬೆಳೆದು ವಾಸಿಸಿದ - ಮಕ್ಕಳನ್ನು ಪಡೆದು, ನಾಲ್ಕಾರು ಯುದ್ಧಗಳನ್ನು ಮಾಡಿ, ಜಯವನ್ನೋ ಮರಣವನ್ನೋ ಹೊಂದಿದ ಕೆಲವಂದಿ ರಾಜರ ಚರಿತ್ರೆಗಳನ್ನು ಮಾತ್ರ ಹೇಳಲುಳ್ಳವು. ಆದರೆ, ನಮ್ಮ ದೇಶದ ಚರಿತ್ರೆಯೆಂಬುದು ಅಂಥದಲ್ಲ. ಆದರೊಂದಿಗೆ ಇಹಲೋಕದ ಸಂಬಂಧ ಮಾತ್ರವಲ್ಲ - ಸ್ವರ್ಗಲೋಕದ ಸಂಬಂಧವೂ ಬೆರೆತಿರುವುದು. ಅದರಲ್ಲಿ ಬರುವ ರಾಜವರೇಣ್ಯರು ಇಹಲೋಕದ ರಾಜ್ಯಗಳನ್ನು ಜಯಿಸಿ ಸಾರ್ವಭೌಮರೆಂದು ಹೊಗಳಿಸಿಕೊಂಡಿದ್ದುದು ಮಾತ್ರವಲ್ಲ-ಸ್ವರ್ಗಲೋಕವನ್ನು ಜಯಿಸಿ - ದೇವೇಂದ್ರನ ಸಿಂಹಾಸನದಮೇಲೂ ಕುಳಿತಿದ್ದವರು. 'ಇದೆಲ್ಲವೂ ಪುಕ್ಕಟೆ ಪುರಾಣಗಳ ಪೊಳ್ಳು ಬರೆವಣಿಗೆ'ಯೆಂದು ಹಳಿಯುವವರುಂಟೆಂಬುದನ್ನು ಬಲ್ಲೆವು. ಆದರೆ ಅಂತಹ ನುಡಿಗಳಿಗೆ ಬೆದರಿ, ನಾವು ಈ ಸಂಗತಿಗಳು ಸುಳ್ಳೆನ್ನಲಾರೆವು. ಏಕೆಂದರೆ, ಈಗ್ಗೆ ಇಪ್ಪತ್ತು ವರ್ಷಗಳ ಹಿಂದೆ ಯಾವ ಸಂಗತಿಗಳು ಸುಳ್ಳು - ಅಸಾಧ್ಯ, ಅಸಂಭವ ಎಂದು ಜನಗಳು ತಿಳಿದಿದ್ದರೋ, ಅಂತಹ ಆಕಾಶಯಾನವೇ ಮುಂತಾದ ಸಾಧನಗಳು ಹುಟ್ಟಿ,

ಇಂದು ಲೋಕದಲ್ಲಿ ಅಭೂತಪೂರ್ವ ಕೆಲಸಗಳನ್ನು ಮಾಡಿವೆ-ಮಾಡುತ್ತಲಿವೆ. ಕೇವಲ ಭೌತಿಕ ವಿಜ್ಞಾನ ಶಾಸ್ತ್ರದ ಪರಿಚಯದಿಂದಲೇ ಹೀಗೆ ಅಮಾನುಷ ವೆಂಬಂತಹ ಹಲವು ಕಾರ್ಯಗಳನ್ನು ಮಾಡುವುದು ಸಾಧ್ಯವಾಗಿರುವಲ್ಲಿ, ನಮ್ಮ ಪೂರ್ವಿಕರು, ಆತ್ಮಜ್ಞಾನಶೀಲರಾಗಿದ್ದು, ಅದ್ವಿತೀಯ ಪರಾಕ್ರಮಿಗಳಾಗಿದ್ದು, ಮಹಾ ತಪೋನಿರತರಾಗಿದ್ದು, ಯೋಗನಿಷ್ಠರಾಗಿದ್ದು, ಅಗಾಧ ವೀರ್ಯ ವಂತರಾಗಿದ್ದು, ಜಿತೇಂದ್ರಿಯ ಚಕ್ರವರ್ತಿಗಳಾಗಿದ್ದು ಏನೇನು ಕೆಲಸ ಗಳನ್ನು ಸಾಧಿಸಿದರು,—ಅವರಿಗೆ ಸಾಧ್ಯವಾಗದ ಕೆಲಸಗಳಾವುವಿದ್ದವು, ಎಂಬ ವಿಷಯದಲ್ಲಿ ನಮಗೆ ಸಂದೇಹವಿಲ್ಲ. ಅಂತೆಯೇ, ನಮಗೆ ಅಮಾ ನುಷಗಳೆಂಬಂತೆ ತೋರಿದರೂ, ಪುರಾಣೋಕ್ತಗಳಾದ ಕಾರ್ಯಗಳೆಲ್ಲವೂ ಆಯಾ ಕಾಲಗಳಲ್ಲಿ ನಡೆದುವೇ ಎಂದೂ, ನಡೆಯದಿದ್ದ ಯಾವ ಕಾರ್ಯ ವನ್ನೂ ಸತ್ಯನಿಷ್ಠರಾದ ನಮ್ಮ ಪೂರ್ವಿಕರು ಬರೆದಿಡಲಿಲ್ಲವೆಂದೂ ನಂಬು ತ್ತೇವೆ;- ನಂಬಬೇಕೆಂದು ಬಿನ್ನವಿಸುತ್ತೇವೆ.

ಮಹಾ ಭಗವದ್ಭಕ್ತನಾದ ಪ್ರಹ್ಲಾದನ ಚರಿತ್ರೆಯನ್ನು ತಿಳಿಯದವ ರಾರು! ತನ್ನ ತಂದೆಯಾದ ಹಿರಣ್ಯಕಶಿಪುವು ಹರಿದ್ವೇಷದಿಂದ ತನಗೆ ಉಂಟು ಮಾಡಿದ ಸಕಲವಿಧ ಬಾಧೆಗಳನ್ನೂ ಸಮಾಧಾನದಿಂದ ಸಹಿಸಿ ಆದರೂ ಹರಿ ಭಜನೆಯನ್ನು ಬಿಡದಿದ್ದ ಆ ಬಾಲಭಕ್ತನ ಮೇಲೆ ಅಪಾರ ದಯಾನಿಧಿ ಯಾದ ಶ್ರೀ ವಿಷ್ಣುಮೂರ್ತಿಯು ಕನಿಕರಗೊಂಡು, ಅವನ ತಂದೆಯು ತೋರಿಸಿದ ಕಂಭದಲ್ಲೇ ಪ್ರಕಟನಾಗಿ, ಮಹಾ ನಾಸ್ತಿಕನೂ ಧೂರ್ತನೂ ವಿಷ್ಣುದ್ವೇಷಿಯೂ ಆಗಿದ್ದ ಆ ದೈತ್ಯನನ್ನು ಸಂಹರಿಸಿ ಭೂಭಾರಹರಣ ಮಾಡಿದನಷ್ಟೆ! ತರುವಾಯ ಪ್ರಹ್ಲಾದನನ್ನು, ಆ ದೈತ್ಯೇಂದ್ರನ ಸಿಂಹಾ ಸನದಮೇಲೆ ಕೂರಿಸಿ ರಾಜ್ಯಾಭಿಷೇಕಮಾಡಿ ಅನೇಕ ಕಾಲಗಳವರೆಗೆ ಧರ್ಮದಿಂದ ರಾಜ್ಯಪರಿಪಾಲನೆ ಮಾಡಿಕೊಂಡುಬಾರೆಂದು ಆಶೀರ್ವದಿಸಿ ಶ್ರೀ ನಾರಸಿಂಹ ಮೂರ್ತಿಯು ವೈಕುಂಠಾಭಿಮುಖನಾಗಿ ಹೊರಟುಹೋ ದನು. ಇತ್ತ ಪ್ರಹ್ಲಾದನು, ತಂದೆಯ ಮರಣಕ್ಕಾಗಿ ವ್ಯಥೆಪಟ್ಟನಾದರೂ, ಮುಂದೆ ಬೇರೆ ಮಾರ್ಗವಿಲ್ಲದುದರಿಂದ ತನ್ನ ಮೂವರು ತಮ್ಮಂದಿರನ್ನೂ ಆದರಿಸಿ, ಸಿಂಹಾಸನಾರೂಢನಾಗಿ ಧರ್ಮಮಾರ್ಗಕ್ಕೆ ಲೇಶಮಾತ್ರವೂ ವ್ಯತ್ಯಾಸವಿಲ್ಲದಂತೆ, ಪ್ರಜೆಪರಿವಾರಗಳನ್ನು ಪಾಲಿಸಿಕೊಂಡು, ಧರ್ಮಾತ್ಮ

ನೆಂದು ಪ್ರಖ್ಯಾತನಾದನು. ಮಹಾ ಭಗವದ್ಭಕ್ತನಾದ ಆತನ ರಾಜ್ಯದಲ್ಲಿ ಯಾವ ಸೌಭಾಗ್ಯಕ್ಕೆ ಕೊರತೆಯಿದ್ದೀತು! ಪ್ರಜೆಗಳೆಲ್ಲರೂ, ಶಾಂತರಾಗಿ, ಪುಷ್ಟರಾಗಿ ತುಷ್ಟರಾಗಿ ಧರ್ಮಮಾರ್ಗತತ್ಪರರಾಗಿ ಭಗವದ್ಭಕ್ತರಾಗಿ ಸುಖ ಸಂತೋಷಗಳಲ್ಲಿ ಓಲಾಡುತ್ತಾ ಇರುವರು. ಸಕಾಲದಲ್ಲಿ ದಿವ್ಯ ವೃಷ್ಟಿಯಾಗಿ ಭೂಮಿಯು ಸಕಲವಿಧ ಫಲಪುಷ್ಪ ಧಾನ್ಯದವಸಗಳನ್ನೂ ಯಥೇಷ್ಟವಾಗಿ ಬೆಳೆದು ಒದಗಿಸುವುದು. ಎಲ್ಲಿ ನೋಡಿದರೂ ಕೆರೆಕಟ್ಟೆ ಕಾಲುವೆಗಳು ತುಂಬಿ, ಅವುಗಳ ಆಸರೆಯಿಂದ ಸಮೃದ್ಧವಾಗಿ ಬೆಳೆದ ಪೈರುಪಚ್ಚೆಗಳಿಂದ ಸರ್ವ ಕಾಲಗಳಲ್ಲೂ ನೇತ್ರಾನಂದಕರವಾಗಿರುವುವು. ಹೀಗಿದ್ದ ರಾಜ್ಯದಲ್ಲಿ ಮಹಾ ವಿಷ್ಣುಭಕ್ತನಾದ ಪ್ರಹ್ಲಾದನು ಅನೇಕ ಕಾಲ ರಾಜ್ಯವಾಳಿ-ತರುವಾಯ ಹರಿಧ್ಯಾನತತ್ಪರನಾಗಿ ವಿಷ್ಣು ಸಾನ್ನಿಧ್ಯವನ್ನೈದಿದನು.

ತರುವಾಯ ಆತನ ಮಗನಾದ ವಿರೋಚನನೆಂಬುವನೂ ತಂದೆಯಂತೆಯೇ ಧರ್ಮಮಾರ್ಗವನ್ನು ತಪ್ಪದೆ ರಾಜ್ಯವಾಳಿದನು. ವಿರೋಚನನ ತರುವಾಯ ಆತನ ಏಕಮಾತ್ರ ಪುತ್ರನಾದ ಬಲಿ ಎಂಬಾತನು ತನ್ನ ಸಾಮರ್ಥ್ಯದಿಂದ ತ್ರಿಲೋಕಗಳನ್ನೂ ಜಯಿಸಿ ಇಂದ್ರಸಭೆಯಲ್ಲಿ ನವರತ್ನಮಯ ಸಿಂಹಾಸನದಲ್ಲಿ ವಿರಾಜಮಾನನಾಗಿ ಬಹುಕಾಲ ಧರ್ಮದಿಂದ ರಾಜ್ಯ ಪರಿಪಾಲನೆಯನ್ನು ಮಾಡಿದನು.

ಪ್ರಬಲತಮನಾದ ರಾಜನೊಬ್ಬನು ಭೂಮಂಡಲವನ್ನೆಲ್ಲ ವಶಪಡಿಸಿಕೊಂಡು ಏಕಚ್ಛತ್ರಾಧಿಪತ್ಯ ಮಾಡುತ್ತ ಇರುವನೆಂದು ಭಾವಿಸೋಣ! ಅವನ ಧಾರ್ಮಿಕ ಆಳ್ವಿಕೆಯಿಂದ ಭೂಮಿಯಲ್ಲಿ ಸಕಲವಿಧ ಸೌಭಾಗ್ಯಗಳೂ ಪ್ರಾಪ್ತಿಸಿದ್ದು, ಕ್ಷಾಮ ಡಾಮರಗಳಿಲ್ಲದೆ, ಯುದ್ಧ ಅಂತಃಕಲಹಾದಿ ಈತಿಬಾಧೆಗಳಿಲ್ಲದೆ, ಪ್ರಜೆಗಳೆಲ್ಲರೂ ಸರ್ವ ವಿಧದಲ್ಲೂ ಸಂತುಷ್ಟರಾಗಿದ್ದರೆಂದೂ ಭಾವಿಸಿಕೊಳ್ಳೋಣ! ಅಂತಹ ಸಂದರ್ಭದಲ್ಲೂ ಅವನಿಗೊಂದು ಇಷ್ಟೆಯಿರುವುದು. ಐಹಿಕವಾದ ಸಮಸ್ತ ಸುಖ ಸಂತೋಷಗಳನ್ನನುಭವಿಸಲು ಅವಶ್ಯಕವಾದ ಸಾಧನ ಸಂಪತ್ತಿಗಳನ್ನೆಲ್ಲ ಪಡೆದಿರುವಾಗ - ಸೃಷ್ಟಿಕರ್ತನ ಅಗಾಧ ಮಹಿಮೆಯನ್ನು ತಿಳಿದು ಆತನ ಸಾನ್ನಿಧ್ಯವನ್ನು ಹೊಂದುವ ಪ್ರಯತ್ನ ಮಾಡಬೇಕೆಂಬ ಇಚ್ಛೆಯು ಉದಯಿಸದಿದ್ದಲ್ಲಿ - ಅಂತಹ ಮನಸ್ಸನ್ನು ಸ್ವಾಭಾವಿಕವಾಗಿಯೇ ಮತ್ತೊಂದಪೇಕ್ಷೆಯು ಆಕ್ರಮಿಸುವುದು.

ಅದಾವುದೆಂಬಿರಾ? ಅದೇ ಮೃತ್ಯುವನ್ನು ಜಯಿಸಬೇಕೆಂಬುದು! ಎಂದರೆ ಸಾವಿಲ್ಲದಂತೆ ಮಾಡಿಕೊಳ್ಳಬೇಕೆಂಬುದು. ಒಂದು ವೇಳೆ ಮೃತಿ ಹೊಂದಿದರೂ ಪುನಃ ಜೀವಿಸುವಂತಹ ಒಂದು ಉಪಾಯವನ್ನು - ಒಂದು ಮದ್ದನ್ನು, ಒಂದು ಔಷಧ ವಿಶೇಷವನ್ನು ಕಂಡುಹಿಡಿಯಬೇಕೆಂಬುದು ಅವರ ಆಶಯವಾಗುವುದು. ಅಂತಹ ಒಂದು ಉಪಾಯವನ್ನು ಕಂಡುಹಿಡಿದು ಅದರ ಸಹಾಯದಿಂದ ಅಗಣಿತ ಕಾಲಗಳವರೆಗೆ ಭೋಗ ಭಾಗ್ಯಗಳನ್ನು ಅನುಭವಿಸಬೇಕೆಂಬುದು, ಆ ಸಂದರ್ಭದಲ್ಲಿ ಅವರ ಮುಖ್ಯೋದ್ದೇಶವಾಗಿರುವುದು. ಇಂತಹ ಆಸೆಯು, ಬಲಿಚಕ್ರವರ್ತಿಯ ಸುರಕ್ಷಿತ ರಾಜ್ಯಭಾರದಲ್ಲಿ ವಾಸಿಸಿದ್ದ ದೈತ್ಯರಿಗೆ ಉಂಟಾಯಿತು. ಒಡನೆ ಅವರಲ್ಲಿ ಕೆಲವರು ಅದಕ್ಕೆ ಏನು ಮಾಡಬೇಕೆಂದು ಆ ಯೋಚನೆಗೆ ಮನಸ್ಸು ಕೊಟ್ಟರು. ಅಷ್ಟರಲ್ಲಿ ಅತ್ತ ದೇವತೆಗಳೂ ವಿಷ್ಣುಮೂರ್ತಿಯ ಆಜ್ಞೆಯಿಂದ ಅಮೃತ ಪ್ರಾಪ್ತಿಗಾಗಿ ಸಮುದ್ರಮಥನ ಮಾಡಬೇಕೆಂದು ಉದ್ಯುಕ್ತರಾಗಿ, ತಮಗೆ ಆ ಕಾರ್ಯದಲ್ಲಿ ಸಹಾಯ ಮಾಡುವುದಕ್ಕಾಗಿ, ಬಲಿಷ್ಟರಾದ ದೈತ್ಯರನ್ನು ಕೇಳಲು ರಾಯಭಾರಿಗಳನ್ನು ಕಳುಹಿಸಿದ್ದರು. ಆಗ ದೈತ್ಯರಲ್ಲೆಲ್ಲ ಮಹಾ ಪರಾಕ್ರಮಿಯೂ, ಅತಿಶಯ ತೇಜಸ್ವಿಯೂ ಆಗಿದ್ದ ಬಲಿಚಕ್ರವರ್ತಿಯು ತನ್ನ ಸಭೆಗೆ ಬಂದ ಅವರನ್ನು ಯೋಗ್ಯರೀತಿಯಿಂದ ಎದುರುಗೊಂಡು ಉಚಿತ ವಚನಗಳಿಂದ ಮನ್ನಿಸಿ, ಬಂದ ಕಾರ್ಯವೇನೆಂದು ಪ್ರಶ್ನಿಸಲು, ಅವರು—"ದೈತ್ಯೇಂದ್ರಾ, ನಾವು ಕಾರ್ಯಾಂತರದಿಂದ ವಿಷ್ಣುಲೋಕಕ್ಕೆ ಹೋಗಿ ವೈಕುಂಠಾಧಿಪತಿಯನ್ನು ಸಂದರ್ಶಿಸಿದೆವು. ಆ ದೇವೇಶನು ಜನ್ಮ ಮರಣಾದಿಗಳ ಬಾಧೆಯನ್ನು ತಪ್ಪಿಸಿ ಲೋಕವನ್ನು ಕಾಪಾಡಬಲ್ಲ 'ಅಮೃತ'ವೆಂಬ ರಸ ವಿಶೇಷವನ್ನು ಉತ್ಪತ್ತಿ ಮಾಡುವ ಒಂದು ಉಪಾಯವನ್ನು ನಮಗೆ ತಿಳಿಸಿದನು. ಅದನ್ನು ಕಂಡುಹಿಡಿಯುವಲ್ಲಿ ಕೇವಲ ನಾವೊಬ್ಬರೇ ಪ್ರವರ್ತಿಸುವುದಕ್ಕಿಂತಲೂ, ದೇವಕುಲಕ್ಕೆ ಸೋದರ ಸ್ವರೂಪರಾದ ನೀವೂ ಸೇರಿದರೆ, ನಾವಿಬ್ಬರೂ ಶಕ್ತಿ ಸಾಮರ್ಥ್ಯಗಳನ್ನುಪಯೋಗಿಸಿ, ಶ್ರಮ ಸಾಧ್ಯವಾದ ಆ ಕಾರ್ಯವನ್ನು ಸುಲಭವಾಗಿಯೇ ಆಗಮಾಡಿಸಬಹುದೆಂದು ಯೋಚಿಸಿ, ಈ ಸಂಗತಿಯನ್ನು ನಿನಗೂ ತಿಳಿಸಿ ಸಲಹೆ ಕೇಳೋಣವೆಂದು ಇಲ್ಲಿಗೆ ಬಂದೆವು" ಎಂದರು. ದೇವ ರಾಯಭಾರಿಗಳು ಹೇಳಿದ

ಮಾತು ಆ ಸಭೆಯಲ್ಲಿದ್ದ ಕೆಲವರಿಗೆ ಆತ್ಯಾಶ್ಚರ್ಯವನ್ನುಂಟುಮಾಡಿತು. ಆಗತಾನೆ ತಾವು, ಜರಾಮರಣಗಳ ಬಾಧೆಯನ್ನು ನೀಗಿಸುವ ಔಷಧ ವಿಶೇಷವನ್ನು ಕಂಡುಹಿಡಿಯಬೇಕೆಂದು ಯೋಚಿಸಿಕೊಂಡಿದ್ದ ವೇಳೆಗೆ ಸರಿಯಾಗಿ, ಇವರೂ ಬಂದರೆಂದುಕೊಂಡು, ಬಹು ಸಂತೋಷದಿಂದ ಆ ಕಾರ್ಯಕ್ಕೆ ಬೆಂಬಲವಾಗಿ ತಾವೂ ನಿಲ್ಲುವೆವೆಂದರು. ಆ ಕಾರ್ಯವು ಫಲಪ್ರದವಾಗುವವರೆಗೆ ಬಿಟ್ಟುಹೋಗಿ ಯಾರೂ ಕೆಲಸಕ್ಕೆ ವಿಘ್ನವನ್ನುಂಟುಮಾಡದಿರಬೇಕೆಂದೂ, ಪ್ರತಿಯೊಬ್ಬನೂ ನಿರ್ವಂಚನೆಯಾಗಿ, ಶಕ್ತಿಲೋಪವಿಲ್ಲದೆ ಆ ಮಹತ್ಕಾರ್ಯಕ್ಕೆ ಒಮ್ಮನದಿಂದ ಸಹಾಯಮಾಡತಕ್ಕುದೆಂದೂ ಒಪ್ಪಿಕೊಂಡರು. ದೈತ್ಯರು ಸ್ವತಃ ತ್ರಿಲೋಕಾಧಿಪತ್ಯ ಮಾಡುತ್ತಿದ್ದುದರಿಂದ, ಆದರಿಂದ ಪ್ರಾರಂಭದಲ್ಲಿ ದೊರೆಯಬಹುದಾದ ಯಾವ ಅಲ್ಪ ಸ್ವಲ್ಪ ಫಲಗಳಿಗೂ ಆಸೆ ಪಡುವುದಿಲ್ಲವೆಂದೂ, ಅಮೃತವೊಂದು ತಮಗೆ ದೊರೆತರೆ ಸಾಕೆಂದೂ ಹೇಳಿ ಆ ಬಗ್ಗೆ ಉಭಯರೂ ನಿಬಂಧನೆ ಮಾಡಿಕೊಂಡರು.

ತರುವಾಯ ದೇವತೆಗಳು ಭೂಮಿಯಲ್ಲಿ ದೊರೆತ ಸಕಲ ಮೂಲಿಕೆಗಳನ್ನೂ, ಔಷಧ ಗಿಡಬಳ್ಳಿಗಳನ್ನೂ, ಹುಲ್ಲು ಗರಿಕೆ ಮುಂತಾದುವನ್ನೂ ತಂದು ವಿಷ್ಣುಮೂರ್ತಿಯ ಆಜ್ಞೆಯನ್ನನುಸರಿಸಿ ಕ್ಷೀರಸಮುದ್ರದಲ್ಲಿ ಹಾಕಿದರು. ಬಳಿಕ ದೇವಾಸುರರೆಲ್ಲರೂ ಒಂದಾಗಿ ನಡೆದು ಮಂದರ ಪರ್ವತವನ್ನು ಕಿತ್ತುತಂದು ಕಡೆಗೋಲಿನಂತಿರಲು ಸಮುದ್ರದಲ್ಲಿಟ್ಟರು. ಅದಕ್ಕೆ ವಾಸುಕಿಯನ್ನೇ ಹಗ್ಗವಾಗಿರಲು ಪ್ರಾರ್ಥಿಸಿ, ಕರೆತಂದು ಸುತ್ತಿದರು. ಒಬ್ಬೊಬ್ಬರು ಒಂದೊಂದು ಪಕ್ಕದಲ್ಲಿ ನಿಂತು, ಅದನ್ನು ಹಿಡಿದು ಕಡೆಯಲು ಪ್ರಾರಂಭಿಸಿದರು. ಕಡೆಯುವಾಗ ದೈತ್ಯರು ವಾಸುಕಿಯ ಮುಖದ ಕಡೆಗೂ ದೇವತೆಗಳು ಬಾಲದ ಕಡೆಗೂ ಹಿಡಿದು ನಿಂತರು. ಸ್ವಲ್ಪಹೊತ್ತು ಆ ಕಾರ್ಯವು ನಡೆದಿರಲು, ವಾಸುಕಿಯ ಮುಖದಿಂದ ಅಗಾಧವಾದ ವಿಷಜ್ವಾಲೆಯು ಹೊರಟು ದೈತ್ಯರನ್ನು ವಿಶೇಷವಾಗಿ ಬಾಧಿಸಿತು. ಅನೇಕಮಂದಿ ದೈತ್ಯರು ಸಂಪೃತರಾದರು. ಹಲವರು ಆ ಭಯಂಕರ ವಿಷದ ಗಾಳಿಯು ಬೀಸಿ ಸಂತಪ್ತರಾದರು. ಆ ತಾಪವು ಬಾಲದ ಕಡೆಯಲ್ಲಿ ಹಿಡಿದು ನಿಂತಿದ್ದ ದೇವತೆಗಳಿಗೂ ವ್ಯಾಪಿಸಿತು. ಅಷ್ಟರಲ್ಲಿ ಮೇಘಗಳಿಂದ ತುಂತುರು ಹನಿಗಳೂ ತಂಪಾದ ಗಾಳಿಯೂ ಬೀಸಿ ಅವರ ತಾಪವನ್ನಾರಿಸಿತು. ದೇವದೈತ್ಯ

ರಿಬ್ಬರೂ ಹೊಸ ಹುರುಪಿನಿಂದ ಪುನಃ ಕಡೆಯಲಾರಂಭಿಸಿದರು. ಎಷ್ಟೋ ದಿನಗಳವರೆಗೆ ಹಾಗೆ ಕಡೆದರೂ ಅಮೃತವು ಉತ್ಪತ್ತಿಯಾಗದಿದ್ದುದು ಕೆಲವರಿಗೆ ನಿರಾಸೆಯನ್ನುಂಟುಮಾಡಿತು. ಆದರೆ, ಆ ವೇಳೆಗೆ ಕೂರ್ಮ ರೂಪದಿಂದ ಮಂದರಪರ್ವತವನ್ನು ಮುಳುಗದಂತೆ ತನ್ನ ಬೆನ್ನಮೇಲೆ ಧರಿಸಿ - ಹಿಡಿದಿದ್ದ ಶ್ರೀ ಮಹಾ ವಿಷ್ಣುಮೂರ್ತಿಯು, ಅವರನ್ನು ಕುರಿತು- "ಒಂದು ಮಹತ್ಕಾರ್ಯ ಸಾಧನೆಗಾಗಿ ಪ್ರಯತ್ನಿಸುವಾಗ ಹೀಗೆ ನಿರುತ್ಸಾಹ ಪಡುವುದು ತಕ್ಕುದಲ್ಲ. ಹತಾಶರಾಗಬೇಡಿ. ಹೀಗೆಯೇ ಕಡೆಯುತ್ತಾ ಹೋಗಿರಿ. ಕೊನೆಯಲ್ಲಿ ಅಮೃತ ಪ್ರಾಪ್ತಿಯಾಗಿಯೇ ಆಗುವುದು. ಇನ್ನು ಸ್ವಲ್ಪ ಕಾಲದೊಳಗಾಗಿಯೇ ಪ್ರಾರಂಭಕ್ಕೆ ವಿಷವು ಉತ್ಪತ್ತಿಯಾಗುವುದು. ಅದರ ಜ್ವಾಲೆಗಾಗಿ ಭಯಪಟ್ಟು ಕಾರ್ಯ ಪ್ರಯತ್ನವನ್ನು ಬಿಟ್ಟುಬಿಡಬೇಡಿ. ಹಾಗೇ ಮುಂದರಿಸಿದರೆ, ಅಲ್ಪ ಸ್ವಲ್ಪ ಫಲ ಪ್ರಯೋಜನಗಳು ದೊರೆಯುವುವು. ಅವುಗಳೇ ಪರಮ ಫಲಗಳೆಂದು ಭಾವಿಸಿ, ಮೋಹಗೊಂಡು ನಿಮ್ಮ ಪ್ರಯತ್ನವನ್ನು ನಿಲ್ಲಿಸಿಬಿಡುವಿರಾದರೆ, ಅಮೃತ ಪ್ರಾಶನಮಾಡಿ, ಜರಾ ಮರಣಾದಿಗಳನ್ನು ನೀಗಿ ಸುಖಿಸುವ ಸೌಭಾಗ್ಯವು ನಿಮಗೆ ಪ್ರಾಪ್ತವಾಗಲರಿಯದು. ಆದುದರಿಂದ ನಿರುತ್ಸಾಹಿತರಾಗದೆ, ಏಕನಿಷ್ಠೆಯಿಂದ ಫಲ ಪ್ರಾಪ್ತಿಯಾಗುವವರೆಗೂ, ನಿಮ್ಮ ಉದ್ಯಮವನ್ನು ನಿಲ್ಲಿಸಬೇಡಿ. ನಿಮಗೆ ಶುಭವಾಗುವುದು" ಎಂದು ಸಂದೇಶವನ್ನು ಕೊಟ್ಟನು. ಯಜ್ಞಸ್ವರೂಪಿಯಾದ ಶ್ರೀ ಮಹಾ ವಿಷ್ಣುಮೂರ್ತಿಯು ಕೊಟ್ಟ ಭರವಸೆಯಿಂದ ದೇವ ದಾನವರಿಬ್ಬರೂ ಪುನಃ ನೂತನೋತ್ಸಾಹದಿಂದ ತಮ್ಮ ಉದ್ಯೋಗವನು ಮುಂದರಿಸಿದರು. ಹಾಗೆ ಪುನಃ ರಭಸದಿಂದ ಕಡೆಯಲ್ಪಟ್ಟ ಆ ಸಮುದ್ರದಲ್ಲಿ ಹಾಲಾಹಲವೆಂಬ ಭಯಂಕರ ವಿಷವು ಹುಟ್ಟಿತು. ಆ ವಿಷಾಗ್ನಿಯು ಭಯಂಕರ ಬೇಗೆಯು ಒಡನೆ ದಿಕ್ಕುದಿಕ್ಕುಗಳಲ್ಲೂ ಹಬ್ಬಿ ವ್ಯಾಪಿಸಿತು. ಅದರ ಉಗ್ರಸ್ವರೂಪವನ್ನು ಸಹಿಸಿಕೊಳ್ಳಲಾರದೆ ದೇವದೈತ್ಯರಿಬ್ಬರೂ ತತ್ತರಿಸುತ್ತ, ಕೈಲಾಸ ಪರ್ವತವನ್ನು ಕುರಿತು ಓಡಿ, ಅಲ್ಲಿ ತಪೋನಿರತನಾಗಿ ಕುಳಿತಿದ್ದ ಸಾಕ್ಷಾತ್ಪರಶಿವನನ್ನು ಕುರಿತು ತಮ್ಮ ಸಂಕಟವನ್ನು ನೀಗಿಸೆಂದು ಪ್ರಾರ್ಥಿಸಿದರು. ಕರುಣಾಳುವಾದ ಶಂಕರಮೂರ್ತಿಯು ಕನಿಕರಪಟ್ಟು, ಲೋಕಕ್ಕೆ ಹಿತವನ್ನುಂಟುಮಾಡಬೇಕೆಂದು ಇಚ್ಛಿಸಿ, ಲೋ

ಆವನ್ನೇ ದಹಿಸುತ್ತಾ ಬರುತ್ತಿದ್ದ ಆ ಹಾಲಾಹಲವನ್ನು ತನ್ನ ಯೋಗ ಶಕ್ತಿಯಿಂದ ಆಕರ್ಷಿಸಿ ಏಕಾಪೋಶನವಾಗಿ ಕುಡಿದುಬಿಟ್ಟನು.

ತರುವಾಯ ದೇವದೈತ್ಯರಿಬ್ಬರೂ ಪುನಃ ಸಮುದ್ರದೆಡೆಗೆ ಬಂದು, ತಾವು ಹಿಂದೆ ಬಿಟ್ಟಿದ್ದ ಕಾರ್ಯವನ್ನು ಪುನಃ ಕೈಕೊಂಡರು. ಹೀಗೆ ಅವಿಶ್ರಾಂತವಾಗಿ ಅವರು ಮಾಡುತ್ತಿದ್ದ ಪರಿಶ್ರಮಕ್ಕೆ ಪ್ರತಿಫಲವಾಗಿ, ಅದರಲ್ಲಿ ಕಾಮಧೇನು, ಚಿಂತಾಮಣಿ, ಕಲ್ಪವೃಕ್ಷ, ಉಚ್ಛೈಶ್ರವಸ್ಸೆಂಬ ಕುದುರೆ, ಐರಾವತವೆಂಬ ಬಿಳಿಯ ಆನೆ, ಅಷ್ಟದಿಗ್ಗಜಗಳು ಮುಂತಾದುವೆಲ್ಲವೂ ಉದ್ಭವಿಸಿದುವು. ಪ್ರಾರಂಭದಲ್ಲಿ ಉದಯಿಸಿದ ಆಶ್ಚರ್ಯಕರಗಳಾದ ಆ ವಸ್ತುಗಳನ್ನು ಕಂಡು ದಾನವರು ಮೋಹಿತರಾಗಿ ಅವುಗಳನ್ನು ಪಡೆಯಬೇಕೆಂದು ಅಪೇಕ್ಷಿಸಿದರು. ಆಗ ದಾನವವರ್ಗಕ್ಕೆ ಮುಖಂಡನಾಗಿದ್ದ ಬಲಿಚಕ್ರವರ್ತಿಯು, ತಮ್ಮ ಧ್ಯೇಯವು ಅಮೃತವನ್ನು ಪಡೆಯುತಕ್ಕುದಾದುದರಿಂದ, ಈ ಅಲ್ಪ ಫಲಗಳಿಗಾಗಿ ಇಚ್ಛಿಸುವುದು ಶ್ರೇಯಸ್ಕರವಲ್ಲವೆಂದು ಹೇಳಿ, ಅವರನ್ನು ಪುನಃ ನೂತನೋತ್ಸಾಹದಿಂದ ಕೆಲಸ ಮಾಡುವಂತೆ ಹುರಿದುಂಬಿಸಿದನು. ಮುಂದೆ ಕ್ರಮವಾಗಿ ಪಾರಿಜಾತ ವೃಕ್ಷವೂ ಅಪ್ಸರಸ್ತ್ರೀಯರೂ, ಕೌಸ್ತುಭರತ್ನವೂ, ತರುವಾಯ ಶ್ರೀ ಮಹಾಲಕ್ಷ್ಮೀದೇವಿಯೂ, ಆ ಕ್ಷೀರಸಾಗರ ಮಥನದಿಂದ ಹುಟ್ಟಿ ಬಂದರು. ಲಕ್ಷ್ಮೀದೇವಿಯು ಸಕಲ ಕಲ್ಯಾಣಗುಣ ಪರಿಪೂರ್ಣನೂ, ಆದಿಮಧ್ಯಾಂತ ರಹಿತನೂ, ಸಚರಾಚರಾತ್ಮಕನೂ ಆದ ಶ್ರೀ ಮಹಾವಿಷ್ಣುವನ್ನೇ ತನಗೆ ಪತಿಯನ್ನಾಗಿ ವರಿಸಿ ಮಾಲೆ ಹಾಕಿದಳು. ಕೌಸ್ತುಭಾಭರಣವು, ದೇವತೆಗಳಿಂದ ಸಮರ್ಪಿತವಾಗಿ ವಿಷ್ಣುಮೂರ್ತಿಯ ಕಂಠದಲ್ಲಿ ಧರಿಸಲ್ಪಟ್ಟಿತು. ಮಿಕ್ಕ ಐರಾವತಾದಿ ಪದಾರ್ಥಗಳನ್ನೆಲ್ಲ ಸ್ವರ್ಗಲೋಕಕ್ಕೆ ಭೂಷಣಪ್ರದಗಳಾಗಿರಲು ದೇವೇಂದ್ರನು ಸ್ವೀಕರಿಸಿದನು. ತರುವಾಯ ವಾರುಣಿಯೆಂಬ ಮದ್ಯವು ಉತ್ಪತ್ತಿಯಾಯಿತು. ಆ ಮದ್ಯಗಂಧವು ಸ್ವಾಭಾವಿಕವಾಗಿಯೇ ತಮೋಗುಣ ವಿಶಿಷ್ಟರಾದ ದೈತ್ಯರ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಲು, ಅವರು ಅದನ್ನು ತಡೆದುಕೊಳ್ಳಲಾರದೆ, ಅದನ್ನು ಸ್ವೀಕರಿಸಿ ಪಾನ ಮಾಡಿಬಿಟ್ಟರು. ಮುಂದೂ ಹತಾಶರಾಗದೆ ಎಂದಿನಂತೆಯೇ ಕಡೆಯುತ್ತಿರಲು, ಧನ್ವಂತರೀ ನಾಮಕ ದಿವ್ಯ ಪುರುಷನೊಬ್ಬನು ಕೈಯಲ್ಲಿ ಅಮೃತಕಲಶವನ್ನು ಧರಿಸಿ

ಉದ್ಭವಿಸಿದನು. ಆಗ ಮಾತ್ರ ದೈತ್ಯರು ಸುಮ್ಮನಿರಲಿಲ್ಲ. ಮುಂದೆ ನುಗ್ಗಿ, ಆ ಧನ್ವಂತರಿಯು ಕೈಲಿದ್ದ ಅಮೃತಕಲಶವನ್ನು ಕಿತ್ತುಕೊಳ್ಳಲು ಕೈ ನೀಡಿದರು. ಆಗ ಲೋಕಕ್ಷೇಮ ಚಿಂತಕನಾದ ಶ್ರೀ ಮಹಾ ವಿಷ್ಣುವು, ಧೂರ್ತರೂ, ದುರ್ಮಾರ್ಗರೂ, ನಿಷ್ಠುರ ಹೃದಯರೂ, ಚಂಚಲಚಿತ್ತರೂ ಆದ ದೈತ್ಯರ ಕೈಗೆ ಅಮೃತವು ದೊರೆತರೆ ತನ್ಮೂಲಕ ಲೋಕಕ್ಕೆ ಕ್ಷೇಮವುಂಟಾಗಲಾರದೆಂದು ಚಿಂತಿಸಿ, ಮೋಹಿನೀ ವೇಷವನ್ನು ಧರಿಸಿ, ಧನ್ವಂತರಿಯು ಕೈಯಿಂದ ಅಮೃತಕಲಶವನ್ನು ತನ್ನ ಕೈಗೆ ತೆಗೆದುಕೊಂಡನು. ಲೋಕಮೋಹಕವಾದ ಮೋಹಿನಿಯ ಮನೋಹರ ರೂಪಕ್ಕೆ ಮರುಳಾಗಿ ದೈತ್ಯ ಪ್ರಮುಖರು, ಆಕೆಯಲ್ಲೇ ನಟ್ಟದೃಷ್ಟಿಯಿಂದ ಅಮೃತದ ಅಪೇಕ್ಷೆಯನ್ನು ಮರೆತು, ಸುಮ್ಮನೆ ನಿಂತರು. ಮೋಹಿನಿಯು, ದೇವದೈತ್ಯ ವರ್ಗಗಳೆರಡಕ್ಕೂ ತಾನು ಅಮೃತವನ್ನು ಹಂಚುವೆನೆಂದಳು. ಆ ಸಲಹೆಗೆ ಎರಡು ಪಂಗಡಗಳವರೂ ಒಪ್ಪಿದರು. ಮೋಹಿನಿಯು ಅವರಿಗೆ ಮಿಂದು ಮಡಿಯುಟ್ಟು ಬಂದು ಎರಡು ಪಙ್ತಿಗಳಲ್ಲಿ ಕುಳಿತುಕೊಳ್ಳಹೇಳಿದಳು. ಅವರು ಹಾಗೆಯೇ ಮಾಡಲು, ಮೋಹಿನಿಯು ಕೈಯಲ್ಲಿ ಅಮೃತಕಲಶವನ್ನು ಹಿಡಿದು ತನ್ನ ನಡಿಗೆ ನೋಟಗಳಿಂದ ತ್ರಿಭುವನವನ್ನೂ ಮೋಹಗೊಳಿಸುತ್ತಾ ನಡೆತಂದು, ದೇವಕುಲದಿಂದ ಪ್ರಾರಂಭಿಸಿ ಬಡಿಸತೊಡಗಿದಳು. ದೇವತೆಗಳ ಪಙ್ತಿಯು ಕೊನೆಯಾಗುವ ವೇಳೆಗೆ ಕಲಶದಲ್ಲಿದ್ದ ಅಮೃತವೂ ಮುಗಿಯುತ್ತಾ ಬಂದಿತು. ಮಿಕ್ಕುದನ್ನು ಮೋಹಿನಿಯು ತಾನೇ ಕುಡಿದು ಬಿಟ್ಟಳು.

ಮೋಹಿನಿಯ ಈ ಕಪಟ ವೃತ್ತಿಯು ದೈತ್ಯರಿಗೆ ಮಹಾಗ್ರಹವನ್ನುಂಟುಮಾಡಿತು. ಅಗಾಧ ಶ್ರಮವನ್ನು ಸಹಿಸಿ ಪ್ರಾರಂಭದಲ್ಲಿ ದೊರೆತ ಯಾವ ವಸ್ತುಗಳನ್ನೂ ಅಪೇಕ್ಷಿಸದೆ, ಮಾಡಿದ ತಮ್ಮ ಕಾರ್ಯಕ್ಕೆ ಈ ಬಗೆಯ ಫಲವು ದೊರೆತುದು, ಅವರಿಗೆ ವಿಶೇಷ ಸಂತಾಪವನ್ನುಂಟುಮಾಡಿತು. ತಮಗೆ ಇಷ್ಟು ಮಟ್ಟಿನ ಪರಾಭವವನ್ನೂ ಅಪಚಾರವನ್ನೂ ಉಂಟುಮಾಡಿದ ದೇವವರ್ಗವನ್ನೂ ಮೋಹಿನಿಯನ್ನೂ ತಮ್ಮ ನೋಟದಿಂದಲೇ ಉರಿದು ಬಿಡುವವರಂತೆ ನೋಡುತ್ತಾ ಅವರು ರೋಷಾಧಿಕ್ಯದಿಂದ ಕಟಕಟನೆಂದು ಹಲ್ಲಡಿಯುತ್ತಾ, ಭಯಂಕರವಾದ ಆಯುಧಗಳನ್ನು ಹಿಡಿದು ಯುದ್ಧಸನ್ನದ್ಧ

ರಾದರು. ಆ ವೇಳೆಯಲ್ಲಿ ಬಲಿಚಕ್ರವರ್ತಿಯು, ಕವಚ ಕುಂಡಲಗಳನ್ನು ಧರಿಸಿ, ಛತ್ರಚಾಮರವೇ ಮೊದಲಾದ ಸಮಸ್ತ ರಾಜಚಿನ್ಹೆಗಳಿಂದ ಕೂಡಿ ವಿಮಾನವನ್ನೇರಿ, ಅಪೂರ್ವ ರಾಜತೇಜದಿಂದ ದೈತ್ಯ ಸೈನ್ಯಕ್ಕೆ ಪ್ರಮುಖನಾಗಿ ದೇವತೆಗಳಿಗೆ ಎದುರಾದರು. ಆತನೊಂದಿಗೆ, ನಮುಚಿ, ಶಂಬರ, ಬಾಣ, ವಿಪ್ರಚಿತ್ತ, ಅಯೋಮುಖ, ದ್ವಿಮೂರ್ಧ, ಕಾಲನಾಭ, ಪ್ರಹೇತಿ, ಹೇತಿ, ಇಲ್ವಲ, ಶಕುನಿ, ಭೂತಸಂತ್ರಾಸ, ವಜ್ರದಂಷ್ಟ್ರ, ಹಯಗ್ರೀವ, ತಾರಕ, ಶುಂಭ, ನಿಶುಂಭ, ಅರಿಷ್ಟನೇಮಿ, ಮಯ, ತ್ರಿಪುರ ಮುಂತಾದ ರಾಕ್ಷಸ ಸೇನಾಧಿಪರೂ, ಪೌಲೋಮ, ಕಾಲಕೇಯ ನಿವಾತ ಕವಚರೆಂಬ ದಾನವವರ್ಗದವರೂ, ಆತನ ವಿಮಾನವನ್ನು ಅನುಸರಿಸಿ ತಮ್ಮ ತಮ್ಮ ಪ್ರಚಂಡ ಸೈನ್ಯಗಳನ್ನು ನಡೆಯಿಸಿಕೊಂಡು ದೇವವರ್ಗದಮೇಲೆ ಕಾಣಿಸಿಕೊಂಡರು. ಅತ್ತ ದೇವತೆಗಳೂ ಅಮೃತಪಾನ ಮಾಡಿದ್ದವರಾದುದರಿಂದ ವಿಶೇಷ ಬಲೋತ್ಸಾಹಯುತರಾಗಿ, ದೈತ್ಯ ಸೈನ್ಯದೊಂದಿಗೆ ಕಾದಲು ಸಿದ್ಧರಾದರು. ಬಲಿಚಕ್ರವರ್ತಿಯು ದೇವೇಂದ್ರನಮೇಲೆ ಕಾಣಿಸಿಕೊಂಡನು. ಹಲವು ಮಂದಿ ದೈತ್ಯನಾಯಕರು, ದೇವ ಪ್ರಮುಖರನ್ನು ಅಡ್ಡಗಿಸಿ ಭಯಂಕರ ಯುದ್ಧ ಮಾಡತೊಡಗಿದರು. ದೈತ್ಯರು ತಮಗೆ ಒದಗಿದ ಪರಾಭವದಿಂದ ದೇವತೆಗಳ ವಿಷಯದಲ್ಲಿ ಬದ್ಧದ್ವೇಷದಿಂದ ಕೂಡಿ, ಅವರನ್ನು ಸಂಪೂರ್ಣ ನಾಶಗೊಳಿಸಿದಲ್ಲದೆ ವಿರಾಮ ಹೊಂದಬಾರದೆಂದು ಸಂಕಲ್ಪಿಸಿ ಛಲಯುಕ್ತರಾಗಿದ್ದರು. ಹೀಗೆ ದೈತ್ಯ ದಾನವರಿಗೆ ಮಹಾಯುದ್ಧವು ನಡೆದು, ದೈತ್ಯವರ್ಗದಲ್ಲಿ ಹಲವು ಸಹಸ್ರಮಂದಿ ಮಡಿದುಹೋದರು. ರಕ್ತವು ಹೊಳೆಯಾಗಿ ಹರಿಯಿತು. ಎಲುಬು ನೆಣ ಮಾಂಸ ಮಜ್ಜೆಗಳು ಪರ್ವತಾಕಾರವಾಗಿ ಬಿದ್ದುವು. ಇತ್ತ ದೇವತೆಗಳಾದರೋ ಅಮೃತಪಾನ ಮಾಡಿದ್ದವರಾದುದರಿಂದ ಮರಣಕ್ಕೆ ಒಳಗಾಗದೆ, ಅಖಂಡ ಪರಾಕ್ರಮದಿಂದ ವಿವಿಧ ಶಸ್ತ್ರಾಸ್ತ್ರಗಳಿಂದ ಘಾತಿಸತೊಡಗಿ ದೈತ್ಯಕುಲವನ್ನು ಹಣ್ಣಿಗೆ ತರಲಿಚ್ಛಿಸಿದ್ದರು. ದಿನದಿನಕ್ಕೆ ದೇವತೆಗಳ ಕೈ ಮೇಲಾಗುತ್ತಾ ಬಂತು. ದೈತ್ಯರ ಮರಣ ಸಂಖ್ಯೆಯೂ ವಿಶೇಷವಾಯಿತು. ಪ್ರಬಲ ಪರಾಕ್ರಮಿಗಳಾದ ದೈತ್ಯರು ಕೆಲವರಲ್ಲದೆ, ಮಿಕ್ಕ ಅನೇಕಾನೇಕರು ಮೃತ್ಯುವಶರಾದರು. ಇದನ್ನು ಕಂಡು, ದೈತ್ಯ ನಾಯಕರಾದ ಬಲಿಚಕ

ವರ್ತಿ, ನಮುಚಿ, ತಾರಕ ಮುಂತಾದವರು, ತಮ್ಮ ಸೈನ್ಯದ ನಾಶಕಾರ್ಯಕ್ಕೆ ಹೇಸಿ ಹಿಂದೆಗೆದರು. ಆ ವೇಳೆಗೆ ಅತ್ರಿ, ನಾರದ ಮಹರ್ಷಿಗಳ ಸಲಹೆಯನ್ನು ಕೇಳಿದ ದೇವೇಂದ್ರನೂ ಯುದ್ಧವನ್ನು ನಿಲ್ಲಿಸಿದನು. ಯುದ್ಧಾಂತ್ಯದಲ್ಲಿ, ದಾನವರು ಬಿಟ್ಟುಹೋಗಿದ್ದ ಸ್ವರ್ಗ ರಾಜಧಾನಿಯನ್ನು ದೇವತೆಗಳು ಆಕ್ರಮಿಸಿಕೊಂಡರು. ದೇವೇಂದ್ರನು, ಕ್ಷೀರಸಾಗರ ಮಥನದಿಂದ ದೊರೆತ ಕಾಮಧೇನು ಕಲ್ಪವೃಕ್ಷಾದಿ ಅಮೌಲ್ಯ ವಸ್ತು ಸಮೂಹಗಳನ್ನು ತಂದು ದೇವ ರಾಜಧಾನಿಯನ್ನು ಸಿಂಗರಿಸಿದನು. ಗಂಧರ್ವ ವಿದ್ಯಾಧರರು, ಆತನ ಧೀರೋದಾತ್ತ ಗುಣಮಾಲೆಯನ್ನು ಕೀರ್ತಿಸಿ ಗಾನ ಮಾಡುತ್ತಿರಲು ದೇವರಾಜನು, ಪುನಃ ಸುಧರ್ಮ ಸಭೆಯಲ್ಲಿ, ದಿವ್ಯ ರತ್ನ ಸಿಂಹಾಸನಾರೋಹಣ ಮಾಡಿ, ತ್ರಿಲೋಕಾಧಿಪತ್ಯವನ್ನು ಸ್ವೀಕರಿಸಿದನು. ಪುನಃ ಎಂದಿನಂತೆ ಲೋಕದಲ್ಲಿ ಸಮಸ್ತ ಕಾರ್ಯಗಳೂ ಸತ್ವಮಯ ಸ್ವರೂಪ ಹೊಂದಿ ನಡೆಯಸಾಗಿದುವು.



## ಅಧ್ಯಾಯ ೨ "ಬಲೀಂದ್ರ"

ದೇವತೆಗಳು ಯುದ್ಧರಂಗವನ್ನು ಬಿಟ್ಟು ಸ್ವರ್ಗಾಭಿಮುಖವಾಗಿ ಹೊರಟುಹೋದಮೇಲೆ, ಹತಶೇಷರಾದ ಕೆಲವುಂದಿ ದಾನವ ಮುಖಂಡರು, ತಮ್ಮ ಸೈನ್ಯಕ್ಕೆ ಬಂದ ದುರವಸ್ಥೆಯನ್ನು ಕುರಿತು ಮರುಗಿ, ಮುಂದೇನು ಮಾಡಬೇಕೆಂದು ಪರಸ್ಪರ ಸಂಭಾಷಿಸಿಕೊಳ್ಳುತ್ತಿದ್ದರು. ಯಾವುದೊಂದು ಕಾರ್ಯವನ್ನೂ ಹೀಗೆಯೇ ಮಾಡಬೇಕೆಂದು ನಿರ್ಧರಿಸಲು-ದಾನವಕುಲ ಚಕ್ರವರ್ತಿಯಾದ ಬಲಿಯು ಇಲ್ಲದೆ - ಕೇವಲ ಅವರಿಗೇ ಅಸಾಧ್ಯವೆಂದು ತೋರಿತು. ಒಡನೆ ತಮ್ಮ ಸೈನ್ಯಾಧಿಪತಿಯೆಲ್ಲೆಂದು ಅವರು ಒಬ್ಬರಿಗೊಬ್ಬರು ಪ್ರಶ್ನಿಸಿಕೊಂಡರು. ಯುದ್ಧಕಾಲದಲ್ಲಿ ವಿಮಾನಾರೂಢನಾಗಿ ಎಲ್ಲೆಲ್ಲೂ ತಾನೇ ತಾನಾಗಿ ವಿಜೃಂಭಿಸುತ್ತಿದ್ದ ಬಲಿಯು ಎಲ್ಲಿ ಹೋದನೆಂಬ ಸಂಗತಿಯೇ ತಿಳಿಯದಿರಲು ಸ್ವಲ್ಪ ಹೊತ್ತು ಎಲ್ಲರೂ ಕಳವಳಗೊಂ

ಡರು. ತರುವಾಯ ಕಾಲಹರಣವೇತಕ್ಕೆಂದು ಹುಡುಕತೊಡಗಲು, ಬಹು ದಟ್ಟವಾಗಿ ಯುದ್ಧ ನಡೆದ ಒಂದೆಡೆಯಲ್ಲಿ ಇಂದ್ರನ ವಜ್ರಾಯುಧದಿಂದ ಘಾತಿಸಲ್ಪಟ್ಟು ಸ್ಮೃತಿತಪ್ಪಿ ಬಿದ್ದಿದ್ದ ದೈತ್ಯ ಚಕ್ರವರ್ತಿಯು ದೃಷ್ಟಿಗೋಚರನಾದನು. ಆತನ ದಿವ್ಯ ರತ್ನಕಿರೀಟವೂ ಕುಂಡಲಗಳೂ ಚದುರಿಬಿದ್ದಿವೆ. ಮೈಯೆಲ್ಲವೂ ರಕ್ತಮಯವಾಗಿ ಧೂಳಿನಿಂದ ಮುಚ್ಚಿ ಕಳೆಗುಂದಿದೆ. ದೈತ್ಯಸೈನ್ಯಕ್ಕೆ ಸೂತ್ರಧಾರಿಯಾದ ಆತನಿಗೆ ಪ್ರಾಪ್ತವಾದ ದುರವಸ್ಥೆಗಾಗಿಯೂ ಯುದ್ಧದಲ್ಲಿ ಪ್ರಾಪ್ತವಾದ ತಮ್ಮ ಪರಾಭವಕ್ಕಾಗಿಯೂ, ದಾನವರು ಬಹು ಕಳವಳಗೊಂಡು ಮರುಗಿದರು. ಅವರಿಗೆ ಮುಂದೇನು ಮಾಡಬೇಕೆಂದು ತೋರದಾಯಿತು. ಅಷ್ಟರಲ್ಲಿ ದೈತ್ಯ ಗುರುಗಳಾದ ಶುಕ್ರಾಚಾರ್ಯರು ಆ ಮಾರ್ಗವಾಗಿ ಬಂದರು. ದೈತ್ಯಕುಲ ಸಾರ್ವಭೌಮನ ಶೋಚನೀಯಾವಸ್ಥೆಯನ್ನು ನೋಡಿ ಅವರಿಗೂ ಕಳವಳವುಂಟಾಗದಿರಲಿಲ್ಲ. ಆದರೆ ಅವರು ಆ ಸ್ಥಿತಿಯನ್ನು ಕಂಡು ಹತಾಶರಾಗಲಿಲ್ಲ. ಒಡನೆ ಆತನನ್ನು ಎತ್ತಿಕೊಂಡು, ಅಸ್ತಾಚಲದ ಒಳಗೆ ಹೋಗಬೇಕೆಂದು ಆಜ್ಞಾಪಿಸಿದರು. ಮಾತ್ರವಲ್ಲ - ತಮಗೆ ಸ್ವಾಧೀನವಾಗಿದ್ದ ಮೃತಸಂಜೀವಿನೀ ವಿದ್ಯಾ ಮಹಿಮೆಯಿಂದ ಯುದ್ಧದಲ್ಲಿ ಹತರಾಗಿ ಬಿದ್ದಿದ್ದ ಹಲವು ಮಂದಿ ಪ್ರಮುಖ ದಾನವರನ್ನು ಪುನಃ ಬದುಕಿಸಿದರು. ತರುವಾಯ ಹಾಗೆ ಜೀವಿಸಿದ ಅವರುಗಳೊಂದಿಗೆ ತಾವೂ ಅಸ್ತಾಚಲಕ್ಕೆ ನಡೆದು, ಅಲ್ಲಿಗೆ ಒಯ್ಯಲ್ಪಟ್ಟಿದ್ದ ಬಲಿಚಕ್ರವರ್ತಿಯನ್ನು ಯೋಗ್ಯ ಚಿಕಿತ್ಸೆಮಾಡಿ, ಎಚ್ಚರಗೊಳ್ಳುವಂತೆ ಮಾಡಿದರು. ಬಲಿಯು ಎದ್ದು ಕುಳಿತು, ಎದುರಿಗೆ ಕುಳಿತಿದ್ದ ಆಚಾರ್ಯರಿಗೆ ಅಭಿನಮಿಸಿದನು. ತನ್ನ ಸೈನ್ಯಕ್ಕೆ ಪ್ರಾಪ್ತವಾದ ಪರಾಭವವನ್ನು ಕುರಿತು ಸಂತಾಪವಾದರೂ, ಪ್ರಾಜ್ಞನಾದುದರಿಂದ ಬಲಿಚಕ್ರವರ್ತಿಯು ಯುದ್ಧದಲ್ಲಿ ಪ್ರಾಪ್ತವಾಗುವ ಜಯಪರಾಜಯಗಳೂ, ಜೀವನದಲ್ಲಿ ತರಂಗರೂಪವಾಗಿ ಒದಗುವ ಸುಖದುಃಖಗಳೂ ಕರ್ಮಾಧೀನವೆಂದು ತಿಳಿದು ಕೆಲಕಾಲ ನಿಶ್ಚಿಂತನಾಗಿದ್ದನು.

ದೈತ್ಯ ಚಕ್ರವರ್ತಿಯು ಸ್ವತಃ ಧೀರನು, ಕರ್ತೃತ್ವ ಶಾಲಿಯು, ಪ್ರತಿಭಾವಂತನು. ಬಹುಕಾಲ ಎಲ್ಲೋ ಒಂದು ಬೆಟ್ಟದ ಬದಿಯಲ್ಲಡಗಿ ಅನಾಮಧೇಯನಾಗಿ ಜೀವಿಸಿಕೊಂಡಿರಲು ಹೇಸುತ್ತಿದ್ದನು. ಆದರೆ, ಅಮೃತ

ಪಾನದಿಂದ ಪ್ರಬಲ ಪರಾಕ್ರಮಿಗಳಾಗಿದ್ದ ದೇವ ಸೈನ್ಯದಮೇಲೆ ಪುನಃ ಕಾಣಿಸಿಕೊಳ್ಳಬೇಕೆಂದರೆ, ಕಳೆಗ ಯುದ್ಧದಲ್ಲೇ ದಾನವ ಸೈನ್ಯದ ಹೆಚ್ಚು ಭಾಗದ ರಣವೀರರು, ಮೃತ್ಯುಮುಖಕ್ಕೆ ಬಲಿಯಾಗಿದ್ದರು. ತಕ್ಕಷ್ಟು ಸಹಾಯ ಸಂಪತ್ತಿಗಳಿಲ್ಲ. ಆದುದರಿಂದ ಏನು ಮಾಡಬೇಕೆಂದು ಯೋಚಿಸತೊಡಗಿದನು. ದೈತ್ಯರಾಜನ ಮನೋವ್ಯಾಕುಲಕ್ಕೆ ಕಾರಣವೇನೆಂಬುದು, ಇತರ ದಾನವ ನಾಯಕರಿಗೆ ತಿಳಿದು ಎಲ್ಲರೂ ಬಂದು ಪ್ರಾರ್ಥಿಸಿಕೊಂಡರು. ಬಲಿಯು ತಮ್ಮ ಆ ಬಗೆಯ ಹತಜೀವನಕ್ಕಿಂತಲೂ ಒಂದೇ ಬಾರಿಗೆ ಮರಣವಾಗುವುದು ಮೇಲೆಂದು ಮನ ಬಿಚ್ಚಿ ಹೇಳಿದನು. ಅದನ್ನು ಕೇಳಿದ ದಾನವರಲ್ಲಿ ಕೆಲವರು,-'ನಮ್ಮ ಸಂಕಟದ ಕಾಲದಲ್ಲಿ ವ್ಯಸನಕ್ಕೆ ಮನಗೊಟ್ಟು ಕುಳಿತುಕೊಂಡರೆ, ಯಾವ ಕಾರ್ಯವೂ ನೆರವೇರಲಾರದು. ನಮ್ಮ ಗುರುಗಳಾದ ಶುಕ್ರಾಚಾರ್ಯರಿಗೆ ನಮ್ಮ ಮೇಲೆ ಪರಮಾನುಗ್ರಹವುಂಟಾಗುವಂತೆ ಮಾಡಿಕೊಂಡು, ಅವರ ಸಹಾಯದಿಂದ, ಶತ್ರುವಧ ಸಾಧಕವಾದ ಯಜ್ಞಗಳನ್ನು ಮಾಡಿ ಬಲ ಸಂಪಾದನೆ ಮಾಡಿ, ತನ್ಮೂಲಕ ನಮ್ಮ ಶತ್ರುವರ್ಗವನ್ನು ಜಯಿಸಿ ಪುನಃ ಸ್ವರ್ಗವನ್ನು ಸ್ವಾಧೀನಪಡಿಸಿಕೊಳ್ಳಬೇಕು" ಎಂದು ವಿಜ್ಞಾಪಿಸಿಕೊಂಡರು. ಬಲಿಚಕ್ರವರ್ತಿಗೂ ಅದು ಸಮಂಜಸವಾದ ಯೋಚನೆಯೆಂದು ತೋರಿತು. ಒಡನೆ ಆಪ್ತ ಪರಿವಾರದೊಂದಿಗೆ ತಾನೇ ಹೊರಟು, ದೈತ್ಯ ಗುರುವನ್ನು ಸಮೀಪಿಸಿ, ತಮಗೆ ಪ್ರಾಪ್ತವಾದ ದುರ್ದಸೆಗೊಂದು ಪರಿಹಾರೋಪಾಯವನ್ನು ಕಲ್ಪಿಸಿ ದೈತ್ಯ ಕುಲವನ್ನು ಉದ್ಧರಿಸಬೇಕೆಂದು ಪ್ರಾರ್ಥಿಸಿದನು. ಶುಕ್ರಾಚಾರ್ಯರು, ಮಹೋನ್ನತ ಪದವಿಯಲ್ಲಿದ್ದರೂ ಆತನಲ್ಲಿ ಕಂಡುಬಂದ ವಿನಯವಿಧೇಯತೆಗಳಿಗಾಗಿ ಪರಮ ಸಂತುಷ್ಟರಾಗಿ, ಹಾಗೆಯೇ ಮಾಡೋಣವೆಂದು ಭರವಸೆ ಕೊಟ್ಟರು. ಒಡನೆ ಅವರ ಸಲಹೆಯನ್ನನುಸರಿಸಿ ಯಜ್ಞಶಾಲೆಯು ನಿರ್ಮಿತವಾಯಿತು. ಬಹು ಸಂಭ್ರಮದಿಂದ ಯಾಗ ಸಾಮಗ್ರಿಗಳೆಲ್ಲವೂ ಸಂಗ್ರಹಿಸಲ್ಪಟ್ಟುವು. ಆಚಾರ್ಯರು, ತಮ್ಮ ಸ್ನೇಹಿತರಾದ ಹಲವುಮಂದಿ ಋಷಿಗಳ ಆಶ್ರಮಗಳಿಗೆ ತಮ್ಮ ಶಿಷ್ಯರನ್ನು ಕಳುಹಿಸಿ ನೂರಾರು ಸಂಖ್ಯೆಯಿಂದ ಋತ್ವಿಕ್ಕುಗಳನ್ನೂ, ಪುರೋಹಿತರನ್ನೂ ಕರೆಯಿಸಿದರು. ಮುಂದೊಂದು ಶುಭ ದಿನದ ಶುಭ ನಕ್ಷತ್ರದಲ್ಲಿ ಬಲಿಚಕ್ರವರ್ತಿಯನ್ನು ಪುನಃ

ದೈತ್ಯಕುಲ ಸಾರ್ವಭೌಮ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನನ್ನಾಗಿಸಿ, ವಿಶ್ವಜಿತ್ತೆಂಬ ಒಂದಾನೊಂದು ಮಹಾ ಯಾಗಕ್ಕಾಗಿ ಆತನನ್ನು ಯಜ್ಞದೀಕ್ಷಿತನನ್ನಾಗಿ ಮಾಡಿದರು. ಯಜ್ಞವು ಸರ್ವಾಂಗ ಸಂಪೂರ್ಣತೆಯಿಂದ ಯಾವ ಲೋಪವೂ ಇಲ್ಲದೆ ಬಹು ದಿನಗಳವರೆಗೆ ನಡೆಯಿತು. ಕೊನೆಯಲ್ಲಿ ಹವಿಸ್ಸನ್ನು ಸಮರ್ಪಣೆ ಮಾಡುವ ವೇಳೆಯಲ್ಲಿ, ಆ ಯಜ್ಞಾಧಿದೇವತೆಯಾದ ಅಗ್ನಿದೇವನು ಸುಪ್ರೀತನಾಗಿ, ತಾನೇ ಪ್ರತ್ಯಕ್ಷವಾಗಿ ಬಂದು ಹವಿಸ್ಸನ್ನು ಸ್ವೀಕಾರ ಮಾಡಿದನು. ಅದನ್ನು ಕಂಡು ಸರ್ವರೂ ಪರಮ ಸಂತುಷ್ಟರಾದರು. ಸಾಂಗವಾಗಿ ನಡೆದ ಆ ಯಜ್ಞದಿಂದಲೂ, ತನಗೆ ಕೊಡಲ್ಪಟ್ಟ ಹವಿರ್ಭಾಗದಿಂದಲೂ ತೃಪ್ತನಾದ ಅಗ್ನಿಯು, ಬಲಿಚಕ್ರವರ್ತಿಗೆ ಸುವರ್ಣಮಯವಾದ ಒಂದು ದಿವ್ಯ ರಥವನ್ನೂ, ಇಂದ್ರಾಶ್ವಗಳಿಗೆ ಸಮಾನಗಳಾದ ಹಲವು ಕುದುರೆಗಳನ್ನೂ, ಸಿಂಹಧ್ವಜವನ್ನೂ, ಬಂಗಾರದ ಕಟ್ಟುಗಳಿಂದ ಸುಶೋಭಿತವಾದ ಒಂದು ಮಹಾ ಧನುಸ್ಸನ್ನೂ, ಅಕ್ಷಯ ಬಾಣಗಳಿಂದ ಕೂಡಿದ ಒಂದು ಬತ್ತಳಿಕೆಯನ್ನೂ, ಶತ್ರುಗಳ ಶರಹತಿಯಿಂದ ಭೇದಿತವಾಗದ ಒಂದು ದಿವ್ಯ ಕವಚವನ್ನೂ ಅನುಗ್ರಹಿಸಿ ಕೊಟ್ಟನು. ದೇವಪ್ರಮುಖನಾದ ಅಗ್ನಿಯು ಇಷ್ಟುಮಟ್ಟಿಗೆ ಅನುಗ್ರಹ ಮಾಡಿದುದು ದೈತ್ಯಕುಲಕ್ಕೆ ಪರಮಾಶ್ಚರ್ಯವನ್ನೂ ಪರಮಾನಂದವನ್ನೂ ಉಂಟುಮಾಡಿತು. ಹಾಗೆ ಯಜ್ಞವು ಸಾಂಗವಾಗಿ ನಡೆದು ಅವಭೃತಸ್ನಾನಮಾಡಿ ಮಹಾತೇಜಸ್ವಿಯಾಗಿ ಪ್ರಕಾಶಿಸುತ್ತಿದ್ದ ತನ್ನ ಮೊಮ್ಮಗನನ್ನು ಕಂಡು ಹರಿಭಕ್ತಾಗ್ರೇಸರನಾದ ಪ್ರಹ್ಲಾದನು ಸಂತೋಷಭರಿತನಾಗಿ, ಆತನಿಗೆ ಎಂದಿಗೂ ಬಾಡದಂತಹ ಅತ್ಯುತ್ತಮವಾದ ಒಂದು ಪದ್ಮಮಾಲಿಕೆಯನ್ನು ತಂದು ಆಶೀರ್ವದಿಸಿ ಕೊಟ್ಟನು. ಶುಕ್ರಾಚಾರ್ಯನು ಒಂದು ಶಂಖವನ್ನು ಕೊಟ್ಟನು. ಹೀಗೆ ಸಕಲ ಯುದ್ಧ ಪರಿಕರಗಳೂ ದೊರೆತಿರಲು, ಬಲಿಯು—'ಇನ್ನು ನಾವಕಾಶವೇಕೆ? ದೈತ್ಯ ಸೈನ್ಯವು ಸ್ವರ್ಗದಮೇಲೆ ಧಾಳಿ ಮಾಡಲು ಸಿದ್ಧವಾಗಲಿ' ಎಂದು ಆಜ್ಞಾಪಿಸಿದನು.

ಒಡನೆ ದಾನವ ಸೈನ್ಯವು ಭಯಂಕರವಾದ ಆಯುಧಗಳನ್ನೆತ್ತಿ, ಸಿಂಹಗರ್ಜನೆ ಮಾಡುತ್ತ, ಯುದ್ಧಕ್ಕೆ ಸಿದ್ಧವಾಯಿತು. ಬಲಿಯು ಅಗ್ನಿದತ್ತವಾದ

ದಿವ್ಯ ಕವಚ ಕಿರೀಟ ಕುಂಡಲಾದಿಗಳಿಂದ ಅಲಂಕೃತನಾಗಿ, ಅಕ್ಷಯ ಬಾಣ ಬತ್ತಳಿಕೆಗಳನ್ನು ಬೆನ್ನಿಗೆ ಬಿಗಿದು ಕಟ್ಟಿ ಧನುಸ್ಸನ್ನು ಹಿಡಿದು, ದಿವ್ಯರಥದ ಮೇಲೆ ಕುಳಿತನು. ಆ ರಥದ ಸಿಂಹಧ್ವಜವು ಶತ್ರುಭೀಕರವಾಗಿ, ದೇವ ಕುಲಕ್ಕೆ ವಕ್ರಿಸಿದ ಧೂಮಕೇತುವೋ ಎಂಬಂತೆ ಕಾಣುತ್ತಿದ್ದಿತು. ದಾನವ ಸೈನ್ಯದ ರಣ ಕೋಲಾಹಲಕ್ಕೆ ಭೂವ್ಯೋಮಾಂತರಿಕ್ಷಗಳು ಏಕವಾದುವೋ ಎಂ ಬಂತೆ ತೋರಿತು. ಪೂರ್ವದಲ್ಲಿ ತಮಗುಂಟಾಗಿದ್ದ ಅಪಜಯದಿಂದ, ಹೆಡೆ ತುಳಿದ ಸರ್ಪದಂತೆ ರೇಗಿದ್ದ ದಾನವರು ಈ ಬಾರಿ ದೇವಕುಲವನ್ನು ನಿಶ್ಶೇಷ ಗೊಳಿಸಿ, ಸ್ವರ್ಗವನ್ನು ಸೂರೆಗೊಳ್ಳಬೇಕೆಂದು ಆರ್ಭಟಿಸುತ್ತ, ಸ್ವಾಭಾವಿಕ ವಾಗಿಯೇ ಕೆಂಪಾದ ಕಣ್ಣಾಲಿಗಳು, ಮಧುಪಾನಮತ್ತತೆಯಿಂದ ಮತ್ತೂ ಕೆಂಪಾಗಿರಲು-ರೌದ್ರಾವೇಶ ಪರವಶರಾಗಿ ಪ್ರಳಯಕಾಲದ ಯಮನಾಳುಗ ಳೋ ಎಂಬಂತೆ ಭೀಕರ ಸ್ವರೂಪವುಳ್ಳವರಾಗಿ ಧಾಳಿಯಿಟ್ಟರು. ಆ ಭಯಂಕರ ಸೈನ್ಯವನ್ನು ನಡೆಯಿಸಿಕೊಂಡು ಸ್ವರ್ಗಲೋಕವನ್ನು ಕುರಿತು ದಂಡೆತ್ತಿದ ಬಲಿಚಕ್ರವರ್ತಿಯು ದೇವರಾಜಧಾನಿಯಾದ ಅಮರಾವತಿ ಯನ್ನು ಸಮೀಪಿಸಿ, ಆ ರಾಜಧಾನಿಯ ಹೊರವಳಯದಲ್ಲಿದ್ದ ನಂದನವನ ದಲ್ಲಿ ಬೀಡುಬಿಟ್ಟನು. ದೈತ್ಯರು ಆ ವನದ ಸೊಬಗನ್ನು ಕಂಡು ಅತ್ಯಾ ಶ್ಚರ್ಯಪಟ್ಟರು. ಮೊಲ್ಲೆ ಮಲ್ಲಿಗೆ ಜಾಜಿ ಸಂಪಿಗೆ ಶಾವಂತಿಗೆ ಪಾರಿಜಾತ ಮುಂತಾದ ಹಲವು ವಿಧ ಪುಷ್ಪಗಳನ್ನು ಪ್ರಸಾದಿಸಿ ನೇತ್ರಾನಂದಕರ ವಾಗಿದ್ದ ಲತೆಗಳೂ ವೃಕ್ಷಗಳೂ ಆ ವನದಲ್ಲಿ ಸೊಂಪಾಗಿ ಬೆಳೆದಿದ್ದುವು. ಫಲವೃಕ್ಷಗಳಮೇಲೆ ಕುಳಿತು ಕರ್ಣಾನಂದಕರವಾಗಿ ಹಾಡುತ್ತಿದ್ದ ಗಿಳಿ ಕೋಗಿಲೆ ಚಕ್ರವಾಕವೇ ಮೊದಲಾದ ಪಕ್ಷಿಗಳು ಎಲ್ಲೆಲ್ಲೂ ಗುಂಪು ಗುಂಪಾಗಿ ದೃಷ್ಟಿಗೋಚರವಾಗುತ್ತಿದ್ದುವು. ತುಂಬಿದ ಕೆರೆಕೊಳಗಳಲ್ಲಿ ಹಂಸಪಕ್ಷಿಗಳು ಪರಿಶುಭ್ರವಾದ ತಮ್ಮ ರೆಕ್ಕೆಗಳನ್ನು ಅಗಲಿಸಿಕೊಂಡು, ಕೆಂಪಾದ ಕೊಕ್ಕಿನಿಂದ ಮೃದುವಾದ ಕಮಲ ನಾಳಗಳನ್ನು ಭುಂಜಿಸು ತ್ತಿದ್ದುವು. ಮಹಾ ಧೂರ್ತಸ್ವಭಾವದ ದೈತ್ಯ ಸೈನಿಕರು ಮೊದಲು ಮೊ ದಲು ಇವುಗಳನ್ನು ನೋಡಿ ಕೆಲಹೊತ್ತು ವಿನೋದಪಟ್ಟರಾದರೂ, ಅವೆ ಲ್ಲವೂ ತಮ್ಮ ಶತ್ರುಗಳಾದ ದೇವತೆಗಳ ಉಪಭೋಗಕ್ಕಾಗಿಯೂ, ಮನೋ ಲ್ಲಾಸಕ್ಕಾಗಿಯೂ ಏರ್ಪಟ್ಟುವೆಂಬ ಭಾವವು ಮನಸ್ಸಿಗೆ ಬಂದೊಡನೆಯೇ,

ಅವುಗಳಮೇಲೆ ವಿಶೇಷ ಕ್ರೋಧಭಾವವುಂಟಾಗಿ, ಎಲ್ಲವನ್ನೂ ಧ್ವಂಸಗೊಳಿಸಲು ನಿಶ್ಚಯ ಮಾಡಿದರು. ಪುಷ್ಪ ವೃಕ್ಷಗಳ ರೆಂಬೆಗಳನ್ನು ಕತ್ತರಿಸಿದರು. ಫಲವೃಕ್ಷಗಳನ್ನು ಕಡಿದು ಬಿಸುಟರು. ಪುಷ್ಪಮಯ ಲತೆಗಳನ್ನು ಬೇರೊಂದಿಗೆ ಕಿತ್ತೆಸೆದರು. ತಿಳಿಗೊಳೋದಕಗಳನ್ನು ಕಲಕಿ, ಸೋಪಾನಗಳನ್ನು ಕಿತ್ತು, ಹಾವಳಿ ಮಾಡಿದರು. ಅತಿಶಯ ಚಿತ್ರಕೆಲಸಗಳಿಂದ ಮನೋಹರವಾಗಿದ್ದ ಶ್ವೇತ ಶಿಲಾಸನಗಳನ್ನು ಕೆಡಹಿ ನಾಶಗೊಳಿಸಿದರು. ಹೀಗೆ ಕ್ಷಣಮಾತ್ರದಲ್ಲಿ ತ್ರಿಭುವನ ಭೂಷಣವಾಗಿ, ಶೃಂಗಾರಕ್ಕೆ ನೆಲೆವೀಡಾಗಿ, ರಂಜಿಸುತ್ತಿದ್ದ ನಂದನವನವು ಧ್ವಂಸವಾಗಿ ಹೋಯಿತು. 'ಅದು ದೇವೇಂದ್ರನಿಗೆ ಪ್ರಿಯಕರವಾದುದು. ಬಹು ಕಾಲದಿಂದ ಜಾಗರೂಕತೆಯಿಂದ ರಕ್ಷಿತವಾದುದು' ಎಂಬ ದಯಾಭಾವವಾಗಲಿ - ಅದನ್ನು ನಾಶಮಾಡಿದರೆ ದೇವರಾಜನು ಕೋಪಿಸುವನೇನೋ ಎಂಬ ದಾಕ್ಷಿಣ್ಯವಾಗಲೀ ಅವರಿಗೆ ಉಂಟಾಗಲಿಲ್ಲ. ಪ್ರತ್ಯಕ್ಷ ದೇವತೆಗಳೊಂದಿಗೆ ವಿರೋಧಿಸಿ - ಬಹಿರಂಗ ಯುದ್ಧಕ್ಕೆಂದೇ ಆಯುಧವನ್ನೆತ್ತಿ ಬಂದು ನಿಂತಿರುವಾಗ ಇನ್ನು ದಯೆಯೇನು, ದಾಕ್ಷಿಣ್ಯವೇನು ?

ಮಾರ್ಗಾಯಾಸವನ್ನು ಪರಿಹರಿಸಿಕೊಂಡ ತರುವಾಯ, ಬಲಿಚಕ್ರವರ್ತಿಯು, ಆಪ್ತರಾದ ಇತರ ದೈತ್ಯ ಶ್ರೇಷ್ಠರೊಂದಿಗೆ ಆಲೋಚಿಸಿ, ಬೀಡು ಬಿಟ್ಟಿದ್ದ ಆ ಸ್ಥಳದಿಂದ ಸೈನ್ಯಕ್ಕೆ ಹೊರಡಲಾಜ್ಞಾಪಿಸಿ, ದೇವರಾಜಧಾನಿಯಾದ ಅಮರಾವತೀನಗರಿಯ ಬಹಿರ್ದ್ವಾರದ ಸಮೀಪದವರೆಗೂ ಸೈನ್ಯವನ್ನು ನಡೆಯಿಸಿಕೊಂಡು ಹೋಗಿ, ಅಲ್ಲಿ ಬೀಡುಬಿಟ್ಟು ನಿಂತನು. ವಿವಿಧ ವಾಹನಗಳ ಮೇಲೇರಿ, ಸಿಂಹಗರ್ಜನೆಮಾಡುತ್ತ, ಥಳಥಳನೆಂದು ಹೊಳೆಯುತ್ತಿದ್ದ ನಿಶಿತವಾದ ಆಯುಧಗಳನ್ನು ಝಳಪಿಸುತ್ತ, ರೋಷದಿಂದ ಕೆಂಪಾದ ನೋಟದಿಂದ ಕೆಕ್ಕರಿಸಿ ನೋಡುತ್ತ, ಕಟಕಟನೆಂದು ಹಲ್ಲಗಡಿಯುತ್ತಾ, ಸಮುದ್ರದ ತರಂಗಗಳಂತೆ ಏರಿಏರಿ ಬರುತ್ತಿದ್ದ ದೈತ್ಯ ಸಮೂಹವನ್ನು ಕಂಡ ದ್ವಾರಪಾಲಕರು, ಒಡನೆ ಮಹಾದ್ವಾರಗಳನ್ನು ಬಂಧಿಸಿ, ಓಡಿಹೋಗಿ ದೇವರಾಜನನ್ನು ಕುರಿತು-'ಮಹಾಪ್ರಭೋ, ಇಂದೇ ಪ್ರಳಯವಾಗಲಿರುವುದು. ದೈತ್ಯಸೈನ್ಯವು ಮಹಾಸಾಗರದ ತೆರೆಗಳಂತೆ ಮಿತಿಯಿಲ್ಲದೆ ಅಮರಾವತಿಯ

ಮೇಲೆ ದಂಡೆತ್ತಿ ಬರತೊಡಗಿದೆ. ಸಾವಕಾಶಮಾಡದೆ ಹೊರಟು ಶತ್ರು ನಿಗ್ರಹಮಾಡಿ, ರಾಜಧಾನಿಯುನ್ನು ರಕ್ಷಿಸು - ಪ್ರಭುವೇ' ಎಂದು ಮೊರೆಯಿಟ್ಟರು.

ಅತ್ತ, ದ್ವಾರಪಾಲಕರು ಭಯಗೊಂಡು ಓಡಿದೊಡನೆಯೇ, ದೈತ್ಯ ಸೇನಾನಾಯಕನಾದ ಬಲಿಚಕ್ರವರ್ತಿಯು ನಗರದ್ವಾರ ಪ್ರದೇಶದಲ್ಲಿ ನಿಂತು, ಗುರುವಾದ ಶುಕ್ರಾಚಾರ್ಯರು ತನಗೆ ಅನುಗ್ರಹಿಸಿ ಕೊಟ್ಟಿದ್ದ ಶಂಖವನ್ನು ಹಿಡಿದು ದಿಕ್ಕುಗಳು ಮೊಳಗುವಂತೆ ಒಂದು ಬಾರಿ ಧ್ವನಿ ಮಾಡಿದನು. ಆ ಧ್ವನಿಯು, ಇತ್ತ ದ್ವಾರಪಾಲಕನ ಪ್ರಾರ್ಥನೆಯನ್ನು ಲಾಲಿಸಿ —'ಏನು, ಯಾರು ಬಂದವರು? ಭಯಕ್ಕೆ ಕಾರಣವೇನು?' ಎಂದು ಮೊದಲಾಗಿ ಪ್ರಶ್ನಿಸುತ್ತಿದ್ದ ದೇವೇಂದ್ರನಿಗೆ ಕೇಳಿಸಿತು. ಇಂದ್ರನು ಕರ್ಣರಂಧ್ರವನ್ನು ಕೊರೆದು ಹೋಗುವಂತಿದ್ದ ಆ ಮಹಾ ಶಂಖ ಧ್ವನಿಯನ್ನು ಕೇಳಿ ಪರಮಾಶ್ಚರ್ಯಪಟ್ಟು. ಅಷ್ಟು ಧೈರ್ಯದಿಂದ ತನ್ನ ರಾಜಧಾನಿಯ ಹೆಬ್ಬಾಗಿಲಿನವರೆಗೆ ಬಂದು ಯುದ್ಧಕ್ಕಾಗಿ ಕಾಲ್ಕೆರೆದು ಕರೆಯುತ್ತಿರುವವನು, ದೈತ್ಯರಾಜನಾದ ಬಲಿಯೇ ಅಲ್ಲದೆ ಮತ್ತಾರೂ ಇರಲಾರರೆಂದು ತರ್ಕಿಸಿ, ಒಡನೆ ಸಮೀಪದಲ್ಲೇ ಕುಳಿತಿದ್ದ ಗುರುವಾದ ಬೃಹಸ್ಪತ್ಯಾಚಾರ್ಯರಲ್ಲಿಗೆ ನಡೆದು,—'ಗುರುವರ್ಯರೇ, ಸಮುದ್ರಮಥನವಾದೊಡನೆಯೇ ನಡೆದ ದೇವದಾನವ ಯುದ್ಧದಲ್ಲಿ ವಜ್ರಹತನಾಗಿ ಬಿದ್ದು ಮರಣೋನ್ಮುಖನಾಗಿದ್ದ ದೈತ್ಯರಾಜ ಬಲಿಯು ಪುನಃ ನಮ್ಮ ಮೇಲೆ ದಂಡೆತ್ತಿ ಬಂದಂತಿದೆ. ಇದು ಆಶ್ಚರ್ಯವಲ್ಲವೇ? ಇಷ್ಟು ಶೀಘ್ರ ಕಾಲದಲ್ಲೇ ಆತನಿಗೆ ಇಷ್ಟುಮಟ್ಟಿನ ಧೈರ್ಯವುಂಟಾಗಲು, ಆತನು ಈ ಬಾರಿ ವಿಶೇಷ ಸೈನ್ಯ ಸಹಾಯಗಳನ್ನು ಸಂಗ್ರಹಿಸಿಕೊಂಡು ಬಲ ವಿಜೃಂಭಿತನಾಗಿ ಬಂದಿರಬೇಕು. ಗುರುವರ್ಯಾ, ಈಗಿನ ಸಂದರ್ಭವು ನಿಮಗೆ ಹೇಗೆ ತೋರುತ್ತಿರುವುದು? ಅವನ ದೈತ್ಯಸೈನ್ಯಕ್ಕೆ ಅಭಿಮುಖರಾಗಿ ನಾವೂ ದಂಡೆತ್ತಿ ಹೋದರೆ, ನಮಗೆ ಅಪಜಯವಾಗಲಾರದಲ್ಲವೆ? ಈ ಭಾಗದಲ್ಲಿ ನಾನು ನಿಶ್ಶಂಕೆಯಿಂದ ಪ್ರಯತ್ನಿಸಬಹುದಲ್ಲವೆ? ತಮ್ಮ ಸಲಹೆಯೇನು?" ಎಂದು ಪ್ರಶ್ನಿಸಿದನು.

ದೇವರಾಜನಾಡಿದ ಆ ಮಾತುಗಳನ್ನು ಕೇಳಿ, ಬೃಹಸ್ಪತ್ಯಾಚಾರ್ಯರು ಕ್ಷಣಕಾಲ ಕಣ್ಮುಚ್ಚಿ, ಭೂತ ಭವಿಷ್ಯದ್ವಿಚಾರಗಳನ್ನು ಕುರಿತು ಚಿಂತಿಸಿ, ತರುವಾಯ ಕಣ್ದೆರೆದು-'ದೇವೇಂದ್ರಾ, ನೀನು ತರ್ಕಿಸಿರುವುದು ವಾಸ್ತವವಾದುದು. ಬಲಿಯು ಶುಕ್ರಾಚಾರ್ಯರೇ ಮುಂತಾದ ದ್ವಿಜೋತ್ತಮರನ್ನು ಆಶ್ರಯಿಸಿ, ಅವರಿಗೆ ವಿಧೇಯನಾಗಿ ಅವರ ಸಲಹೆಯನ್ನನುಸರಿಸಿ ನಡೆಯಲು ಸಂಕಲ್ಪಿಸಿದನು. ಮಹಾ ತಪಸ್ಸಂಪನ್ನರೂ, ದಂಡನೀತಿ ಶಾಸ್ತ್ರಾಚಾರ್ಯರೂ ಆದ ಶುಕ್ರಾಚಾರ್ಯರು, ನಯವಿನಯ ಸಂಪನ್ನನಾದ ಆತನನ್ನು ಆದರಿಸಿ, ಆತನಿಂದ ವಿಶ್ವಜಿತ್ತೆಂಬ ಒಂದು ಮಹಾ ಯಾಗವನ್ನು ಮಾಡಿಸಿ, ಅನುಗ್ರಹಿಸಿರುವರು. ಬ್ರಾಹ್ಮಣಾನುಗ್ರಹಕ್ಕೆ ಪಾತ್ರನಾಗಿರುವ ಆತನು ಈಗ ಸಕಲ ಸೌಭಾಗ್ಯಗಳಿಗೂ ಅರ್ಹನಾಗಿರುವನು. ಬಲಿಯು ಎಂದಿನವರೆಗೆ ಸತ್ಯನಿಷ್ಠನಾಗಿ ಸಜ್ಜನನಾಗಿ ಬ್ರಾಹ್ಮಣ ದ್ರೋಹಮಾಡದೆ ಸತ್ಕಾರ್ಯಗಳಲ್ಲಿ ಆಸಕ್ತನಾಗಿ ಇರುವನೋ ಅವರೆಗೆ ಆತನ ಶ್ರೇಯಸ್ಸಿಗೆ ಕುಂದಕವುಂಟಾಗದು. ಮುಂದೊಂದುವೇಳೆ ಅವನು ಈ ಐಶ್ವರ್ಯ ಪದವಿಗಳ, ತ್ರಿಲೋಕಾಧಿಪತ್ಯದ ಮತ್ತು ಅದ್ವಿತೀಯ ಪರಾಕ್ರಮದ ಹೆಮ್ಮೆಯಿಂದ ಬ್ರಾಹ್ಮಣರ ವಿಚಾರದಲ್ಲಿ ಅನಾದರ ಭಾವವನ್ನು ಹೊಂದುವನು. ಅಂದಿನಿಂದ ಅವನ ಪರಾಜಯಕ್ಕೆ ಪ್ರಾರಂಭಿಸುವುದು. ಅವನ ಉಚ್ಛ್ರಾಯ ಕಾಲವಾಗಿರುವ ಈ ಕಾಲದಲ್ಲಿ ನೀವು ಅವನಿಗೆ ವಿರೋಧಿಸಿ, ಯುದ್ಧ ಮಾಡಲೆತ್ನಿಸಿದರೆ ಅದರಿಂದ ಯಾವ ಪ್ರಯೋಜನವೂ ಉಂಟಾಗಲಾರದು. ಮಾತ್ರವಲ್ಲ, ಅಗಾಧ ಕಷ್ಟನಷ್ಟಗಳಿಗೂ ಒಳಪಡಬೇಕಾದೀತು. ಆದುದರಿಂದ, ಈಗ ಕೆಲಕಾಲ ಎಲ್ಲಾದರೂ ತಲೆ ಮರಸಿಕೊಂಡು ವಾಸಿಸಿದ್ದು ಅವನ ವೀರ್ಯ ನಷ್ಟವಾಗುವ ಕಾಲವನ್ನೇ ನಿರೀಕ್ಷಿಸುತ್ತಿರಬೇಕು" ಎಂದು ನುಡಿದರು. ತ್ರಿಕಾಲಜ್ಞಾನಿಗಳಾದ ಬೃಹಸ್ಪತ್ಯಾಚಾರ್ಯರು ಹೇಳಿದ ಮಾತು, ಇಂದ್ರನಿಗೆ ಯುಕ್ತವೆಂದು ತೋರಿತು. ಒಡನೆ ಆತನು ಸಾವಕಾಶಮಾಡದೆ, ದೇವ ಮುಖ್ಯರನ್ನೆಲ್ಲ ಕರೆಸಿ, ದೇವಗುರುಗಳ ಎಚ್ಚರಿಕೆಯ ಮಾತನ್ನು ಅವರೆಲ್ಲರಿಗೂ ತಿಳಿಸಿ, ಎಲ್ಲರೊಂದಿಗೆ ಕಾಮರೂಪಗಳನ್ನು ಧಾರಣಮಾಡಿ ಸ್ವರ್ಗವನ್ನು ಬಿಟ್ಟು, ಯಥೇಷ್ಟವಾಗಿ ಹೊರಟುಹೋದರು. ರಾಜಧಾನಿಯನ್ನು ಬರಿದುಮಾಡಿ, ದೇವರಾಜನೇ ಮುಂತಾದವರು, ಎಲ್ಲೋ ಹೊರಟುಹೋದರೆಂಬ ಸಂಗತಿಯು

ಬಲಿಚಕ್ರವರ್ತಿಗೆ ತಿಳಿಯಿತು. ಒಡನೆಯೇ ಆತನು, ತನ್ನ ಪರಿವಾರದೊಂದಿಗೆ ನಿರಾಯಾಸವಾಗಿ ಒಳಗೆ ಪ್ರವೇಶಿಸಿ, ಅಮರಾವತಿಯನ್ನು ಸ್ವಾಧೀನಪಡಿಸಿಕೊಂಡು, ದೇವೇಂದ್ರ ಸಿಂಹಾಸನದಲ್ಲಿ ಕುಳಿತು, ತ್ರಿಲೋಕಾಧಿಪತ್ಯವನ್ನು ನಡೆಯಿಸತೊಡಗಿದನು. ಈಗ ಬಲಿಯು, ಕೇವಲ ಬಲಿಚಕ್ರವರ್ತಿ ಮಾತ್ರವಲ್ಲ - ಬಲೀಂದ್ರನೆಂದು ಹೊಗಳಿಸಿಕೊಂಡನು. ಆತನ ಅಧಿಕಾರವು, ಸ್ವರ್ಗಮರ್ತ್ಯ ಪಾತಾಳಲೋಕಗಳು ಮೂರರಮೇಲೂ ಅವ್ಯಾಹತವಾಗಿ ನಡೆಯತೊಡಗಿತು.



## ಅಧ್ಯಾಯ ೩ "ವಾಮನಾವತಾರ"

ಅಗಾಧ ಪರಿಶ್ರಮಪಟ್ಟು ಸಂಪಾದಿಸಿದ ಅಮೃತವೂ 'ಕೈಗೆ ಬಂದುದು ಬಾಯಿಗಿಲ್ಲ' ವೆಂಬಂತಾಗಿ ಅಲಭ್ಯವಾಗಿದೆ. ಮೇಲೂ ದೇವತೆಗಳೊಂದಿಗೆ ನಡೆದ ಯುದ್ಧದಲ್ಲಿ ಜಯವೂ ಪ್ರಾಪ್ತವಾಗದೆ, ಮಹದಾತಂಕಯುಕ್ತವಾಗಿದ್ದ ದೈತ್ಯಕುಲವು ಇಂದು ಸ್ವರ್ಗ ಪದವಿಯನ್ನು ಪಡೆದು ಸಂತುಷ್ಟವಾಯಿತು. ಮಹಾ ಸುಖಪ್ರದವಾದ ಆ ಪದವಿಯು, ಮತ್ತೆಂದು ಕೈ ತಪ್ಪಿಹೋಗುವುದೋ. ಇಂದ್ರಾದಿಗಳು ಹೋಗಿ ಮತ್ತಾರ ಮರೆಬಿದ್ದು ಬಲೋತ್ಸಾಹಯುತರಾಗಿ ಪುನಃ ಯುದ್ಧಕ್ಕೆ ಬರುವರೋ, ಆ ಯುದ್ಧದಲ್ಲಿ ಜಯಪರಾಜಯಗಳೆಂತಿರುವುವೋ ಎಂಬ ಶಂಕೆಯು ಸ್ವಾಭಾವಿಕವಾಗಿಯೇ ಅವರಿಗಿದ್ದಿತು. ಬಲೀಂದ್ರನು, ತನ್ನ ಮನಸ್ಸಿನಲ್ಲಿದ್ದ ಈ ಶಂಕೆಯನ್ನು ಕುರಿತು, ತನ್ನ ಗುರುಗಳಾದ ಶುಕ್ರಾಚಾರ್ಯರಲ್ಲಿ ವಿಜ್ಞಾಪಿಸಿಕೊಂಡನು. ಆಚಾರ್ಯರು ಭಯಶೀಲನಾದ ಆತನನ್ನು ಕಂಡು, ಶಿಷ್ಯವಾತ್ಸಲ್ಯಯುಕ್ತರಾಗಿ—'ಅಯ್ಯಾ ದೈತ್ಯೇಂದ್ರಾ, ಚಿಂತಿಸಬೇಡ. ಈ ಪದವಿಯನ್ನು ನೀನು ಬಹುಕಾಲ ಅನುಭವಿಸುತ್ತಾ ಸುಖವಾಗಿರುವಂತೆ ಅದಕ್ಕೆ ತಕ್ಕ ಪ್ರಯತ್ನ ಮಾಡೋಣ' ಎಂದು ಭರವಸೆ ಕೊಟ್ಟು, ಆತನಿಂದ ನೂರು ಅಶ್ವಮೇಧ ಯಾಗಗಳನ್ನು ಮಾಡಿಸಿದರು. ಹಾಗೆ ವಿಧಿವತ್ತಾಗಿ ಮಾಡಿದ ಶತಾಶ್ವಮೇ

ಧಗಳ ಅಮೋಘ ಪ್ರಭಾವದಿಂದ ಬಲೀಂದ್ರನು, ಮಹಾ ತೇಜಸ್ವಿಯಾಗಿ ತನಗೆ ಯಾರೂ ಎಣೆಯಿಲ್ಲವೆಂದು ಭಾವಿಸಿ, ಆಶ್ರಿತರಾದ ದೈತ್ಯಕುಲವನ್ನು ಆದರಿಸಿ ಪೋಷಿಸುತ್ತಾ ಅಗಾಧ ಸುಖಭೋಗಗಳನ್ನು ಅನುಭವಿಸಿಕೊಂಡಿದ್ದನು.

ಕಶ್ಯಪಬ್ರಹ್ಮರಿಗೆ ಅನೇಕಮಂದಿ ಪತ್ನಿಯರಿದ್ದರು. ಅವರಲ್ಲಿ ದಿತಿ, ಎಂಬಾಕೆಯಲ್ಲಿ ದೈತ್ಯರೂ, ಅದಿತಿ ಎಂಬಾಕೆಯಲ್ಲಿ ದೇವತೆಗಳೂ ಉದ್ಭವಿಸಿದರು. ಸವತಿಯರ ಮಕ್ಕಳಾದುದರಿಂದ, ದೈತ್ಯರಿಗೂ ದೇವತೆಗಳಿಗೂ ವೈರವು ಜನ್ಮಸಿದ್ಧವಾಗಿದ್ದು, ಅವರು ಅನೇಕವೇಳೆ ಘೋರ ಯುದ್ಧಮಾಡಿ ಒಬ್ಬರನ್ನೊಬ್ಬರು ಸೋಲಿಸಿ ಅಂಕೆಯಲ್ಲಿಟ್ಟುಕೊಂಡು ಆಳಬೇಕೆಂದು ಅಪೇಕ್ಷಿಸುತ್ತಿದ್ದುದು ಸ್ವಾಭಾವಿಕವಾಗಿಯೇ ಇದ್ದಿತು. ಈಗ ಮೇಲ್ಕಂಡಂತೆ ದೇವತೆಗಳು ರಾಜ್ಯಭ್ರಷ್ಟರಾಗಿ ದಿಕ್ಕಿಲ್ಲದವರಂತೆ ಓಡಿಹೋದುದನ್ನೂ ದೈತ್ಯರು ಸ್ವರ್ಗರಾಜಧಾನಿಯನ್ನು ಕೈವಶ ಮಾಡಿಕೊಂಡು ತ್ರಿಲೋಕಾಧಿಪತ್ಯ ಮಾಡುತ್ತಾ ಸಮಸ್ತ ಸುಖಸಂತೋಷಗಳನ್ನೂ ಅನುಭವಿಸುತ್ತಿದ್ದುದನ್ನೂ ಕೇಳಿ ದೇವಮಾತೆಯಾದ ಅದಿತಿಯು ಮಹಾ ವ್ಯಸನಾಕ್ರಾಂತಳಾಗಿ, ದಿಕ್ಕಿಲ್ಲದವಳಂತೆ ದುಃಖಿಸುತ್ತಿದ್ದಳು. ಹೀಗಿರುತ್ತಿರಲು, ಒಂದು ದಿನ ಕಶ್ಯಪ ಮಹರ್ಷಿಗಳು ತಾವು ಬಹು ಕಾಲದಿಂದ ನೆರವೇರಿಸಿಕೊಂಡಿದ್ದ ತಪಸ್ಸಮಾಧಿಯನ್ನು ಮುಗಿಸಿಕೊಂಡು, ತಮ್ಮ ಪತ್ನಿಯಾದ ಅದಿತೀದೇವಿಯಿದ್ದ ಆಶ್ರಮವನ್ನು ಕುರಿತು ಪ್ರಯಾಣ ಮಾಡಿದರು. ಆಗ ಆ ಆಶ್ರಮವು ಎಂದಿನಂತೆ ಕಾಂತಿಯುಕ್ತವಾಗಿಲ್ಲದೆ ಮ್ಲಾನವಾಗಿದ್ದಿತು. ಗಿಡಬಳ್ಳಿಗಳು ತಕ್ಕ ಪೋಷಕರಿಲ್ಲದೆ ಬಾಡಿದ್ದುವು. ಗಿಳಿ ಕೋಗಿಲೆ ಮೊದಲಾದ ಪಕ್ಷಿಗಳು ಎಂದಿನಂತೆ ಸಂತೋಷದಿಂದ ಗಾನಮಾಡದೆ, ಉತ್ಸಾಹದಿಂದ ಸಂಚರಿಸದೆ, ಮೌನವನ್ನು ಹೊಂದಿ ಕುಳಿತಿದ್ದುದು ಕಾಣಿಸಿತು. ಮಾರ್ಗಗಳಲ್ಲಿ ಉದುರಿದ ಮರಗಿಡಗಳ ಒಣಗಿದ ಎಲೆಗಳನ್ನು ಬಳಿದು ಎಸೆಯದೆ ಇದ್ದುದರಿಂದ ಎಲ್ಲೆಲ್ಲೂ ಕಸವು ಕುಪ್ಪೆಕುಪ್ಪೆಯಾಗಿ ಬಿದ್ದು ಅಸಹ್ಯತೋರುತ್ತಿದ್ದಿತು. ಕಶ್ಯಪರು ಆಶ್ರಮದ ಹೊರಭಾಗದಲ್ಲಿ ಕಂಡುಬಂದ ಈ ಸ್ಥಿತಿಯನ್ನು ಕಂಡು, ಯಜಮಾನಿತಿಯ ಅಸಂತೋಷವೇ ಇದಕ್ಕೆ ಕಾರಣವೆಂದು ಊಹಿಸಿಕೊಂಡು, ಆಶ್ರಮವನ್ನು ಹೊಕ್ಕರು. ಎಂದಿ

ನಂತೆ, ಅದಿತಿಯು ಕೈಯಲ್ಲಿ ಜಲವನ್ನು ಹಿಡಿದು ಎದುರುಗೊಂಡು ಹಸನ್ಮುಖದಿಂದ ಸ್ವಾಗತವನ್ನು ಬಯಸಿ ಒಳಕ್ಕೆ ಕರೆದೊಯ್ಯಲಿಲ್ಲ. ಆ ಪರಿಸ್ಥಿತಿಯು ಅವರ ಮನಸ್ಸಿಗೆ ವಿಚಾರವನ್ನುಂಟುಮಾಡದಿರಲಿಲ್ಲ. ತಮ್ಮ ಪತ್ನಿಗೆ ಅಕಸ್ಮಾತ್ತಾಗಿ ಇಷ್ಟುಮಟ್ಟಿನ ಅನಾದರಭಾವವು ಉಂಟಾಗಲು ಕಾರಣವೇನಿರಬಹುದೆಂಬುದು ಅವರಿಗೆ ತೋರದಾಯಿತು. ಆದರೂ ಪರೀಕ್ಷಿಸೋಣವೆಂದು ಒಳಹೊಕ್ಕು ನಡೆದು ಆಶ್ರಮದ ಒಂದೊಂದು ಸ್ಥಳವನ್ನೂ ಹುಡುಕಿದರು. ಕೊನೆಗೆ ಒಂದು ಮೂಲೆಯಲ್ಲಿ, ಕೆದರಿದ ತಲೆಯಿಂದಲೂ, ಮಾಸಿದ ಉಡಿಗೆಯಿಂದಲೂ, ಉತ್ಸಾಹಹೀನವಾದ ನೋಟದಿಂದಲೂ ಅಧೋವದನಳಾಗಿ ಕುಳಿತಿದ್ದ ಅದಿತಿಯು ದೃಷ್ಟಿಗೋಚರಳಾದಳು. ಆಕೆಯನ್ನು ಆ ಸ್ಥಿತಿಯಲ್ಲಿ ನೋಡಿದ ಕಶ್ಯಪರು, ಯಾವುದೋ ಅಗಾಧವಾದ ಒಂದು ಮನೋವ್ಯಥೆಯು ಆಕ್ರಮಿಸಿ ಆಕೆಯನ್ನು ಸಂಕಟಪಡಿಸುತ್ತಿರುವುದೆಂದು ತಿಳಿದು, ಆಕೆಯನ್ನೇ ಕೇಳಿ ತಿಳಿಯೋಣವೆಂದು ಆ ಕಡೆಗೆ ನಡೆದು ಬರುತ್ತಿದ್ದರು. ಅಷ್ಟರಲ್ಲಿ ಅಕಸ್ಮಾತ್ತಾಗಿ ಮುಖವೆತ್ತಿ ನೋಡಿದ ಆಕೆಗೆ ಪತಿಯು ದೃಷ್ಟಿಗೋಚರವಾಗಲು, ಆ ಪತಿವ್ರತಾಶಿರೋಮಣಿಯು ಒಡನೆ ಮೇಲಕ್ಕೆದ್ದು ನಾಲ್ಕು ಹೆಜ್ಜೆ ಮುಂದೆ ಬಂದು ಯಥಾವಿಧಿ ಸತ್ಕರಿಸಿ ಉಚಿತಾಸನವನ್ನಿತ್ತು ಕುಳ್ಳಿರಿಸಿದಳು.

ಕಶ್ಯಪರು ತ್ರಿಕಾಲಜ್ಞಾನಿಯಾದುದರಿಂದ ಆಕೆಯ ಮುಖದರ್ಶನಮಾತ್ರದಿಂದಲೇ, ಆಕೆಯ ವ್ಯಸನಕ್ಕೆ ಕಾರಣವೇನೆಂಬುದು ಅವರಿಗೆ ತಿಳಿದುಹೋಯಿತು. ಆದರೂ ಆ ಸಂಗತಿಯೇನೆಂಬುದನ್ನು ಆಕೆಯಿಂದಲೇ ತಿಳಿಯೋಣವೆಂದುಕೊಂಡು,—'ಪ್ರಿಯೇ, ಸಾಧ್ವೀಮಣಿ, ಇದೇನು, ನಿನ್ನ ಮುಖವು ಬಹುಮಟ್ಟಿಗೆ ಕಾಂತಿಗುಂದಿರುವುದಲ್ಲ, ಇದಕ್ಕೆ ಕಾರಣವೇನು ? ನಿನ್ನ ಮನಶ್ಶಾಂತಿಗೆ ವಿಕಲ್ಪವನ್ನುಂಟುಮಾಡುವ ಯಾವ ಕಾರ್ಯವು ಆಶ್ರಮದಲ್ಲಿ ನಡೆಯಿತೆಂದು ವ್ಯಸನಾಕ್ರಾಂತಳಾಗಿರುವೆ ? ಗೋಹಿಂಸೆಯಾಗಲೀ, ಬ್ರಾಹ್ಮಣರಿಗೆ ಅಪಚಾರವಾಗಲೀ ಅತಿಥಿಗಳಿಗೆ ಅನಾದರಣೆಯಾಗಲೀ ಇಲ್ಲಿ ನಡೆಯಿತೆ ! ನಾನು ತಪಸ್ಸಿಗೆ ಹೋಗುವಾಗ್ಗೆ ನಿನ್ನ ವಶದಲ್ಲಿರಿಸಿ ಹೋದ ನಮ್ಮ ಗೃಹಾಗ್ನಿಗಳನ್ನು ಯಥಾವಿಧಿಯಾಗಿ ಹವಿರ್ಭಾಗಗಳಿಂದ ಆರಾಧಿಸುವುದರಲ್ಲಿ ಏನಾದರೂ ಕೊರತೆಯುಂಟಾಯಿತೆಂದು ನಿನ್ನ ಮನಸ್ಸಿನಲ್ಲಿ

ನೊಂದುಕೊಂಡಿರುವೆಯಾ? ನಾನು ಮಾತ್ರ ಯೋಗಮಾರ್ಗವನ್ನವ ಲಂಬಿಸಿ ತಪೋನಿರತನಾಗಿರುವೆನೆಂದೂ, ನಿನಗೆ ಆ ಪ್ರಾಪ್ತಿಯಿಲ್ಲವೆಂದೂ ಯೋಚಿಸುತ್ತಿರುವೆಯಾ? ಹಾಗೆ ಚಿಂತಿಸಲಾಗದು. ಗೃಹಧರ್ಮದಲ್ಲಿರ ತಕ್ಕವರು. ಯೋಗಾಭ್ಯಾಸವಿಲ್ಲದಿದ್ದರೂ ತಮ್ಮ ಸ್ವಧರ್ಮದಿಂದಲೇ ಯೋಗಫಲವನ್ನು ಹೊಂದುತ್ತಿರುವರೆಂಬುದನ್ನು ತಿಳಿ. ನನ್ನ ವಿಯೋಗ ದಿಂದಲೇನಾದರೂ ಮನಸ್ಸಿಗೆ ಬೇಸರ ತೋರಿತೆ? ನಿನ್ನ ಮಕ್ಕಳಾದ ದೇ ವತೆಗಳೆಲ್ಲರೂ ಕ್ಷೇಮವಾಗಿರುವರಷ್ಟೆ! ನಿನ್ನ ವ್ಯಾಕುಲಕ್ಕೆ ಕಾರಣವೇ ನುಂಟಾಯಿತು? ನಾನು ಆಶ್ರಮದಲ್ಲಿಲ್ಲದಿದ್ದ ಕಾಲದಲ್ಲಿ ಇತರರ್‍ಯಾರಿಂದ ಲಾದರೂ ಆಶ್ರಮಕ್ಕೆ ಏನಾದರೂ ತೊಂದರೆಯುಂಟಾಯಿತೇ? ದೇವಿ, ನೀನೇಕೆ ವ್ಯಸನಾಕ್ರಾಂತಳಾಗಿರುವೆ?" ಎಂದು ಪ್ರಶ್ನಿಸಿದರು. ಪತಿಯ ಆ ಪ್ರೇಮಪೂರ್ಣ ವಚನಗಳನ್ನು ಕೇಳಿ, ಅದಿತಿಯು,—'ದೇವಾ, ಮಹಾ ಮಹಿಮರಾದ ತಮ್ಮ ಈ ಆಶ್ರಮವನ್ನು ಪ್ರವೇಶಿಸಿ ಇದಕ್ಕೆ ಏನಾದರೂ ತೊಂದರೆಯನ್ನುಂಟುಮಾಡುವ ಧೈರ್ಯವು ತ್ರಿಲೋಕದಲ್ಲಿ ಯಾವನಿಗಿರು ವುದು? ನಾನು, ತಮ್ಮ ವಿಯೋಗ ದುಃಖದಿಂದ ಮರುಗುತ್ತಿರುವೆನಾ ದರೂ, ಗೋಶುಶ್ರೂಷೆಯಲ್ಲಾಗಲೀ ದೇವಬ್ರಾಹ್ಮಣಾರಾಧನೆಯಲ್ಲಾ ಗಲೀ, ಅತಿಥ್ಯಭ್ಯಾಗತರ ಸೇವೆಯಲ್ಲಾಗಲೀ ಎಂದೂ ಯಾವ ಬಗೆಯ ಲೋಪಕ್ಕೂ ಅಸ್ಪದವುಂಟಾಗದಂತೆ ಜಾಗರೂಕಳಾಗಿದ್ದೇನೆ. ಮಹಾ ತಪಸ್ಸಂಪನ್ನರಾದ ತಮ್ಮ ಪಾಣಿಗ್ರಹಣ ಮಾಡಿದ ನಾನು ಯಾವ ಕಾರಣ ದಿಂದಲಾಗಲೀ, ಗೃಹಾಗ್ನಿಗೆ ಹವಿರ್ಭಾಗಗಳನ್ನರ್ಪಿಸುವುದರಲ್ಲಿ ಲೋಪ ಮಾಡಬಲ್ಲೆನೆ? ತಾವು ಹಾಗೆಂದಿಗೂ ಚಿಂತಿಸಬಾರದು. ನಾನು ಸದಾ ತಮ್ಮ ಪಾದ ಕಮಲಗಳನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ, ಸಮಸ್ತ ಗೃಹಿ ಣೀ ಧರ್ಮಗಳನ್ನೂ ಲೇಶಮಾತ್ರವೂ ಲೋಪವಿಲ್ಲದೆ ನಡೆಯಿಸಿಕೊಂಡು ಬರುತ್ತಿದ್ದೇನೆ. ಹೀಗಿದ್ದರೂ ತಾವು ಅಪ್ಪಣೆ ಕೊಡಿಸಿದಂತೆ ನನ್ನ ಮನ ಸ್ಸು ಒಂದಾನೊಂದು ವ್ಯಸನಕ್ಕೀಡಾಗಿ ವ್ಯಥೆಪಡುತ್ತಿದೆ. ಅದನ್ನು ವಿಜ್ಞಾ ಪಿಸುತ್ತೇನೆ. ಲಾಲಿಸಬೇಕು' ಎಂದು ನುಡಿದು ಪುನಃ ಹೇಳತೊಡಗಿದಳು. 'ನಾಥಾ, ಹೆತ್ತ ಕರುಳಾದುದರಿಂದ ಮರುಗುತ್ತಿದೆ! ಆ ಭಾಗದಲ್ಲಿ ನನ್ನ ಲೋಪವಿದ್ದರೆ ಮನ್ನಿಸಬೇಕು. ನನ್ನ ಸವತಿಯ ಮಕ್ಕಳಾದ ದೈತ್ಯರು

ಪ್ರಬಲಿಸಿ ದೇವರಾಜ್ಯವನ್ನಾಕ್ರಮಿಸಿರುವರು. ನನ್ನ ಪುತ್ರರಾದ ದೇವತೆಗಳು, ತ್ರಿಲೋಕಾಧಿಪನಾದ ದೇವೇಂದ್ರನೊಡಗೂಡಿ ರಾಜ್ಯಭ್ರಷ್ಟರಾಗಿ ಎಲ್ಲೋ ಹೊರಟುಹೋಗಿದ್ದಾರೆ. ಆ ನನ್ನ ಮಕ್ಕಳು ಎಲ್ಲಿ ವಾಸಿಸುತ್ತಿರುವರೆಂಬ ಸಂಗತಿ ಕೂಡ ನನಗೆ ತಿಳಿಯದು. ಅವರನ್ನು ಹಾಗೆ ಸ್ವರ್ಗದಿಂದ ಹೊರಡಿಸಿದ ದೈತ್ಯರು, ಸ್ವರ್ಗ ರಾಜ್ಯವನ್ನು ಸ್ವಾಧೀನಗೊಳಿಸಿಕೊಂಡು ಸಮಸ್ತ ಸುಖಸಂತೋಷಗಳನ್ನೂ ಅನುಭವಿಸುತ್ತಿರುವರು. ದೇವತೆಗಳೂ ದೈತ್ಯರೂ ಇಬ್ಬರೂ ನಿಮಗೆ ಪುತ್ರರೇ ಆದುದರಿಂದ ಅವರಲ್ಲಿ ಇಬ್ಬರೂ ಸಮಾನರೇ ಎಂಬ ವಿಷಯದಲ್ಲಿ ಸಂಶಯವಿಲ್ಲ. ಆ ಇಬ್ಬರ ಶ್ರೇಯಶ್ಚಿಂತನೆಯೂ ತಮಗೆ ಇರಬೇಕಾದುದು ಸಹಜವು! ಆದರೂ, ಪುತ್ರವಾತ್ಸಲ್ಯದಿಂದ ದುಃಖಾಕ್ರಾಂತೆಯಾಗಿ ತಮ್ಮ ಶರಣಾಗತಳಾಗಿರುವ ನನ್ನ ಕೋರಿಕೆಯನ್ನು ಈಡೇರಿಸತಕ್ಕದು, ಭಕ್ತವಾತ್ಸಲ್ಯ ಪೂರ್ಣರಾದ ತಮಗೆ ಕರ್ತವ್ಯವಲ್ಲವೆ? ನಾಥಾ, ತಮ್ಮ ಹಸ್ತಗ್ರಹಣ ಮಾಡಿದುದು ಮೊದಲು ಈವರೆಗೆ, ಯಾವ ಬಗೆಯ ದುಃಖವನ್ನೂ ನಾನು ಅರಿತವಳಲ್ಲ. ಇಂದು ದುರ್ವಿಧಿಯಿಂದ ಈ ದುಃಖವು ನನ್ನ ಭಾಗಕ್ಕೆ ಪ್ರಾಪ್ತವಾಗಿದೆ. ಈ ಸಂದರ್ಭದಲ್ಲಿ ತಾವು, ಕೃಪೆಯಿಟ್ಟು, ನನ್ನ ಮಕ್ಕಳು ತಮ್ಮ ಐಶ್ವರ್ಯವನ್ನೂ, ಪದವಿಯನ್ನೂ, ವಾಸಸ್ಥಾನವನ್ನೂ ಬಲಾಢ್ಯರಾದ ದೈತ್ಯರಿಂದ ಪುನಃ ಸಂಪಾದಿಸಿಕೊಳ್ಳುವ ಒಂದು ಉಪಾಯವನ್ನು ಯೋಚಿಸಿ ನಮ್ಮನ್ನು ಕಾಪಾಡಬೇಕು. ತಮ್ಮ ಹೊರತು ಈ ವೇಳೆಯಲ್ಲಿ ನಮ್ಮನ್ನು ರಕ್ಷಿಸತಕ್ಕವರು ಮತ್ತಾರೂ ಇಲ್ಲ'' ಎಂದು ಅಂಗಲಾಚಿಕೊಂಡಳು.

ಸಾಧ್ವಿಯಾದ ಅದಿತಿದೇವಿಯು ಮಾತೃಪ್ರೇಮವಶಳಾಗಿ ಹೇಳಿಕೊಂಡ ಮಾತುಗಳನ್ನೆಲ್ಲ ಸಾವಧಾನದಿಂದ ಕೇಳಿದ ಕಶ್ಯಪರು—'ಸಾಧ್ವೀಮಣಿ, ಪ್ರಾಜ್ಞಳಾದ ನೀನೂ ಹೀಗೆ ಪುತ್ರಮೋಹಕ್ಕೆ ತಗುಲಿ ವ್ಯಸನಕ್ಕೆ ಮನಸ್ಸನ್ನು ಕೊಡಬಹುದೆ? ಮನುಷ್ಯನಿಗೆ ಕಾಲಕಾಲಕ್ಕೆ ಬಂದೊದಗುವ ಭಯಶೋಕ ಸುಖದುಃಖಾದಿಗಳೆಲ್ಲಕ್ಕೂ ಭಗವಂತನೇ ಕಾರಣಕರ್ತನೆಂಬುದನ್ನು ಮರೆತೆಯಾ? ಇದೆಲ್ಲವೂ ಭಗವನ್ಮಾಯೆಯೆಂದು ನಂಬು. ಈ ಮಾಯೆಯನ್ನು ಅತಿಕ್ರಮಿಸಿ ನಡೆಯುವುದು ಬ್ರಹ್ಮರುದ್ರಾದಿಗಳಿಂದಲೂ ಅಸಾಧ್ಯವಾದ ಕಾರ್ಯವು. ತಾಯಿ ಮಕ್ಕಳು ಬಂಧು ಬಾಂಧವರು ಎಂಬೀ

ಸಂಬಂಧಗಳೆಲ್ಲವೂ, ಪಂಚಭೂತ ಪರಿಣಾಮ ರೂಪದಿಂದ ತೋರುತ್ತಿರುವ ದೇಹವನ್ನನುಸರಿಸಿ ಏರ್ಪಟ್ಟವುಗಳೆಂದು ತಿಳಿ. ಪಂಚಭೂತಗಳಿಗೆ ಅತ್ಯಂತ ವಿಲಕ್ಷಣ ರೀತಿಯಿಂದಲಿರುವ ಆತ್ಮಕ್ಕೂ, ಈ ಬಾಂಧವ್ಯಾದಿಗಳಿಗೂ ಏನೂ ಸಂಬಂಧವಿಲ್ಲ. ಪ್ರಾಜ್ಞರು ಕೇವಲ ಆತ್ಮಭಾವದಿಂದಲೇ ಜಗತ್ತನ್ನು ಕುರಿತು ವಿಚಾರ ಮಾಡಬೇಕಲ್ಲದೆ, ಈ ಪ್ರಾಪಂಚಿಕ ಸಂಬಂಧ ಬಾಂಧವ್ಯಗಳನ್ನು ಯೋಚಿಸುವುದಾದರೆ, ಕೊನೆಯಿಲ್ಲದ ವ್ಯಸನವಲ್ಲದೆ ಮತ್ತೇನೂ ಪ್ರಯೋಜನವುಂಟಾಗದು. ಆದುದರಿಂದ ಭದ್ರೇ-ದೇಹಾತ್ಮ ಭ್ರಮೆಯಿಂದ ನಿನಗೆ ಪ್ರಾಪ್ತವಾಗಿರುವ ಪುತ್ರವ್ಯಾಮೋಹವೆಂಬ ಈ ಅಜ್ಞಾನವನ್ನು ದೂರೀಕರಿಸಿ ಸ್ವಸ್ಥಚಿತ್ತಳಾಗು'' ಎಂದು ಬೋಧಿಸಿದರು.

ಕಶ್ಯಪರು ಹೇಳುತ್ತಿದ್ದ ಆ ಮಾತುಗಳನ್ನೆಲ್ಲ ಸಾವಧಾನ ಚಿತ್ತದಿಂದ ಆಲಿಸುತ್ತಿದ್ದ ಅದಿತೀದೇವಿಯು—'ನಾಥಾ, ತಾವು ಹೇಳುವುದು ವಾಸ್ತವ. ವಿಲಕ್ಷಣ ರೀತಿಯಿಂದ ತೋರುತ್ತಿರುವ ಆತ್ಮ ವಸ್ತುವಿಗೂ, ತಾಯಿ ಮಕ್ಕಳೆಂಬ ಬಾಂಧವ್ಯದಿಂದ ದೇಹಧಾರಿಗಳಾಗಿರುವ ನಮಗೂ ಸಂಬಂಧವಿಲ್ಲವೆಂದೂ, ನಮ್ಮ ಮನಸ್ಸನ್ನು ನಿತ್ಯವಸ್ತುವಾದ ಆತ್ಮನಲ್ಲಲ್ಲದೆ, ಅಶಾಶ್ವತಗಳಾದ ಈ ಪ್ರಾಪಂಚಿಕ ವಸ್ತುಗಳಲ್ಲಿ ಇಡತಕ್ಕದು ಯುಕ್ತವಲ್ಲವೆಂದೂ ಬಲ್ಲೆನು! ಆದರೆ ನಾಥಾ, ತಾವು ಅವರಿಗೆ ಪ್ರಾಪ್ತವಾದ ಕಷ್ಟ ಕಾರ್ಪಣ್ಯಗಳಿಗೆ ಭಗವನ್ಮಾಯೆಯೇ ಕಾರಣವೆಂದಂತೆಯೇ ಲೋಕಯಾತ್ರೆಯು ಅವ್ಯಾಹತವಾಗಿ ಸಾಗುವುದಕ್ಕಾಗಿ, ಪ್ರಾಣಿಗಳ ಮನಸ್ಸನ್ನು ಆಕ್ರಮಿಸಿಕೊಂಡಿರುವ ಈ ಮೋಹಕ್ಕೂ ಆ ಭಗವನ್ಮಾಯೆಯೇ ಕಾರಣವೆಂದು ಯೋಚಿಸಿದರೆ ಅದರಲ್ಲಿ ತಪ್ಪಿಲ್ಲವಷ್ಟೆ! ತಾಯಿಯಾದವಳು ತಾನು ಹೆತ್ತ ಮಗುವನ್ನು ತನ್ನದೆಂಬ ಮೋಹಬದ್ಧಳಾಗಿ ಪೋಷಿಸದೆ ಕೈಬಿಟ್ಟರೆ, ನಿಸ್ಸಹಾಯಕವಾದ ಆ ಶಿಶುವು ವೃದ್ಧಿಯಾಗುವುದೆಂತು? ಯಾವುದಾದರೊಂದು ಅದ್ಭುತ ಪರಿಸ್ಥಿತಿಯೊದಗಿ, ಲೋಕದಲ್ಲಿರುವ ಮನುಷ್ಯರೆಲ್ಲರೂ, ಒಮ್ಮೆಗೇ ಪರಮ ವೈರಾಗ್ಯಶೀಲರಾಗಿ, ಸಕಲವನ್ನೂ ಆತ್ಮಭಾವನೆಯಿಂದಲೇ ನೋಡುತ್ತಾ, ಪ್ರಾಪಂಚಿಕ ವಿಷಯಗಳಲ್ಲಿ ಮೋಹವನ್ನು ತೊರೆದು ಅನಾದರಭಾವವನ್ನು ತೋರಿಸತೊಡಗುವರೆಂದು ಕಲ್ಪಿಸೋಣ! ಅಂತಹ ಸ್ಥಿತಿಯಲ್ಲಿ ನಾಥಾ, ಲೋಕವು ಎಂದಿನಂತೆಯೇ ಅಭಿವೃದ್ಧಿ ಸ್ಥಿತಿ

ಯಲ್ಲೇ ಇರುವುದೆಂದು ಭಾವಿಸುವಿರಾ? ಬಂಧುಬಾಂಧವರಲ್ಲೂ, ಪತ್ನೀಪುತ್ರರಲ್ಲೂ ಕೇವಲ ನನ್ನದು ನನ್ನವರೆಂಬ ಹುಚ್ಚು ಮಮತೆಯನ್ನು ತೊರೆದು, ದೃಷ್ಟಿಯು ಪಾರತ್ರಿಕಾಭಿವೃದ್ಧಿಯ ಕಡೆಗೆ ಇರಬೇಕಾದರೂ, ಅವರುಗಳೊಂದಿಗಿದ್ದು ನಡೆಯಿಸುವ ಸಂಸಾರ ಯಾತ್ರೆಯನ್ನು ಭಗವತ್ಸೇವಾ ರೂಪಯಜ್ಞವೆಂಬ ಭಾವನೆಯಿಂದಲೇ ನೋಡಬೇಕೆಂಬುದು ತಾವು ಹೇಳಿದ ತತ್ವದ ಅಭಿಪ್ರಾಯವೆಂದು ಭಾವಿಸುತ್ತೇನೆ. ಆ ಬಗೆಯ ಉನ್ನತ ಭಾವದಿಂದ ಪ್ರೇರಿತರಾಗಿ ಸಂಸಾರದಲ್ಲೇ ಇದ್ದರೂ, ಬಂಧುಬಾಂಧವರೊಂದಿಗೂ, ಇತರ ಹಲವು ಪ್ರಾಪಂಚಿಕ ವಸ್ತು ವಿಶೇಷಗಳೊಂದಿಗೂ ಬೆರೆದಿದ್ದರೆ, ಅದರಿಂದ ಏನೂ ದೋಷವುಂಟಾಗದೆಂಬುದು ನನ್ನ ನಂಬಿಕೆ. ಇದು ಸರಿಯೇ?' ಎಂದು ಪ್ರಶ್ನಿಸಿದಳು.

ಕಶ್ಯಪರು, ತಮ್ಮ ಪತ್ನಿಯು ಬಹು ಸುಲಭವಾಗಿಯೇ ತಮ್ಮನ್ನು ಬಾಯಿ ಮುಚ್ಚಿಸಿದುದನ್ನು ತಿಳಿದು, ಆಕೆಯ ಆಧ್ಯಾತ್ಮಜ್ಞಾನದ ನಿಷ್ಠೆಯ ಸ್ಥಿತಿಗಾಗಿ ಪರಮ ಸಂತೋಷಪಟ್ಟು—'ಪ್ರಿಯೇ, ನೀನು ಹೇಳುವುದು ವಾಸ್ತವ ಸಂಗತಿ. ಭಗವನ್ಮಾಯೆಯಿಂದ ಬದ್ಧರಾಗಿಯೇ ಪ್ರಾಣಿಗಳು ಅನಾದಿ ಕಾಲದಿಂದಲೂ ಲೋಕಯಾತ್ರೆಯನ್ನು ಸಾಗಿಸಿಕೊಂಡು ಬರುತ್ತಿರುವರು. ಈ ವಿಷಯದಲ್ಲಿ ಸಂದೇಹವಿಲ್ಲ. ಆದರೆ, ನಿನ್ನ ಮಕ್ಕಳಿಗೆ ಕಷ್ಟ ಬಂತೆಂಬ ಕಾರಣದಿಂದ, ದೈತ್ಯ ದಾನವರನ್ನು ದ್ವೇಷದೃಷ್ಟಿಯಿಂದ ನೋಡಿದೆಯೋ ಎಂದು ಸಂದೇಹಿಸಿದೆ'' ಎಂದು ಸುಮ್ಮನಾದರು. ಕಟಕಿಯಾದ ಆ ಮಾತು ಅದಿತಿದೇವಿಯ ಮನಸ್ಸನ್ನು ಸ್ವಲ್ಪ ಮಾತ್ರ ಚುಚ್ಚುವಂತಿರಲು, ದೇವಿಯು ಒಂದು ಬಾರಿ ಸಿಟ್ಟುಸಿರುಬಿಟ್ಟು—'ಪ್ರಾಣಮನೋಹರ, ನನ್ನ ಮನಸ್ಸಿನಲ್ಲಿ ಇನ್ನೂ ಆ ಬಗೆಯ ದ್ವೇಷಾಸೂಯೆಗಳೂ, ಲೋಭಿತನ ಕ್ಷುದ್ರತನಗಳೂ ಇದ್ದರೆ, ನಾನು ಮಹಾ ತಪಸ್ವಿಗಳಾದ ತಮ್ಮ ಅರ್ಧಾಂಗಿಯಾಗಿರಲು ಅದೆಂತು ಅರ್ಹಳಾಗುವೆನು? ನನ್ನ ಮನಸ್ಸು ಅಂತಹ ನೀಚವರ್ತನೆಯುಳ್ಳುದೆಂದು ಭಾವಿಸಲಾಗದು. ನನ್ನ ಮಗ ಮಹೇಂದ್ರನ ಪಾಣಿಗ್ರಹಣಮಾಡಿ, ತ್ರಿಲೋಕೇಶ್ವರನೊಂದಿಗೆ ನವರತ್ನ ಸಿಂಹಾಸನದಲ್ಲಿ ಮಂಡಿಸಿ, ಸೂರ್ಯನ ಬಿಸಿಲನ್ನು ಸಹ ಕಾಣದಂಥ ನನ್ನ ಸೊಸೆ ಶಚೀದೇವಿಯು, ಶತ್ರುಗಳಾದ ಭಯಂಕರ ದಾನವರು ದಂಡೆತ್ತಿ ಬಂದ

ರೆಂದು ತಿಳಿದು ಭಯಗೊಂಡು ತತ್ತಳಿಸುತ್ತ, ಎದೆಹಿ ಡುಗ್ಗುರಿಸುತ್ತಾ, ಎಲ್ಲಿ ಕಾಡು ಮೇಡುಗಳಲ್ಲಿ ಸುತ್ತುತ್ತಿರುವಳೋ, ಬಾಲಕ ಜಯಂತನು ಪ್ರಾಣಭಯದಿಂದ ಕಂದಿ ಕುಂದಿ ಬಸವಳಿದು ಹೊತ್ತುಹೊತ್ತಿಗೆ ನಿದ್ರಾಹಾರಗಳನ್ನು ಕಾಣದೆ ಎಲ್ಲಿ ಅಲೆಯುತ್ತಿರುವನೋ, ನನ್ನ ಪ್ರೇಮ ಪುತ್ರನಾದ ಇಂದ್ರನು-ಸುಧರ್ಮ ಸಭೆಯಲ್ಲಿ ರತ್ನಸಿಂಹಾಸನಾರೂಢನಾಗಿ ಮೂವತ್ತೂರುಕೋಟಿ ದೇವತೆಗಳಿಂದ ಕೈಮುಗಿಸಿಕೊಳ್ಳುತ್ತಾ, ಗಂಧರ್ವ ಕಿನ್ನರರು ಹೊಗಳುತ್ತಿರಲು, ವಿದ್ಯಾಧರರು ಚಾಮರಾದಿಗಳನ್ನು ಬೀಸುತ್ತಿರಲು, ಮಹಾ ವೈಭವದಿಂದ ಒಡ್ಡೋಲಗದಲ್ಲಿ ವಿರಾಜಿಸುತ್ತಿದ್ದನನ್ನಾ ಕಂದ ಇಂದ್ರನು, ಅಕ್ಕಟಾ ಇಂದು ಯಾವ ಗುಡ್ಡಗಾಡುಗಳಲ್ಲಿ ಪರದೇಶಿಯಂತೆ ಅಲೆಯುತ್ತಿರುವನೋ ಎಂಬ ಚಿಂತೆಯು ಮನಸ್ಸನ್ನು ಬಾಧಿಸಿತಲ್ಲದೆ, ನಾಥಾ ನಾನು ಯಾರನ್ನೂ ದ್ವೇಷಿಸುವವಳಲ್ಲ. ಈಗಲೂ ಈ ದೀನಳ ಕೋರಿಕೆಯನ್ನು ದಿವ್ಯಚಿತ್ತಕ್ಕೆ ತಂದು ಆ ನನ್ನ ಮಕ್ಕಳಿಗೆ ಶುಭವುಂಟಾಗುವಂತೆ ಏನಾದರೊಂದು ಉಪಾಯ ಮಾಡಬೇಕೆಂದು ಪ್ರಾರ್ಥಿಸುತ್ತೇನೆ'' ಎಂದು ನುಡಿದಳು.

ಮಹಾ ಸಾಧ್ವಿಯಾದ ಆಕೆಯ ಮನಸ್ಸು ಬಹು ನೊಂದಿದೆಯೆಂದು ತಿಳಿದ ಕಶ್ಯಪರು, ದಯಾರ್ದ್ರ ಹೃದಯರಾಗಿ—''ಪ್ರೇಯಸೀ, ಚಿಂತಿಸದಿರು, ಶ್ರೀಮನ್ನಾರಾಯಣನನ್ನು ಉದ್ದೇಶಿಸಿ ಆರಾಧನೆ ಮಾಡು. ಕರುಣಾನಿಧಿಯಾದ ಭಗವಾನನ ಅನುಗ್ರಹದಿಂದ ನಿನ್ನ ಇಷ್ಟಾರ್ಥ ಸಿದ್ಧಿಯಾಗುವುದು'' ಎಂದರು. ಅದಿತಿಯು,—''ಪ್ರಾಣೇಶಾ, ಸರ್ವೇಶ್ವರನಾದ ಆ ದೇವದೇವನನ್ನು ಯಾವ ವ್ರತ, ಯಾವ ಮಂತ್ರ, ಏನು ನಿಯಮಗಳನ್ನನುಸರಿಸಿ ಆರಾಧನೆ ಮಾಡಲಿ?'' ಎನ್ನಲು, ಆ ಋಷಿ ವರ್ಯರು, ಪಯೋಭಕ್ಷಣವೆಂಬೊಂದು ವ್ರತ ವಿಶೇಷವನ್ನು ಉಪದೇಶಿಸಿ, ಅದನ್ನು ಆಚರಿಸತಕ್ಕ ಕಾಲವನ್ನೂ, ಅದರ ಮಂತ್ರವನ್ನೂ, ಉಪಾಸನಾ ವಿಧಾನವನ್ನೂ, ಆ ವ್ರತಾಂಗವಾದ ಉಪವಾಸ ದಾನ ಭೋಜನಾದಿ ನಿಯಮಗಳನ್ನೂ ಬೋಧಿಸಿ, ಈ ವ್ರತಾಚರಣೆಯಿಂದ ನಿನ್ನ ಇಷ್ಟಾರ್ಥ ಸಿದ್ಧಿಯಾಗಲಿ'' ಎಂದು ಆಶೀರ್ವದಿಸಿ, ಅಲ್ಲಿಂದ ಹೊರಟು ತಮ್ಮ ಆಶ್ರಮವನ್ನು ಕುರಿತು ಹೊರಟುಹೋದರು.

ಪತಿ ವಾಕ್ಯದಿಂದ ಆ ಮಹಾ ವ್ರತದ ವಿಧಾನಗಳನ್ನು ತಿಳಿದ ಅದಿತೀ ದೇವಿಯು, ಸಾವಕಾಶಮಾಡದೆ, ಶುದ್ಧ ಮೃತ್ತಿಕೆ, ಮಧುಪರ್ಕಾದಿಗಳು, ಗಂಧ ಪುಷ್ಪ ತಾಂಬೂಲಾದಿಗಳು ಮುಂತಾದ ಸಮಸ್ತ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು, ಪಾಲ್ಗುಣ ಶುದ್ಧ ಪ್ರತಿಪದೆಯಿಂದ ದ್ವಾದಶಿಯವರೆಗೆ ಹನ್ನೆರಡು ದಿನಗಳು ಆ ವ್ರತವನ್ನು ನೆರವೇರಿಸುವಲ್ಲಿ ಕೃತನಿಶ್ಚಿತಳಾಗಿ ಸಂಕಲ್ಪ ಮಾಡಿದಳು. ಪ್ರತಿ ದಿನವೂ ತ್ರಿಸಂಧ್ಯೆಯಲ್ಲೂ ಸ್ನಾನ ಮಾಡುತ್ತಾ, ಅತಿಶಯ ಭಕ್ತಿಪೂರ್ವಕ ವಿಷ್ಣುಮೂರ್ತಿಯನ್ನು ಆರಾಧಿಸುತ್ತಾ, ಹೋಮವನ್ನೂ, ಯಜ್ಞಾಂಗವಾದ ಬ್ರಾಹ್ಮಣಾದಿ ಸಂತರ್ಪಣೆಯನ್ನೂ ಮಾಡಿಸುತ್ತಾ, ಕೇವಲ ಜಿತೇಂದ್ರಿಯತ್ವದಿಂದ ಸದಾ ಹರಿಭಜನೆ ಪುರಾಣ ಪುಣ್ಯಕಥಾಶ್ರವಣ ಮುಂತಾದುವುಗಳಿಂದ ಕಾಲಯಾಪನೆ ಮಾಡುತ್ತಾ, ಹನ್ನೆರಡು ದಿನಗಳೂ ಆ ವ್ರತವನ್ನು ಸಾಂಗವಾಗಿ ನೆರವೇರಿಸಿದಳು. ಯಥಾವಿಧಿಯಾಗಿ ನಡೆಯಿಸಿದ ಆ ವ್ರತದಿಂದ ಪರಮ ಸುಪ್ರೀತನಾದ ನಾರಾಯಣಮೂರ್ತಿಯು ಪೀತಾಂಬರವನ್ನುಟ್ಟು ಶಂಖಚಕ್ರಾದಿಗಳನ್ನು ಧರಿಸಿ, ದಿವ್ಯ ಕಿರೀಟ ಕುಂಡಲಾಲಂಕೃತನಾಗಿ ಪವಿತ್ರ ಸ್ವರೂಪದಿಂದ ಆಕೆಗೆ ದರ್ಶನವನ್ನಿತ್ತನು. ಮಹಾ ತಪಸ್ವಿಗಳು ಕೋಟ್ಯಾಂತರ ವರ್ಷಗಳು ಮಾಡುವ ತಪಸ್ಸಿಗೂ ಗೋಚರನಾಗದ ಮಹಾಮಹಿಮೆಯುಳ್ಳ ಶ್ರೀಮನ್ನಾರಾಯಣನು, ತನಗೆ ಅಷ್ಟು ಶೀಘ್ರಕಾಲದಲ್ಲೇ ಪ್ರತ್ಯಕ್ಷನಾದುದಕ್ಕಾಗಿ, ಆಕೆಗುಂಟಾದ ಪರಮಾನಂದವು ಕೆಲಹೊತ್ತು ಆಕೆಯನ್ನು ಮುಗ್ಧಳಾಗಿ, ಸುಮ್ಮನೆ ನಿಂತುಬಿಡುವಂತೆ ಮಾಡಿತು. ತರುವಾಯ ಮನ್ಮಥ ಜನಕನಾದ ಆ ದಿವ್ಯ ಮೂರ್ತಿಯ ಮೋಹನಾಂಗವನ್ನು ಎಷ್ಟು ನೋಡಿದರೂ ತಣಿಯದೆ ರೆಪ್ಪೆಯಿಕ್ಕದಂತೆ ಆ ರೂಪವನ್ನೇ ನೋಡುತ್ತಾ —"ಸರ್ವೇಶ್ವರ, ಜಗಜ್ಜನ್ಮಾದಿಕಾರಣ, ಯಜ್ಞಸ್ವರೂಪ, ಆಶ್ರಿತಜನವತ್ಸಲ, ನಿನ್ನ ದಿವ್ಯರೂಪ ಸಂದರ್ಶನದಿಂದ ಪುನೀತಳಾದೆನು. ಮಂಗಳಕರವಾದ ನಿನ್ನ ನಾಮೋಚ್ಚಾರಣವು ಸಮಸ್ತ ದುರಿತಗಳನ್ನೂ ನಿವಾರಿಸಲು ಶಕ್ತವಾದುದು. ದುರಂತ ಸಂಕಟದಲ್ಲಿ ಸಿಕ್ಕು ದಿಕ್ಕು ಕಾಣದೆ ಬಂದವರನ್ನು ನೀನಲ್ಲದೆ ಕಾಪಾಡುವ ಪ್ರಭುವು ಮತ್ತಾರು? ಅನಾಥಬಾಂಧವ, ನೀನು ಕೃಪಾದೃಷ್ಟಿಯಿಂದ ನೋಡುವೆಯಾದರೆ, ಆಶ್ರಿತರ ಕಷ್ಟಗಳೆಂಬುವು,

ಸೂರ್ಯನೆದುರಿನ ಮಂಜಿನರಾಶಿಯಂತೆ ಕ್ಷಣಮಾತ್ರದಲ್ಲಿ ನಾಶವಾಗಿ ಹೋಗಲಾರವೆ? ಕೃಪಾಕರ ಉದ್ಧರಿಸು, ಲೋಕಪಾವನ ಮಂಗಳವನ್ನುಂಟುಮಾಡು, ದೀನಜನಶರಣ್ಯ, ನಮ್ಮನ್ನು ಕಾಪಾಡು'' ಎಂದು ಹಲವು ಬಗೆಯಿಂದ ಪ್ರಾರ್ಥಿಸಿದಳು.

ಅದಿತೀದೇವಿಯ ಸ್ತೋತ್ರಕ್ಕೆ ಮೆಚ್ಚಿದ ಭಗವಾನನು—''ಎಲೆ ದೇವಮಾತೆ, ನಿನ್ನ ಅಪೇಕ್ಷೆಯೇನೆಂಬುದು ಗೋಚರವಾಯಿತು. ಶತ್ರುಗಳಾದ ದೈತ್ಯರಿಂದ ರಾಜ್ಯಭ್ರಷ್ಟರಾಗಿ, ಹಲವು ಕಷ್ಟಗಳಿಗೀಡಾಗಿರುವ ನಿನ್ನ ಮಕ್ಕಳಿಗೆ ಕ್ಷೇಮವುಂಟಾಗಬೇಕೆಂಬ ನಿನ್ನ ಕೋರಿಕೆಯು ಸಹಜವಾದುದು. ಹಾಗಾಗಬೇಕಾದುದು ಯುಕ್ತವೆ? ಆದರೆ, ತಾಯೇ ಈಗ ದೈತ್ಯರಿಗೆ ಜಯಕಾಲವು. ಈ ಸಂದರ್ಭದಲ್ಲಿ ಅವರಿಗೆ ಎದುರು ಬೀಳುವುದು ಕ್ಷೇಮವಲ್ಲ. ಆದುದರಿಂದ ಸ್ವಲ್ಪಕಾಲ ನಿರೀಕ್ಷಣೆಯಿಂದ ಈ ಕೆಲಸವನ್ನು ಸಾಧಿಸಬೇಕಾಗಿದೆ. ನೀನು ಶ್ರದ್ಧಾವಂತಳಾಗಿ ಮಾಡಿದ ನನ್ನ ಆರಾಧನೆಗಾಗಿ ಪರಮ ಸಂತುಷ್ಟನಾಗಿದ್ದೇನೆ. ನನ್ನನ್ನು ಯಾರು ನಿಶ್ಚಲ ಭಕ್ತಿಯಿಂದ ಆರಾಧಿಸಿದರೂ ಅವರ ಶ್ರದ್ಧಾಭಕ್ತಿಗಳಿಗೆ ತಕ್ಕಂತಹ ಫಲಗಳನ್ನು ಅವರಿಗೆ ಕೊಡುವುದು ನನ್ನ ಕರ್ತವ್ಯವು. ದೈತ್ಯರಿಗೆ ಇದು ಅಂತಹ ಫಲ ಭೋಗದ ಕಾಲವಾಗಿರುವುದು. ಆದರೂ ಅವರು, ನನ್ನಿಂದ ಪ್ರಸಾದಿಸಲ್ಪಟ್ಟ ರಾಜ್ಯೈಶ್ವರ್ಯಗಳನ್ನು ನನ್ನ ಸೇವೆಗೆಂದು, ಕೃತಜ್ಞತಾಭಾವದಿಂದ ಅನುಭವಿಸದೆ, ಮದಾಂಧರಾಗಿ ಲೋಕಹಿಂಸಕರಾಗಿ ವರ್ತಿಸುತ್ತಿರುವರಾದುದರಿಂದ ಅವರ ಪರಾಭವವು ತಪ್ಪದೆ ಆಗುವುದು. ನಿನ್ನ ಮಕ್ಕಳು ತಪ್ಪದೆ ಸ್ವರ್ಗರಾಜ್ಯದ ದಿವ್ಯ ಭೋಗಗಳನ್ನು ಪುನಃ ಪಡೆದು ಸುಖಪಡುವರು. ನಾನು ಅದನ್ನು ಶಕ್ತಿಯಿಂದಲ್ಲಲ್ಲ - ಯುಕ್ತಿಯಿಂದ ನಿನ್ನ ಮಕ್ಕಳಿಗೆ ಸಾಧಿಸಿ ಕೊಡಲು ಸಂಕಲ್ಪಿಸಿರುವೆನು. ಈ ಕಾರ್ಯಸಾಧನೆಗಾಗಿ ಮಹಾ ತಪಸ್ಸಿದ್ಧನಾದ ನಿನ್ನ ಪತಿಯ ತಪಃಫಲವಾಗಿ ನಿನ್ನ ಗರ್ಭದಲ್ಲಿ ಪುತ್ರರೂಪದಿಂದ ಜನಿಸುವೆನು. ಹಾಗೆ ನಿನಗೆ ಪುತ್ರೋತ್ಪತ್ತಿಯಾಗುವವರೆಗೂ, ಪರಿಶುದ್ಧ ಚಿತ್ತವುಳ್ಳವಳಾಗಿ ನಿನ್ನ ಪತಿಯ ಶುಶ್ರೂಷಾನಿರತಳಾಗಿರು. ನಿನ್ನ ಇಚ್ಛೆಯು ಶೀಘ್ರ ಕಾಲದಲ್ಲೇ ನೆರವೇರುವುದು'' ಎಂದು ನುಡಿದು ನೋಡುತ್ತಿದ್ದಂತೆಯೇ ಅದೃಶ್ಯನಾದನು.

ಯಾವ ಜಗದೀಶ್ವರನ ದಿವ್ಯಸ್ವರೂಪವನ್ನು ಕಣ್ಣಿಂದ ನೋಡುವುದೂ ಅಸಾಧ್ಯವಾಗಿರುವುದೋ, ಅಂತಹ ಪರಮ ದುರ್ಲಭನಾದ ಭಗವಂತನನ್ನು ಗರ್ಭದಲ್ಲಿ ಧರಿಸುವ ಸುಯೋಗವು ತನಗೆ ಒದಗುವುದೆಂಬ ಹರ್ಷೋತ್ಕರದಿಂದ ಅದಿತೀದೇವಿಯು, ಅತಿಶಯ ಸಂಭ್ರಮ ಯುಕ್ತಳಾಗಿ ಕಶ್ಯಪನನ್ನು ಸೇವಿಸತೊಡಗಿದಳು. ತಪೋನಿರತರಾಗಿ ಕುಳಿತಿದ್ದ ಕಶ್ಯಪ ಋಷಿಗಳಿಗೆ ಒಂದಾನೊಂದು ದಿನ, ಸರ್ವೇಶ್ವರನಾದ ನಾರಾಯಣಮೂರ್ತಿಯು ತನ್ನ ನಿಜಾಂಶದಿಂದ, ತಮ್ಮ ಶರೀರವನ್ನು ಪ್ರವೇಶಿಸದಂತೆ ದಿವ್ಯ ಜ್ಞಾನಕ್ಕೆ ಗೋಚರವಾಗಲು, ಅವರೂ ಪರಮಾನಂದಭರಿತರಾಗಿ, ಬಹು ಕಾಲಗಳ ತಪಸ್ಸಿನಿಂದ ಅತಿಶಯ ತೇಜೋವಂತವಾದ ತಮ್ಮ ದಿವ್ಯ ವೀರ್ಯವನ್ನು ಆಕೆಯ ಗರ್ಭಕ್ಕೆ ಸೇರಿಸಲಾಗಿ, ಅದಿತೀದೇವಿಯು ಒಡನೆ ಗರ್ಭವತಿಯಾದಳು. ಭಗವಂತನು ಅದಿತೀದೇವಿಯ ಗರ್ಭವನ್ನು ಹೊಕ್ಕ ಸಂಗತಿಯನ್ನು ತಿಳಿದ ಬ್ರಹ್ಮದೇವನು ಪರಮ ಸಂತೋಷಗೊಂಡು ಶ್ರೀಮನ್ನಾರಾಯಣನನ್ನು ಬಹು ಬಗೆಯಿಂದ ಹೊಗಳಿದನು.

ಕರ್ಮಾಧೀನವಾದ ಜನನ ಮರಣಾದಿ ದುಃಖಗಳೂ, ಗರ್ಭವಾಸದ ಕೋಟಲೆಯೂ ಜಗದೀಶ್ವರನಿಗೂ ಉಂಟೇ ಎಂಬ ಸಂಗತಿಯು ಲೋಕದ ಹಲವು ಮತಗಳವರಿಗೆ ವಿಚಿತ್ರವೆಂಬಂತೆ ತೋರಿ, ಅವರು ದೇವರು ಅವತರಿಸುವನೆಂಬ ಭಾವನೆಯೇ ಸುಳ್ಳೆಂದು ವಾದಿಸತೊಡಗುವುದುಂಟು. ವಿಶ್ವಮೂರ್ತಿಯು, ಸ್ತ್ರೀಗರ್ಭದಂತಹ ಬಹು ಸಂಕೋಚ ಸ್ಥಳವನ್ನು ಆಶ್ರಯಿಸಿ ಕುಳ್ಳಿರುವನೆಂಬುದೂ ಅವರಿಗೆ ವಿಚಿತ್ರವಾಗಿ ತೋರುವುದು. ಅಲ್ಲದೆ, ಸರ್ವವ್ಯಾಪಕನೂ ಸರ್ವಶಕ್ತನೂ ಆದ ಆ ದೇವಾದಿದೇವನು, ತನ್ನ ವಾಸಸ್ಥಳವಾದ ವೈಕುಂಠವನ್ನು ಬಿಟ್ಟು ಇಲ್ಲಿಗೆ ಬಂದು ಗರ್ಭವಾಸದಲ್ಲಿ ಕುಳಿತರೆ, ಅಲ್ಲಿ ಆ ಕಾಲದಲ್ಲಿ ಯಾರಿರುವರು? ಎಂದು ಮೊದಲಾಗಿ ಅಸಂಭಾವಿತ ಪ್ರಶ್ನೆಗಳನ್ನೂ ಕೇಳಲು ಅವರು ಹಿಂಜರಿಯದೆ ಇದ್ದುದುಂಟು. ಹೀಗೆ ಪ್ರಶ್ನಿಸುವ ಕಾಲದಲ್ಲೆಲ್ಲ, ಅವರು, ತಾವು ಉಪಯೋಗಿಸುವ ಮಾತುಗಳ ಸಂಪೂರ್ಣಾರ್ಥವನ್ನೂ ಗ್ರಹಿಸದಿರುವುದೇ, ಆ ಪ್ರಶ್ನೆಗಳಿಗೆ ಕಾರಣವಾಗುವುದೆಂಬುದನ್ನು ತಿಳಿಯಲಾರರು. ಜಗದೀಶ್ವರ, ವಿಶ್ವಮೂರ್ತಿ, ಸರ್ವವ್ಯಾಪಕ, ಸರ್ವಶಕ್ತ, ಸರ್ವಜ್ಞ ಮುಂತಾದ ಹೆಸರುಗಳು ಪರಮಾತ್ಮನಿಗಿವೆ.

ಅವುಗಳ ಅರ್ಥವು ಎಷ್ಟು ವ್ಯಾಪಕವಾಗಿದೆಯಲ್ಲಾ ! ಆತನು ಸರ್ವವ್ಯಾಪಕನೆಂಬುದರಿಂದ ಆತನು ಒಂದು ಸ್ಥಳದಲ್ಲಿದ್ದಾನೆ, ಮತ್ತೊಂದು ಸ್ಥಳದಲ್ಲಿಲ್ಲ ಎಂಬ ಪ್ರಶ್ನೆಯೇ ಹುಟ್ಟುವಂತಿಲ್ಲ- ಈ ಸ್ಥಳದಲ್ಲಿ ಮೊದಲೇ ಇಲ್ಲದಿದ್ದರಲ್ಲವೆ, ಬೇರೊಂದು ಸ್ಥಳದಿಂದ ಇಲ್ಲಿಗೆ ಬರಬೇಕಾದ ಆವಶ್ಯಕವಿದ್ದೀತು ! ಆತನು ವಿಶ್ವಮೂರ್ತಿಯಾಗಿ, ವಿಶ್ವದಲ್ಲಿ ಅಣುರೇಣು ತೃಣಕಾಷ್ಠ ಮುಂತಾದ ಸಮಸ್ತ ಚೇತನಾಚೇತನ ವಸ್ತು ಸಮೂಹದಲ್ಲಿಯೂ ವ್ಯಾಪ್ತನಾಗಿರುವಲ್ಲಿ ಆತನು ಮಹತ್ತಾದ ಸ್ಥೂಲ ರೂಪದಿಂದ ತೋರುವ ಆನೆಯಲ್ಲಿ ಹೇಗೆ ಇರುವನೋ, ದೃಷ್ಟಿಗೂ ಗೋಚರವಾಗದಷ್ಟು ಚಿಕ್ಕದಾದ ಒಂದು ಅಣುಪ್ರಾಣಿಯಲ್ಲಿಯೂ ಹಾಗೆಯೇ ಇರುವನು. ಆದರೆ ಹಾಗೆ ಸಮಸ್ತ ವಸ್ತುಗಳಲ್ಲಿಯೂ ಪರಮಾತ್ಮನು ವ್ಯಾಪ್ತನಾಗಿದ್ದರೆ ನಮಗೇಕೆ ಕಾಣುವುದಿಲ್ಲವೆಂದರೆ,-ಆತನು ಹಾಗೆ ಕಾಣಿಸದಿರುವುದಕ್ಕೆ ನಮ್ಮ ದೃಷ್ಟಿದೋಷವೇ ಕಾರಣವಲ್ಲದೆ, ಪರಮಾತ್ಮನ ಸ್ವರೂಪಾಭಾವವು ಕಾರಣವಲ್ಲ. ಅಂತರಿಕ್ಷದಲ್ಲಿನ ನಕ್ಷತ್ರಗಳನ್ನೂ, ಜ್ಯೋತಿಶ್ಚಕ್ರಾದಿಗಳಲ್ಲುಂಟಾಗುವ ವ್ಯತ್ಯಾಸಗಳನ್ನೂ ತಿಳಿಯುವುದಕ್ಕಾಗಿ ದೂರದರ್ಶಕಯಂತ್ರವೇ ಮುಂತಾದ ಸಾಧನಗಳನ್ನು ಉಪಯೋಗಿಸುವರಲ್ಲವೆ! ಆ ಸಂದರ್ಭದಲ್ಲಿ ಅಲ್ಲಿ ವಸ್ತುವಿರಲಿಲ್ಲವೆಂದು ಅರ್ಥವಲ್ಲವಷ್ಟೆ! ಹಾಗೆಯೇ ಹಲವು ಪ್ರಾಣಿಗಳಲ್ಲು ಅಥವ ವಸ್ತುಗಳಲ್ಲಿ ವ್ಯಾಪ್ತವಾಗಿರುವ ಭಗವಚ್ಚೈತನ್ಯವನ್ನು ದರ್ಶಿಸಲು ನಾವು ದೃಷ್ಟಿದೋಷದಿಂದ ದೂಷಿತರಾಗಿರುವುದೇ ಮುಖ್ಯಕಾರಣವೆಂದರೆ ಅದು ತಪ್ಪಲ್ಲ. ಮತ್ತೇನೆಂದರೆ, ಸ್ವಚ್ಛವಾದ ಆವರಣದಿಂದ ಕೂಡಿದ ದೀಪವು ಹೇಗೆ ತನ್ನ ಪ್ರಕಾಶವನ್ನು ಸ್ಪಷ್ಟವಾಗಿ ಪ್ರಸರಿಸಲು ಶಕ್ತವಾಗುವುದೋ ಹಾಗೆಯೇ, ತನ್ನಲ್ಲಡಗಿರುವ ಭಗವಚ್ಚೈತನ್ಯದ ಪ್ರಕಾಶವನ್ನು ಹೊರಕ್ಕೆ ಸ್ವಚ್ಛವಾಗಿ ತೋರಿಗೊಡಲು, ಆಯಾ ವಸ್ತುಗಳು ಅಥವ ಪ್ರಾಣಿಗಳು, ಶುದ್ಧ ಸಾತ್ವಿಕ ವಸ್ತುಗಳಿಂದಲೇ ಕೂಡಿರುವುದೂ ಆವಶ್ಯಕವಾಗಿದೆ. ಯಾರು, ಸತ್ಯ ಶೌಚ, ಇಂದ್ರಿಯನಿಗ್ರಹ, ಶಾಂತತೆ ಮುಂತಾದ ಸಾತ್ವಿಕ ಗುಣಗಳಿಂದಲೂ ತಪಸ್ಸಿನಿಂದಲೂ ಯುಕ್ತರಾಗಿ ಸರ್ವದಾ ಸತ್ಕಾರ್ಯ ತತ್ಪರರಾಗಿಯೇ ಇರುವರೋ, ಅವರಲ್ಲಿ ಭಗವಂತನ ಕಲ್ಯಾಣ ಗುಣಗಳು ವಿಶೇಷ ರೀತಿಯಿಂದ ಕಂಡು ಬರುವುವು. ಪರಮ ಪರಿಶುದ್ಧವಾದ ಚರಿತ್ರೆಯಿಂದಲೂ, ವಿಶೇಷ

ಕಾಲದ ತಪಸ್ಸಿನಿಂದಲೂ, ಜ್ಞಾನ ಭಕ್ತಿ ವೈರಾಗ್ಯಾದಿ ಸಾಧನೆಗಳಿಂದಲೂ, ಆ ಲೋಕೇಶ್ವರನನ್ನು ಆರಾಧಿಸುವ ಮಾನವ ಶ್ರೇಷ್ಠರಲ್ಲಿ ಸರ್ವೇಶ್ವರನೂ, ಸರ್ವಶಕ್ತನೂ, ಲೋಕೋದ್ಧಾರಕ್ಕಾಗಿ ರೂಪಧಾರಣೆ ಮಾಡಿಬಂದರೆ, ಅದರಲ್ಲಿ ಆಶ್ಚರ್ಯವೇನಿದೆ! ವ್ರತನಿಯಮ ಉಪವಾಸಾದಿಗಳಿಂದಲೂ, ಅಗಾಧ ಶ್ರದ್ಧಾಭಕ್ತಿಗಳಿಂದಲೂ ಪವಿತ್ರವಾದ ಮಾತೃ ಕ್ಷೇತ್ರದಲ್ಲಿ, ಮಹಾ ತಪಸ್ಸಂಪನ್ನವಾದ ಜ್ಞಾನರೂಪೀ ವೀರ್ಯಸ್ಥಾನವನ್ನಾಶ್ರಯಿಸಿದ ದಿವ್ಯ ಬೀಜವು ಪ್ರವೇಶಿಸಿದರೆ, ಅಂತಹ ಉತ್ತಮೋತ್ತಮ ಸ್ಥಳವೇ ಅಲ್ಲವೆ ಸರ್ವೇಶ್ವರನಾದ, ಸರ್ವಶಕ್ತನಾದ, ಸರ್ವವ್ಯಾಪಕನಾದ ಭಗವಾನನ ಸಮಸ್ತ ವಿಧ ಕಲ್ಯಾಣಗುಣಗಳ, ಅಗಾಧ ಶಕ್ತಿ ಸಾಮರ್ಥ್ಯಗಳ ಅವತರಣಕ್ಕೆ ಯೋಗ್ಯವಾದುದು! ಅಂತೆಯೇ, ಹಾಗೆ ಆವಿರ್ಭವಿಸುವ ಪುರುಷಶ್ರೇಷ್ಠರೇ ಭಗವದವತಾರಗಳೆಂದು ಮಹರ್ಷಿಗಳ ದಿವ್ಯ ದೃಷ್ಟಿಗೆ ಗೋಚರರಾಗುವರು. ಸಾಮಾನ್ಯರ ಲೌಕಿಕ ದೃಷ್ಟಿಗೆ ಅವರು ಕೇವಲ ಎರಡು ಕಾಲು-ಎರಡು ಕಣ್ಣುಗಳ ಮಾನುಷ ವ್ಯಕ್ತಿಗಳಂತೆಯೇ ತೋರುವರು. ನಿಜ. ಆದರೆ, ಲೋಕದಲ್ಲಿನ ವಸ್ತುಗಳೆಲ್ಲವೂ ನಮ್ಮ ದೃಷ್ಟಿಗೆ ಗೋಚರವಾಗುವಂತೆಯೇ ಇಲ್ಲದೆ-ಭಿನ್ನ ರೀತಿಯಿಂದ ಇರುವುವೆಂಬುದು ಅನೇಕ ವಿಧಗಳಲ್ಲಿ ನಿದರ್ಶನಕ್ಕೆ ಬರುವುದಲ್ಲವೆ-ಇದನ್ನೂ ಹಾಗೆಯೇ ಎಂದು ಏಕೆ ತಿಳಿಯಬಾರದು?

ಬ್ರಹ್ಮದೇವನ ಸ್ತುತಿಯನ್ನು ಲಾಲಿಸಿ, ಸುಪ್ರೀತನಾದ ವಿಷ್ಣುಮೂರ್ತಿಯು ಅದಿತಿದೇವಿಯ ಗರ್ಭದಿಂದ ಹೊರಕ್ಕೆ ಬಂದು ಆಕೆಗೂ, ಕಶ್ಯಪರಿಗೂ ತನ್ನ ದಿವ್ಯಸುಂದರ ವಿಗ್ರಹವನ್ನು ದರ್ಶನಮಾಡಿಸಿದನು. ಆ ದಂಪತಿಗಳು ಎಂತಹ ಪುಣ್ಯಶಾಲಿಗಳೋ! ಶ್ರೀಮನ್ನಾರಾಯಣನು, ಮೇಘಶ್ಯಾಮಲ ವರ್ಣನಾಗಿ, ಚತುರ್ಬಾಹುಗಳಲ್ಲೂ ಶಂಖ ಚಕ್ರಗದಾ ಪದ್ಮಗಳನ್ನು ಧರಿಸಿ, ಕಿರೀಟಕುಂಡಲ ಕೌಸ್ತುಭಹಾರಾದಿ ಅಮೌಲ್ಯಾಭರಣಗಳ ದಿವ್ಯಕಾಂತಿಯು ಕೋಟಿ ಸೂರ್ಯರುದಿಸಿದಂತೆ ಝಗಝಗಿಸುತ್ತಿರಲು, ದಿವ್ಯ ಪೀತಾಂಬರವನ್ನುಟ್ಟು, ಮಂದಸ್ಮಿತವದನಾರವಿಂದದಿಂದ ಅವರನ್ನನುಗ್ರಹಿಸಿ ಅಭಯಪ್ರದಾನಮಾಡಿದನು. ಭಾದ್ರಪದ ಶುದ್ಧ ದ್ವಾದಶಿಯದಿನ ಮಧ್ಯಾಹ್ನದ ವೇಳೆಯಲ್ಲಿ ಅಭಿಜನ್ಮುಹೂರ್ತಯುಕ್ತವಾಗಿ ಸಕಲ ಗ್ರಹನಕ್ಷತ್ರಗಳೂ ಪ್ರದಕ್ಷಿಣವಾಗಿ ಸುತ್ತುತ್ತಿರಲು-ಭಗವಂತನು ಅದಿತಿದೇವಿಯ

ಗರ್ಭದಿಂದ ಅವತರಿಸಿದ ಆ ಕಾಲದಲ್ಲಿ ಅಂತರಿಕ್ಷದಲ್ಲಿ ದೇವತೆಗಳು ಸಕಲ ದೇವವಾದ್ಯಗಳನ್ನೂ ಬಾಜಿಸಿ ಪುಷ್ಪ ವೃಷ್ಟಿಯನ್ನು ಸುರಿಸಿದರು. ಗಂಧರ್ವ ಕಿನ್ನರರು ಗಾನಮಾಡಿದರು. ಅಪ್ಸರೆಯರು ನರ್ತನಮಾಡಿದರು. ದಿಕ್ಕುಗಳೆಲ್ಲವೂ ಪ್ರಸನ್ನವಾದುವು. ಅದಿತಿಯೂ ಕಶ್ಯಪರೂ ಪರಮಾಶ್ಚರ್ಯಯುಕ್ತರಾಗಿ ಏನೆಂದು ಸ್ತುತಿಸಬೇಕೆಂದು ತೋರದೆ, ಕೈಜೋಡಿಸಿ ಆ ದಿವ್ಯರೂಪವನ್ನೇ ಕಣ್ಣಿಟ್ಟು ನೋಡುತ್ತಿರಲು ಇದ್ದುದಿದ್ದಂತೆಯೇ, ಕ್ಷಣಮಾತ್ರದಲ್ಲಿ ಆ ರೂಪವು ಒಮ್ಮೆಗೇ ಮಾಯವಾಗಿ, ಆ ಸ್ಥಾನದಲ್ಲಿ, ಮಾನುಷ ಶಿಶುವಿನ ಒಂದು ರೂಪವು ಗೋಚರವಾಗಿ, ಸ್ವಾಭಾವಿಕ ಶಿಶುವಿನಂತೆಯೇ ಕೈಕಾಲುಗಳನ್ನಾಡಿಸುತ್ತಾ, ಅಳುತ್ತಾ, ನಗುತ್ತಾ, ಪಿಳಿಪಿಳಿ ಕಣ್ಣುಗಳನ್ನು ಬಿಡುತ್ತಾ ಎಲ್ಲರನ್ನೂ ಆನಂದಸಾಗರದಲ್ಲಿ ಮಗ್ನರನ್ನಾಗಿ ಮಾಡಿತು. ಕಶ್ಯಪರು ಭಗವನ್ಮಾಯೆಯನ್ನು ಕಂಡು ಪರಮ ಸಂಭ್ರಮಯುಕ್ತರಾಗಿ ಒಡನೆ ಸ್ನಾನಮಾಡಿ, ಮಗುವಿಗೆ ಜಾತಕರ್ಮಾದಿ ವಿಧ್ಯುಕ್ತ ಕ್ರಿಯೆಗಳನ್ನು ನೆರವೇರಿಸಿ, ಸಕಲ ಋಷಿಜನ ಸಮ್ಮತಿಯಿಂದ ನಾಮಕರಣ ಮಹೋತ್ಸವವನ್ನು ನಡೆಯಿಸಿ ಆ ಶಿಶುವಿಗೆ ವಾಮನನೆಂದು ನಾಮಧೇಯವನ್ನಿಟ್ಟು ಕರೆದರು. ಬಾಲಕ ವಾಮನಮೂರ್ತಿಯು ತನ್ನ ದಿವ್ಯರೂಪದಿಂದ ಮಾತೆಯಾದ ಅದಿತೀದೇವಿಗೂ, ಸಕಲ ಮುನಿ ಸ್ತ್ರೀಯರಿಗೂ ಪರಮಾನಂದದಾಯಕನಾಗಿದ್ದನು. ಆ ಆಶ್ರಮದ ಸಕಲ ಮುನಿಜನಗಳೂ, ಆ ಅಪೂರ್ವ ಶಿಶುವನ್ನು ಕಂಡು ಬಹು ಸಂತೋಷಪಡುತ್ತಿದ್ದರು.



## ಅಧ್ಯಾಯ ೫ "ತ್ರಿವಿಕ್ರಮರೂಪ"

ಮಹಾ ತಪಸ್ಸಂಪನ್ನರಾದ ಕಶ್ಯಪರಿಗೂ-ಅದಿತೀದೇವಿಗೂ, ಶಂಖ ಚಕ್ರಗದಾ ಪದ್ಮಧಾರಿಯಾಗಿ, ಕಿರೀಟ ಕುಂಡಲಾಲಂಕೃತನಾಗಿ ದರ್ಶನ ಕೊಟ್ಟ ವಿಷ್ಣುಮೂರ್ತಿಯು ಒಡನೆ ಶಿಶುರೂಪವನ್ನು ಹೊಂದಿ ಪರಮಾಶ್ಚರ್ಯವನ್ನುಂಟುಮಾಡಿದನಷ್ಟೆ !—ಮಾತ್ರವಲ್ಲ, ಪುನಃ ಒಡನೆಯೇ ಆ ಶಿಶು

ತನವನ್ನೂ ಬಿಟ್ಟು ಏಳೆಂಟು ವರ್ಷಗಳ ಬಾಲಕನಂತೆ ಗುಜ್ಜಾರಿಯ ರೂಪ
ವನ್ನು ಕೈಕೊಂಡನು. ನಾಟಕದಲ್ಲಿ ನಟನು ವೇಷವನ್ನು ಬದಲಾಯಿಸಿ
ದಂತೆ-ಹೀಗೆ ವ್ಯತ್ಯಾಸಗೊಳ್ಳುತ್ತಿದ್ದ ಭಗವಂತನ ಮಾನುಷ ರೂಪಗಳನ್ನು
ಕಂಡು ಕಶ್ಯಪರೂ ಇತರ ಮುನಿಗಳೂ, ಏನು ಕಾರಣ ಹೀಗಾಗುತ್ತಿರುವು
ದೋ, ಭಗವಂತನು ಯಾವ ಮಹಾ ಕಾರ್ಯವನ್ನುದ್ದೇಶಿಸಿ, ಹೀಗೆಲ್ಲ ಮಾ
ಡುತ್ತಿರುವನೋ ಎಂದುಕೊಳ್ಳುತ್ತಾ, ಅವರೂ ಸುಮ್ಮನಿರಲಾರದವ
ರಾಗಿ, ಆಯಾ ಕಾಲಕ್ಕೆ ನಡೆಯಬೇಕಾದ ಕರ್ತವ್ಯಗಳನ್ನು ನೆರವೇರಿಸುವುದ
ರಲ್ಲಿ ನಿರತರಾದರು. ಉಪನಯನ ಸಂಸ್ಕಾರಕ್ಕೆ ಯೋಗ್ಯ ವಯಸ್ಕನಾದ
ಆ ವಾಮನ ಬಾಲಕನಿಗೆ ಕಶ್ಯಪರು ಬ್ರಹ್ಮೋಪದೇಶ ಕರ್ಮವನ್ನು ನಡೆಸಿ
ಸಬೇಕೆಂದು ಪ್ರಯತ್ನಿಸಿದರು. ಒಡನೆ ಸಕಲ ಮುನಿಗಳೂ ನೆರೆದು, ಬೇ
ಕಾದ ಸಕಲ ಸಾಮಗ್ರಿಗಳನ್ನೂ ಸಿದ್ಧಗೊಳಿಸಿ, ಮಹಾ ಸಂಭ್ರಮದಿಂದ
ಆ ವಿಧ್ಯುಕ್ತ ಕರ್ಮವನ್ನು ಆಗಮಾಡಿಸಿದರು. ಆಗ ಗಗನಮಂಡಲ ಮಧ್ಯ
ವರ್ತಿಯಾದ ಶ್ರೀ ಆದಿತ್ಯದೇವನೇ ಪ್ರತ್ಯಕ್ಷನಾಗಿ ಬಂದು ವಾಮನ ವಟು
ವಿಗೆ ಗಾಯತ್ರೀ ಮಂತ್ರೋಪದೇಶ ಮಾಡಿದನು. ಪವಿತ್ರವಾದ ಯಜ್ಞೋ
ಪವೀತವನ್ನು ಬೃಹಸ್ಪತಿಯು ತಂದಿತ್ತನು. ಮೌಂಜಿಯನ್ನು ಕಶ್ಯಪರು
ತಂದಿತ್ತರು. ಕೃಷ್ಣಾಜಿನವನ್ನು ಭೂದೇವಿಯೂ, ದಂಡಕಾಷ್ಠವನ್ನು ಓಷ
ಧೀಶ್ವರನಾದ ಚಂದ್ರನೂ ತಂದು ಒಪ್ಪಿಸಿದರು. ಮಾತೆಯಾದ ಅದಿತೀದೇ
ವಿಯು ಕೌಪೀನವನ್ನೂ, ದ್ಯುದೇವತೆಯು ಛತ್ರವನ್ನೂ, ಬ್ರಹ್ಮನು ಕಮಂ
ಡಲುವನ್ನೂ, ಸಪ್ತರ್ಷಿಗಳು ದರ್ಭ ಪವಿತ್ರಗಳನ್ನೂ, ಸರಸ್ವತಿಯು ಅಕ್ಷ
ಮಾಲಿಕೆಯನ್ನೂ ತಂದು ಒದಗಿಸಿದರು. ಕುಬೇರನು ಭಿಕ್ಷಾಪಾತ್ರವನ್ನು
ತಂದೊಪ್ಪಿಸಲು, ಪಾರ್ವತೀದೇವಿಯು ಅದರಲ್ಲಿ ಭಿಕ್ಷೆಯನ್ನಿಕ್ಕಿದಳು. ಹೀಗೆ
ವಾಮನ ಬ್ರಹ್ಮಚಾರಿಯು ಅದ್ವಿತೀಯ ಬ್ರಹ್ಮತೇಜೋವಿಶಿಷ್ಟನಾಗಿ, ಹೋ
ಮಾಗ್ನಿಯನ್ನು ಪ್ರತಿಷ್ಠಿಸಿ, ವಿಧ್ಯುಕ್ತರೀತಿಯಿಂದ ಹೋಮ ಕಾರ್ಯವನ್ನು
ಮುಗಿಸಿದನು.

ತರುವಾಯ ಇನ್ನು ಸಾವಕಾಶವೇಕೆಂದು ಅವತಾರದ ಮುಖ್ಯೋ
ದ್ದೇಶ ಕಾರ್ಯವನ್ನು ನಡೆಯಿಸಲು ಮನಸ್ಸುಮಾಡಿದನು. ಆ ವೇಳೆಗೆ
ಇತ್ತ ಬಲಿಚಕ್ರವರ್ತಿಯು ನರ್ಮದಾ ನದೀತೀರದಲ್ಲಿದ್ದ ಭೃಗುವತ್ಸಕವೆಂ

ಬೊಂದು ಮಹಾ ಕ್ಷೇತ್ರದಲ್ಲಿ ಅನೇಕಮಂದಿ ಬ್ರಾಹ್ಮಣರೊಂದಿಗೂ, ಶುಕ್ರಾಚಾರ್ಯರೇ ಮೊದಲಾದ ಪುರೋಹಿತ ವರ್ಗದೊಂದಿಗೂ ಕೂಡಿ ಯಜ್ಞದೀಕ್ಷಿತನಾಗಿದ್ದನು. ಈ ಸಂಗತಿಯನ್ನು ತಿಳಿದ ಸರ್ವಜ್ಞನಾದ ವಾಮನರೂಪೀ ಮಹಾವಿಷ್ಣುವು, ತನ್ನ ಪುಟ್ಟ ಪುಟ್ಟ ಪಾದಗಳ ವಿನ್ಯಾಸದಿಂದ ನೋಡುವವರಿಗೆ ಪರಮಾಶ್ಚರ್ಯವನ್ನುಂಟುಮಾಡುತ್ತಾ, ಯಾಗಶಾಲೆಯನ್ನು ಕುರಿತು ಕಶ್ಯಪಾಶ್ರಮದಿಂದ ಪ್ರಯಾಣಮಾಡಿದನು. ಯಾಗಶಾಲೆಯಲ್ಲಿ ಸಕಲ ಬ್ರಾಹ್ಮಣರೊಂದಿಗೂ ಕುಳಿತು ಯಜ್ಞಕಾರ್ಯಗಳಲ್ಲಿ ನಿರತನಾಗಿದ್ದ ಬಲಿಚಕ್ರವರ್ತಿಯು, ತನ್ನ ಕಡೆಗೇನೆ ನಡೆದು ಬರುತ್ತಿದ್ದ ಅತಿಶಯ ತೇಜಸ್ವಿಯಾದ ಆ ಅಪೂರ್ವ ಬ್ರಹ್ಮಚಾರಿಯ ಮೂರ್ತಿಯನ್ನು ಕಂಡು ಪರಮಾಶ್ಚರ್ಯಗೊಂಡು ಎವೆಯಿಕ್ಕದೆ ನೋಡುತ್ತಿದ್ದನು. ಅಷ್ಟರಲ್ಲಿ ವಾಮನನು, ಯಾಗಶಾಲೆಯನ್ನೇ ಪ್ರವೇಶಿಸಿ. ಯಜ್ಞಕುಂಡದ ಒಳಗೆ ನಡೆಯಲಾಗಿದನು. ಬಲೀಂದ್ರನು, ಆ ಅಲೌಕಿಕ ರೂಪವನ್ನೂ ತೇಜಸ್ಸನ್ನೂ ಕಂಡು, ಶುಕ್ರಾಚಾರ್ಯಾದಿಗಳನ್ನು ಕುರಿತು,–'ಮಹನೀಯರೇ, ಈಗ ಇಲ್ಲಿ ಬರುತ್ತಿರುವ ಮಹಾಪುರುಷನಾರಿರಬಹುದು ? ಈತನು ತನ್ನ ತೇಜಸ್ಸಿನಿಂದಲೇ ಅಗ್ನಿಯನ್ನೂ ಸೂರ್ಯನನ್ನೂ ತೇಜೋಹೀನರನ್ನಾಗಿ ಮಾಡುತ್ತಿರುವನಲ್ಲಾ ! ಏನು, ನಮ್ಮ ಯಾಗಶಾಲೆಯನ್ನು ಸಂದರ್ಶಿಸಲು ಮಹರ್ಷಿ ಸನತ್ಕುಮಾರನೇನಾದರೂ, ದಯಮಾಡಿಸಿದನೋ !" ಎಂದು ಸಂದೇಹಿಸುತ್ತಿದ್ದನು. ಅಷ್ಟರೊಳಗಾಗಿ ಸಮೀಪಕ್ಕೇ ಬಂದ ವಾಮನ ಬ್ರಹ್ಮಚಾರಿಯನ್ನು ಕಂಡು ಅಲ್ಲಿದ್ದ ಸಕಲರೂ ಇದಿರೆದ್ದು ಗೌರವಿಸಿದರು. ಶುಕ್ರಾಚಾರ್ಯಾದಿ ಬ್ರಾಹ್ಮಣರು ಸ್ವಾಗತವನ್ನು ಬಯಸಿದರು. ಬಲೀಂದ್ರನು, ಪರಮ ಸಂಭ್ರಮದಿಂದ ಆತನನ್ನಿದಿರುಗೊಂಡು, ನಯವಿನಯಗಳಿಂದ ಕುಶಲ ಪ್ರಶ್ನೆಮಾಡಿ, ಪಾದಗಳನ್ನು ತೊಳೆದು ಒರೆಸಿ, ಉಚಿತಾಸನವನ್ನಿತ್ತು ಕಂದಮೂಲಾದಿಗಳನ್ನೊಪ್ಪಿಸಿ ಆದರಿಸಿದನು. ಆಹಾ, ಬಲಿಚಕ್ರವರ್ತಿಯ ಭಾಗ್ಯವನ್ನು ಏನೆಂದು ವರ್ಣಿಸಬಹುದು ! ಯಾವ ಪರಮಪುರುಷನ ಪಾದಾವಲೋಕನವು ಮಹಾ ತಪೋಸಿದ್ಧಿಗಳಿಗೂ ಅಲಭ್ಯವಾಗಿರುವುದೋ, ಅಂತಹ ದಿವ್ಯಪಾದಗಳನ್ನು ಸ್ವತಃ ಅಭಿಷೇಕಿಸಿ ಬ್ರಹ್ಮ ರುದ್ರಾದಿಗಳೂ ಪರಮ ಪಾವ

ನವೆಂದು ಶಿರಸ್ಸಿನಲ್ಲಿ ಧರಿಸಿದ ಆ ಪವಿತ್ರ ಪಾದೋದಕವನ್ನು ತನ್ನ ತಲೆಯ ಮೇಲೆ ಪ್ರೋಕ್ಷಿಸಿಕೊಂಡನಲ್ಲವೆ !

ಬಳಿಕ ಸಂತುಷ್ಟನಾಗಿ ಆಸನದಲ್ಲಿ ಕುಳಿತ, ವಾಮನ ಬ್ರಹ್ಮಚಾರಿಯ ಎದುರಿಗೆ ಕೈಜೋಡಿಸಿ ನಿಂತು, ಗುಣನಿಧಿಯಾದ ಬಲಿಚಕ್ರವರ್ತಿಯು,- 'ಬ್ರಾಹ್ಮಣೋತ್ತಮಾ, ನಿನ್ನ ಪಾದಗಳಿಗೆ ವಂದಿಸುತ್ತೇನೆ. ಯಜ್ಞಕಾಲಕ್ಕೆ, ಪರಮಾನುಗ್ರಹಮಾಡಿ, ಇಲ್ಲಿಗೆ ದಯಮಾಡಿಸಿದ ನಿನಗೆ ನಾನು ಬಹು ಕೃತಜ್ಞನಾಗಿದ್ದೇನೆ. ಆಹ್ವಾನವಿಲ್ಲದಿದ್ದರೂ, ನಮ್ಮನ್ನು ಅನುಗ್ರಹಿಸಲಿಚ್ಛಿಸಿ ಆಗಮಿಸಿದ ನಿನ್ನ ಪಾದಗಳಿಗೆ ಪುನಃ ಪುನಃ ವಂದಿಸುತ್ತೇನೆ. ಸಮಸ್ತ ಬ್ರಹ್ಮರ್ಷಿಗಳ ತೇಜೋಂಶವು ಏಕತ್ರ ರೂಪುಗೊಂಡಂತಿರುವ ನಿನ್ನೀ ಮಂಗಳರೂಪವು ಜಗತ್ತಿಗೇ ವಿಚಿತ್ರವೆಂಬಂತಿರುವುದು. ಮಹಾಮಹಿಮ, ನೀನು, ದಯಮಾಡಿಸಿದುದರಿಂದ ಇಂದು ನನ್ನ ಪಿತೃಗಳೆಲ್ಲರೂ ತೃಪ್ತರಾದರು. ನನ್ನ ವಂಶವೇ ಪಾವನವಾಯಿತು. ನಾನು ಈವರೆಗೆ ಮಾಡಿದ ಯಜ್ಞದಾನ ತಪಹೋಮಾದಿಗಳೆಲ್ಲವೂ ಸಾರ್ಥಕವಾದುವು. ನಿನ್ನ ಪವಿತ್ರ ಪಾದೋದಕ ಪ್ರೋಕ್ಷಣೆಯಿಂದ ನನ್ನ ಜನ್ಮಜನ್ಮಾಂತರಾರ್ಜಿತ ಸಕಲ ಪಾಪಗಳೂ ನಿರ್ಮೂಲವಾದುವು. ನಿನ್ನ ಪಾದ ಧೂಳಿಯಿಂದ ಈ ಆಶ್ರಮ ಪ್ರದೇಶವೂ, ಪಾದಸ್ಪರ್ಶದಿಂದ ನನ್ನ ಜನ್ಮವೂ ಪಾವನವಾದುವು. ನನ್ನಿಂದ ಏನಾಗಬೇಕೆಂಬುದನ್ನು ಆಜ್ಞಾಪಿಸು. ಗೋವು ಭೂಮಿ ಹಿರಣ್ಯಾದಿ ಸಕಲ ವಿಧ ದಾನಗಳಲ್ಲಿ ಯಾವುದನ್ನು ಸಮರ್ಪಿಸಿ ನಾನು ಧನ್ಯನಾಗಲಿ ! ನನ್ನಿಂದ ಏನನ್ನು ಅಪೇಕ್ಷಿಸಿ ಈ ಸ್ಥಳಕ್ಕೆ ದಯಮಾಡಿಸಿರುವೆಯೆಂದು ತಿಳಿಸು" ಎಂದು ಮೃದುಭಾಷಣದಿಂದ ಕೇಳಿಕೊಂಡನು.

ಮಹೋನ್ನತ ಪದವಿಯಲ್ಲಿದ್ದರೂ ಅಷ್ಟು ಮಟ್ಟಿನ ವಿನಯ ವಿಧೇಯತೆಗಳಿಂದ ತನ್ನನ್ನು ಎದುರುಗೊಂಡು ಗೌರವಿಸಿ ಮೃದುವಚನಗಳನ್ನು ನುಡಿದ ಬಲಿಚಕ್ರವರ್ತಿಯನ್ನು ಕಂಡು ವಾಮನನಿಗೆ ಪರಮ ಸಂತೋಷವಾಯಿತು. ಆದರೂ, ಬೇಡಿದುದನ್ನು ಕೊಡುತ್ತೇನೆಂದ ಆತನ ಮಾತನ್ನು ಇನ್ನೂ ದೃಢಗೊಳಿಸಿಕೊಳ್ಳಬೇಕೆಂದುಕೊಂಡು,-'ದಾನವೇಶ್ವರ, ನಿನ್ನ ಮಾತೂ ನಡೆವಳಿಕೆಯೂ, ಮಹಾ ವಿಷ್ಣುಭಕ್ತನಾದ ಪ್ರಹ್ಲಾದನ ವಂಶದಲ್ಲಿ ಜನಿಸಿದ ನಿನಗೆ ಉಚಿತವಾಗಿವೆ. ನಿನ್ನಾ ತಾತನು, ಪರಲೋಕ ಸಾಧಕಗಳಾದ ಧರ್ಮಗಳ

ನಿರ್ಣಯ ಮಾಡುವುದರಲ್ಲಿ ಅಗ್ರಗಣ್ಯನು. ಆತನ ವಂಶದಲ್ಲಿ ಜನಿಸಿದ ನಿನ್ನಲ್ಲಿ ಕೃಪಣಬುದ್ಧಿಯು ಯಾವ ಕಾರಣದಿಂದ ಪ್ರವೇಶಗೊಂಡೀತು! ನಿಮ್ಮ ಕುಲದಲ್ಲೇ ಅಂತಹ ದುರ್ಬಲ ಮನಸ್ಸಿನವರೂ, ಹೇಡಿಗಳೂ, ಲೋಭಿಗಳೂ ಹುಟ್ಟಲಾರರು—ಹುಟ್ಟಬಾರದು. ನಿನ್ನ ಮುತ್ತಾತಂದಿರಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳೇನು ಸಾಮಾನ್ಯ ವೀರರೇ! ನಿನ್ನ ತಂದೆಯಾದ ವಿರೋಚನನ ದಾತೃತ್ವವಾದರೂ ಏನು ಕ್ಷುದ್ರವಾದುದೇ ? ದೇವತೆಗಳು ವೇಷಾಂತರದಿಂದ ಯಾಚನಾರ್ಥವಾಗಿ ಬಂದಿರಲು, ಅವರು ದೇವತೆಗಳೆಂಬ ಅಂಶವನ್ನು ತಿಳಿದವನಾಗಿದ್ದರೂ, ನಿಮ್ಮ ವಂಶಕ್ಕೇ ಬಂದಿರುವ ಉದಾರ ಹೃದಯವನ್ನು ಸಂಕೋಚಗೊಳಿಸಿಕೊಳ್ಳದೆ, ನಿಮ್ಮ ತಂದೆಯು ತನ್ನ ಆಯುಸ್ಸನ್ನೇ ಕೊಟ್ಟುಬಿಟ್ಟನಲ್ಲವೆ? ಇಂತಹ ಪೂರ್ವಜರಿಂದ ಸುಶೋಭಿತವಾದ ವಂಶದಲ್ಲಿ ಉದ್ಭವಿಸಿದ ನೀನು ನಮ್ಮಂತಹ ಯಾಚಕರನ್ನು ತೃಪ್ತಿಗೊಳಿಸುವುದರಲ್ಲಿ ಆಶ್ಚರ್ಯವೇನಿದೆ? ಬಲಿರಾಜ, ನನಗೇನು ಬಹಳ ಬೇಡ. ನನ್ನ ಪಾದಗಳಲ್ಲಿ ಮೂರು ಅಡಿಗಳಿಂದ ಅಳೆವಷ್ಟು ಪ್ರದೇಶವನ್ನು ಮಾತ್ರ ನನಗೆ ದಾನವಾಗಿ ಕೊಡು. ನನಗೆ ವಿಶೇಷ ಆಸೆಯಿಲ್ಲ. ನೀನು ಹೆಚ್ಚಾಗಿ ಕೊಟ್ಟರೂ ನಾನು, ಅಂಗೀಕರಿಸತಕ್ಕವನಲ್ಲ. ಆಸೆಗೆ ಮಿತಿಯುಂಟೆ? ನೀನು ತ್ರಿಲೋಕಾಧಿಪತಿಯೆಂದೂ, ಕೊಡುಗೈ ವೀರನೆಂದೂ ನನಗೆ ಅನಾವಶ್ಯಕವಾದ ವಸ್ತುಗಳನ್ನೆಲ್ಲಾ ಯಾಚಿಸುವುದು ಸುಜನ ಸಮ್ಮತವಲ್ಲ. ಆದುದರಿಂದ ನಾನು ಕೇಳಿದಷ್ಟನ್ನು ಮಾತ್ರ ನೀನು ದಯೆಮಾಡಿ ಕೊಟ್ಟೆಯಾದರೆ ನನಗೆ ತೃಪ್ತಿಯಾಗುವುದು' ಎಂದು ನುಡಿದನು.

ವಾಮನನ ಆ ಮಾತುಗಳು ಬಲೀಂದ್ರನಿಗೆ ಮಹದಾಶ್ಚರ್ಯವನ್ನುಂಟುಮಾಡಿದುವು.—'ಇದೇನು ಬ್ರಾಹ್ಮಣ ಕುಮಾರಾ, ನೀನು ನನ್ನನ್ನೂ ನನ್ನ ಪೂರ್ವಜರನ್ನೂ ಮಹಾ ಉದಾರಿಗಳೆಂದೂ ದಾನಶೂರರೆಂದೂ ವಿಶೇಷವಾಗಿ ಹೊಗಳಿ, ಈಗ ಆ ಮಾತನ್ನು ಸಾರ್ಥಕಗೊಳಿಸಲವಕಾಶಕೊಡದಂತೆ ಈ ಕ್ಷುದ್ರ ದಾನವನ್ನು ಕೇಳಿ, ನನ್ನನ್ನು ಅವಮಾನಗೊಳಿಸಬಹುದೆ?-ಇದು ಸಮನಲ್ಲ, ನಿನಗೆ ಬುದ್ಧಿಭ್ರಮಣೆಯಾಗಿರಬಹುದು. ಸರಿಯಾಗಿ ಯೋಚಿಸಿ ಕೇಳು, ನನ್ನದೊಂದು ಪ್ರತಿಜ್ಞೆಯಿರುವುದು. ಏನೆಂಬೆಯಾ, ನನ್ನಲ್ಲಿ ಯಾಚನೆಗೆ ಬಂದವರು, ತಮಗೆ ಬೇಕಾದ ಸಮಸ್ತವನ್ನೂ ಪಡೆದು ತೃಪ್ತರಾಗಿ

ಹೋಗಬೇಕಲ್ಲದೆ, ನನ್ನ ಮನೆಯಿಂದ ಅತೃಪ್ತರಾಗಿ ಹೋಗಿ, ಬೇರೊಬ್ಬರಲ್ಲಿ ಯಾಚಿಸಬಾರದು. ಆದುದರಿಂದ ಮೂರು ಹೆಜ್ಜೆಗಳ ಭೂಮಿ ಮಾತ್ರವಲ್ಲ-ಸಂಕೋಚವಿಲ್ಲದೆ, ಬೇಕಾದಷ್ಟನ್ನು ಬೇಡು, ಕೊಡಲು ಸಿದ್ಧನಾಗಿರುವೆನು' ಎಂದನು. ಆಗ, ವಾಮನವಟುವು-'ಬಲೀಂದ್ರಾ, ವ್ಯರ್ಥಭಾಷಣ! ಆಸೆಗೆ ಪಾರವಿಲ್ಲವೆಂದು ನಾನು ಮೊದಲೇ ಹೇಳಿದೆನಲ್ಲವೆ! ಮೂರು ಹೆಜ್ಜೆಗಳಿಂದ ತೃಪ್ತವಾಗದ ನನ್ನ ಮನಸ್ಸು ಮೂರು ಯೋಜನದಷ್ಟು ಅಳತೆಯ ಭೂಪ್ರದೇಶದಿಂದಲೂ ತೃಪ್ತವಾಗದು. ಅದನ್ನು ನಿನ್ನ ಸಪ್ತದ್ವೀಪ ಪೃಥ್ವಿಯನ್ನು ಕೊಟ್ಟೂ ತೃಪ್ತಿಗೊಳಿಸಲು ಸಾಧ್ಯವಿಲ್ಲ. ಪೂರ್ವದಲ್ಲಿದ್ದ ಪೃಥು ಮೊದಲಾದ ಪೃಥ್ವೀಪತಿಗಳೆಲ್ಲರೂ ಸಪ್ತದ್ವೀಪಾಧಿಪತ್ಯವನ್ನು ಪಡೆದೂ ಇನ್ನೂ ತೃಪ್ತರಾಗಿರಲಿಲ್ಲವೆಂದು ಕೇಳಿದ್ದೇನೆ. ಆದುದರಿಂದ ಪೃಥ್ವೀವಲ್ಲಭ ಅಧಿಕವಾದ ಆಸೆಯು ಪಾಪಸಾಧನೆಯಲ್ಲದೆ ಅದರಿಂದ ಸುಖವಿಲ್ಲ. ಸಂತುಷ್ಟಾಂತರಂಗವುಳ್ಳವನು ಯಾರೋ ಅವನು ನಿರ್ಧನನಾಗಿಯೂ ಲೋಕದಲ್ಲಿ ಪರಮ ಸುಖಿಯಾಗಿರುವನು. ಅರ್ಥಕಾಮಗಳಲ್ಲಿ ಅತೃಪ್ತನಾದ ಪುರುಷನು ಮೂರು ಲೋಕಗಳಲ್ಲಿರುವ ಅಶೇಷ ಧನ ಕನಕಗಳನ್ನು ಪಡೆದಿದ್ದರೂ ಶಾಂತಿಯಿಲ್ಲದೆ, ಸಂಸಾರ ಪಾಶದಲ್ಲಿ ಬಂಧಿತನಾಗಿ ತೊಳಲುತ್ತಿರುವನು. ತೃಪ್ತನಾದ ಬ್ರಾಹ್ಮಣನಿಗೆ, ಆ ಸಂತುಷ್ಟಿಯಿಂದಲೇ ಬ್ರಹ್ಮತೇಜಸ್ಸು ವೃದ್ಧಿಯಾಗುವುದು. ಅಸಂತುಷ್ಟನಾದ ಬ್ರಾಹ್ಮಣನು ಇಹಪರಗತಿಗಳನ್ನು ಕಳೆದುಕೊಂಡು ನಷ್ಟವಾಗುವನು. ದಾನವೇಶ, ನನಗೆ ನಿನ್ನ ವಿಶೇಷ ಧನ ಕನಕಾದಿಗಳಲ್ಲಿ ಆಸೆ ಹುಟ್ಟದು. ನಾನು ಕೇಳಿದ ಮೂರಡಿಗಳ ಭೂಮಿಯನ್ನು ಮಾತ್ರ ಕೊಡು. ಸಾಕು, ಅದೇ ನನಗೆ ಯಥೇಷ್ಟವಾಯಿತು' ಎಂದು ಸುಮ್ಮನಾದನು.

ವಾಮನಮೂರ್ತಿಯಾಡಿದ ಮಾತುಗಳೂ, ಆತನ ನಿಸ್ಪೃಹಭಾವವೂ ಬಲಿಚಕ್ರವರ್ತಿಯ ಮನಸ್ಸಿಗೆ ವಿಶೇಷ ಆಶ್ಚರ್ಯವನ್ನುಂಟುಮಾಡಿದುವು. ತನ್ನ ಎದುರಿಗೆ ನಿಂತ ಆ ಬಾಲವಟುವು ಯಾರು, ಎಲ್ಲಿಯವನು ಎಂಬ ಪರಿಚಯವು ಅವರಿಗೂ ಆಗಿರಲಿಲ್ಲ. ಆದರೆ, ಆತನ ವಿಷಯದಲ್ಲಾದರೋ ಮೇಲೆಮೇಲೆ, ಬಾಯಿಂದ ಉಚ್ಚರಿಸಲಾಗದಂತಹ ಒಂದು ಬಗೆಯ ಪ್ರೇಮವು ವೃದ್ಧಿಯಾಗುತ್ತಾ ಬರುತ್ತಿದ್ದಿತು. ಆಗಲಾದೈತ್ಯೇಶ್ವರನು-'ವಟೋತ್ತಮಾ,

ನೀನು ಯಾರು ಹೇಳು! ಎಲ್ಲಿಯುವನು, ನಿನ್ನ ತಂದೆ ತಾಯಿಗಳಾರು, ಬಂಧು ಬಾಂಧವರಾರು? ನೀನು ಯಾವ ಗುರುಗಳಲ್ಲಿ ಏನೇನು ವಿದ್ಯೆಗಳನ್ನು ಅಭ್ಯಸಿಸಿರುವೆ! ಹೇಳು. ನಿನ್ನನ್ನು ನೋಡಿ ನೋಡಿದಂತೆ, ನನ್ನ ಮನಸ್ಸಿನಲ್ಲಿ ಆನಂದವು ಉಕ್ಕುತ್ತಿರುವುದು. ನಿನ್ನ ಮೃದುಗಾಂಭೀರ್ಯ ಉಕ್ತಿಗಳು ಮೇಲೆ ಮೇಲೆ ಹರ್ಷವನ್ನುಂಟುಮಾಡುತ್ತಿವೆ'' ಎಂದು ಪ್ರಶ್ನಿಸಿದನು. ಆದಕೇಳಿ ವಾಮನನು-'ದೈತ್ಯಶ್ರೇಷ್ಠರಾ, ಉತ್ತಮವಾದ ಪ್ರಶ್ನೆಯನ್ನು ಕೇಳಿದೆಯಲ್ಲಾ! ಭಿಕ್ಷುಕನಾದ ನನಗೆ ಇಂಥದೇ ಸ್ಥಳವೆಂದು ಹೇಗೆ ಹೇಳಲಿ! ನಾನು ಎಲ್ಲಾ ಸ್ಥಳಗಳಲ್ಲೂ ಇರುವೆನು. ಇಂಥವರೇ ಪ್ರತ್ಯೇಕ ನನ್ನ ತಂದೆತಾಯಿಗಳೆಂದು ನಾನು ತಿಳಿದಿಲ್ಲ. ಯಾರು ದಾನಶೀಲರೋ, ಯಾರು ದಯಾರ್ದ್ರ ಹೃದಯರೋ, ಯಾರು ನೀತಿವಂತರೋ, ಆಶ್ರಿತವತ್ಸಲರೋ ಅವರೆಲ್ಲರೂ ನನ್ನ ತಂದೆತಾಯಿಗಳು. ನನಗೆ ತಿಳಿದಂತೆ ನನಗೆ ಬಾಂಧವರಾರೂ ಇಲ್ಲ. ಆದರೆ ನಾನು ಸಮಸ್ತ ಪ್ರಾಣಿವರ್ಗಕ್ಕೂ ಬಾಂಧವನೆಂದು ತಿಳಿದಿರುವೆನು. ನಾನು ಇದನ್ನು ಕಲಿತೆ ಆದನ್ನು ಕಲಿತೆನೆಂದು ಪ್ರತ್ಯೇಕ ಹೇಳಲೇನು? ನನಗೆ ತಿಳಿಯದುದು ಏನೊಂದೂ ಇಲ್ಲವೆಂದು ತಿಳಿವನಾಗು. ಸದ್ಯಃ ನಾನೆಂತೂ ಒಂಟಿಗನಾಗಿದ್ದೇನಾದ್ದರಿಂದ, ಯಾರ ಆಟಂಕವೂ ಇಲ್ಲದಂತೆ ತಪಸ್ಸುಮಾಡಿಕೊಂಡಿರಲು ಒಂದು ಸ್ವತಂತ್ರ ಸ್ಥಳವಿರಲೆಂದು ನಿನ್ನನ್ನು ಮೇಲ್ಕಂಡಂತೆ ಮೂರಡಿಗಳ ಭೂಮಿಯನ್ನು ಯಾಚಿಸಿದೆನು'' ಎಂದ ನುಡಿದು ಸುಮ್ಮನಾದನು.

ವಾಮನ ಮೂರ್ತಿಯು ಯಜ್ಞಭೂಮಿಯನ್ನು ಹೊಕ್ಕಾಗಿನಿಂದಲೂ, ದೈತ್ಯರಾಜನ ಗುರುವಾದ ಶುಕ್ರಾಚಾರ್ಯರಿಗೆ ಆತನ ವಿಷಯದಲ್ಲಿ ಸಂದೇಹವೇ ಇತ್ತು. ಆತನ ಅನನ್ಯ ಸಾಧಾರಣವಾದ ರೂಪವೂ, ಅಲೌಕಿಕ ತೇಜಸ್ಸೂ, ಆ ವಾಕ್ಪಟುತ್ವವೂ, ಗುರುವಿನ ಮನಸ್ಸನ್ನು ಸಂಪೂರ್ಣವಾಗಿ ಅಪಹರಿಸಿಬಿಟ್ಟಿದ್ದುದರಿಂದ—ಈತನಾರೋ ಮಹಾನುಭಾವನು, ದೈತ್ಯರಾಜನನ್ನು ವಂಚಿಸಿ, ದೇವತೆಗಳಿಗೆ ಮೇಲನ್ನುಂಟುಮಾಡಲಿಕ್ಕಾಗಿಯೇ ಬಂದಿದ್ದಾನೆ-ಎಂದು ಸಂದೇಹಿಸಿದ್ದನು. ಆ ಬಾಲವಟುವು ಕೊನೆಗಾಡಿದ ಮಾತುಗಳಿಂದ ಆತನ ಸಂದೇಹವು ಪರಿಹಾರವಾಯಿತು.—'ಒಂದೇ ಸ್ಥಳವೆಂಬುದಿಲ್ಲ-ಸರ್ವತ್ರ ಇರುವೆನು. ತಂದೆತಾಯಿ ಬಂಧು ಬಾಂಧವರಿಲ್ಲ. ತನಗೆ ತಿಳಿಯದು

ದು ಏನೂ ಇಲ್ಲ.'' ಈ ಮುಂತಾದ ವಾಕ್ಯಗಳ ಅಂತರಾರ್ಥವು ಆತನಿಗೆ ಗೋಚರವಾಯಿತು.—'ಸಂದೇಹವೇಕೆ? ಈತನು ನಿಜವಾಗಿಯೂ ವಿಷ್ಣುವೇ! ದೇವಕಾರ್ಯ ಸಾಧನೆಗಾಗಿಯೇ, ಈ ವೇಷವನ್ನು ಧರಿಸಿ, ಬಲಿಯನ್ನು ವಂಚಿಸಿ ರಾಜ್ಯಾಪಹರಣಮಾಡಲು ಬಂದಿದ್ದಾನೆ' ಎಂದು ನಿಶ್ಚಯಿಸಿ ತನ್ನ ಶಿಷ್ಯನ ಶ್ರೇಯಸ್ಸನ್ನು ಕೋರಿ,-'ದೈತ್ಯೇಶ್ವರಾ, ಯಾಚಕನಾಗಿ ಬಂದಿರುವ ಈ ವಟುವು ಯಾರೆಂದು ತಿಳಿದಿರುವೆ! ಮೋಸ ಹೋಗಬೇಡ. ದಾನಕೊಟ್ಟು ಕೊನೆಗೆ ಪರಿತಪಿಸಬೇಡ. ಈತನು ಕಶ್ಯಪ ಋಷಿಯ ಉದರ ಸಂಭೂತನು. ದೇವವರ್ಗದ ಕಲ್ಯಾಣಕ್ಕಾಗಿ ಶ್ರೀ ಮಹಾವಿಷ್ಣುವೇ, ಅವತಾರ ಮಾಡಿರುವನು. ನಿನ್ನನ್ನು ಈಗ ಯಾಚಿಸಿರುವ ಆ ಮೂರು ಅಡಿಗಳಿಂದಲೇ ಮೂರು ಲೋಕಗಳನ್ನೂ ವ್ಯಾಪಿಸಿ ನಿನ್ನ ಸರ್ವಸ್ವವನ್ನೂ ಅಪಹರಿಸಿಬಿಡುವನೆಂಬುದರಲ್ಲಿ ಸಂದೇಹವಿಲ್ಲ. ಆದುದರಿಂದ ಗೃಹಸ್ಥ ಧರ್ಮದಲ್ಲಿರುವ ನೀನು ಧರ್ಮ ಸಂಕಟಕ್ಕೆ ಗುರಿಯಾಗಿ ಸರ್ವಸ್ವವನ್ನೂ ತೆತ್ತು ಕಷ್ಟಕ್ಕೆ ಗುರಿಯಾಗದಂತೆ ಜಾಗ್ರತನಾಗಿರು' ಎಂದು ನುಡಿದರು.

ಗುರುಗಳ ಮಾತು ಕಿವಿಗೆ ಬಿದ್ದೊಡನೆಯೇ, ಬಲೀಂದ್ರನು ಒಂದು ಬಾರಿ, ವಾಮನ ಮೂರ್ತಿಯ ಮುಖಕಮಲವನ್ನು ನೋಡಿದನು. ಎಂಥಿನಂತೆ, ಮಂದಹಾಸ ಯುಕ್ತವಾದ ನಿಷ್ಕಲಂಕ ಮುಖಮಂಡಲ; ತೇಜಸ್ವಿ ಕಣ್ಣುನೋಟ, ದಿವ್ಯಸುಂದರ ವಿಗ್ರಹ! ಆತನ ಮನಸ್ಸು ಸಂಪೂರ್ಣ ಸೂರೆಹೋಯಿತು.—'ಗುರುವರಾ, ತಾವು ಹೇಳುವಮಾತು ಸತ್ಯವು. ಗೃಹಸ್ಥನಾದವನು ತನ್ನ ಪರಿಣಾಮವನ್ನು ನೋಡಿಕೊಳ್ಳದೆ ದಾನಮಾಡುವುದು ತಕ್ಕುದಲ್ಲ. ಆದರೆ, ನೀನು ಬೇಡಿದುದನ್ನು ಕೊಡುತ್ತೇನೆಂದು ನುಡಿದು ಪ್ರತಿಜ್ಞೆಮಾಡಿದ ನಾನು, ಈಗ ಅದಕ್ಕೆ ವಿರೋಧವಾಗಿ ನಡೆದು ಹೇಗೆ ಮರ್ಯಾದೆಯಿಂದ ಈ ಲೋಕದಲ್ಲಿ ಜೀವಿಸಲಿ? ಅಸತ್ಯಕ್ಕಿಂತಲೂ ಘೋರವಾದ ಪಾತಕವು ಲೋಕದಲ್ಲಿ ಮತ್ತೊಂದುಂಟೆ? ರಾಜ್ಯಲೋಭ ಧನಲೋಭಗಳಿಗೊಳಪಟ್ಟು ಸುಳ್ಳುಗಾರನಾದ ನನ್ನನ್ನು ನೋಡಿ, ನಮ್ಮ ತಾತನಾದ ಪ್ರಹ್ಲಾದನು ಶಪಿಸಲಾರನೆ? ನನ್ನನ್ನು ಕುಲಬಾಹಿರನೆಂದು ತಿಳಿಯಲಾರನೆ? ಪೂರ್ವದಿಂದಲೂ ಈವರೆಗೆ ಧರೆಯನ್ನಾಳಿದ ರಾಜರಲ್ಲಿ ಎಷ್ಟುಮಂದಿ, ಈ ಧನ ಕನಕಗಳನ್ನೂ ಭೂಮಿಯನ್ನೂ ತಮ್ಮೊಂದಿಗೆ ಹೊತ್ತೊಯ್ದರು?

ಆದರೆ ನೋಡಿರಿ. ದಧೀಚಿ, ಶಿಬಿ ಮೊದಲಾದ ಮಹಾಪುರುಷರು, ಪರೋಪಕಾರಕ್ಕಾಗಿ, ಯಾಚಕರಿಗೆ ಕೊಟ್ಟ ವಾಕ್ಕಿಗೆ ವಿರೋಧವಾಗದೆ ತಮ್ಮ ದೇಹಗಳನ್ನೇ ತೆತ್ತು, ಈವರೆಗೂ, ಮುಂದೆ ಚಂದ್ರಸೂರ್ಯಾದಿಗಳಿರುವವರೆಗೂ ಯಶಶ್ಚಂದ್ರಿಕೆಯನ್ನು ಬೆಳೆಯಿಸಿ ಕೊಂಡಿರುವರಲ್ಲವೆ? ಲೋಕದಲ್ಲಿ ಮನುಷ್ಯನು ಅರ್ಜಿಸುವ, ಧನ ವಸ್ತ್ರ ಒಡವೆ ಮುಂತಾದುವುಗಳೆಲ್ಲವೂ ಅರ್ತರ ಅಪೇಕ್ಷೆಯನ್ನು ತೀರಿಸಲು ಉಪಯೋಗವಾಗದಿದ್ದರೆ ಅಂತಹ ಐಶ್ವರ್ಯಾದಿಗಳಿಂದ ಏನು ಫಲ ? ಈತನು ನನ್ನ ಸರ್ವಸ್ವವನ್ನೂ ಅಪಹರಿಸುವನೆಂದಿರಲ್ಲವೆ ? ಅದಕ್ಕಾಗಿ ಭಯಪಟ್ಟು ನಾನು ಕೊಟ್ಟ ಮಾತಿಗೆ ತಪ್ಪಿ ಅಸತ್ಯವಾದಿಯಾಗಲಾರೆನು ! ಮಹಾವಿಷ್ಣುವೇ ಈ ರೂಪದಿಂದ ಬಂದಿರುವನೆಂದಿರಲ್ಲವೆ ? ಹಾಗಿದ್ದರಂತೂ ನನ್ನಂತಹ ಭಾಗ್ಯಶಾಲಿಯಾರು ?- ಸಾಕ್ಷಾನ್ಮಹಾಲಕ್ಷ್ಮೀದೇವಿಯ ಸಿರಿಮುಡಿ, ಭುಜ ಕಪೋಲಸ್ಥಳಗಳಲ್ಲಾಡುವ ಮನೋಹರವಾದ ಮಹಾವಿಷ್ಣುಮೂರ್ತಿಯ ಕರಕಮಲವು ಯಾಚನೆಗಾಗಿ ನೀಡಲ್ಪಟ್ಟು ಕೆಳಗಾಗಿ, ದಾತೃವಾದ ನನ್ನ ಕೈಯು ಮೇಲಿರುವ, ಈ ಸುಸಂಧಿಯು-ಆಚಾರ್ಯರೇ, ಎಷ್ಟು ಜನ್ಮದ ತಪಸ್ಸಿನಿಂದ ತಾನೇ ಲಭ್ಯವಾದೀತು ? ಜನ್ಮವೇನು ಸ್ಥಿರವೇ, ಐಶ್ವರ್ಯ ರಾಜ್ಯಭೋಗಾದಿಗಳೇನು ಶಾಶ್ವತಗಳೇ ? ಏಕೆ ಶಂಕಿಸುವಿರಿ ? ಇಂದೇ ಈ ಧರೆಯು ನಿರ್ಮೂಲವಾಗಲಿ, ನನಗೆ ದುರ್ಮರಣವಾಗಲಿ, ನಮ್ಮ ಕುಲವಾದರೂ ಇಂದೇ ಮುಳುಗಿಹೋಗಲಿ, ಬರಬಹುದಾದ ಆಪತ್ತುಗಳೆಲ್ಲವೂ ಏಕಕಾಲದಲ್ಲಿ ಬರಲಿ! ಈ ಯಾಚಕನು ಹರಿಯಾಗಲಿ, ಹರನಾಗಲಿ ಅಥವ ಚತುರ್ಮುಖನೇ ಮಾರು ರೂಪುಗೊಂಡು ಬಂದಿರಲಿ ! ನನ್ನ ಜಿಹ್ವೆಯು ಕೊಟ್ಟಮಾತನ್ನು ಮೀರಿ ಹಿಂದಿರುಗಲಾರದು. ನಾನು ಕೊಡುತ್ತೇನೆಂದು ಹೇಳಿದ ದಾನವನ್ನು ಕೊಡದೆ ಇರಲಾರೆನು ?" ಎಂದು ಪ್ರತ್ಯುತ್ತರ ಕೊಟ್ಟನು.

ಶುಕ್ರಾಚಾರ್ಯರು, ತಮ್ಮ ಶಿಷ್ಯನ ನಿರ್ಧಾರವನ್ನು ಕೇಳಿ ಮತ್ತೂ ಹೇಳಿನೋಡೋಣವೆಂದು,-"ದೈತ್ಯೇಂದ್ರಾ, ಯೋಚಿಸಿನೋಡು. ಈತನು ನಿನ್ನ ರಾಜ್ಯಾಪಹರಣಕ್ಕಾಗಿಯೇ ಬಂದಿರುವನೆಂದು ನಾನು ಒತ್ತಿಯೊತ್ತಿ ಹೇಳುತ್ತಿದ್ದರೂ ನೀನದನ್ನು ದುರ್ಲಕ್ಷಿಸುತ್ತಿರುವೆ! ನಿನ್ನ ಹಿತಚಿಂತಕನಾದ ನನ್ನ ಮಾತನ್ನು ಮೀರಿ ನಡೆಯುತ್ತಿರುವುದು ನಿನಗೆ ಶ್ರೇಯಸ್ಕರವಲ್ಲ. ನೀನು

ಸದ್ಯದಲ್ಲೇ ತ್ರಿಲೋಕಾಧಿಪತ್ಯವನ್ನೂ ಕಳೆದುಕೊಂಡು ವ್ಯಥೆಪಡುವೆ. ಈಗಲಾದರೂ ಗಮನಿಸು. ಸ್ತ್ರೀ ವಶ್ಯದಲ್ಲಿಯೂ, ಪರಿಹಾಸಗಳಲ್ಲಿಯೂ, ಪ್ರಾಣಾಪಾಯ ಸಮಯದಲ್ಲೂ, ಗೋ ಬ್ರಾಹ್ಮಣ ರಕ್ಷಣೆಮಾಡಬೇಕಾದ ಕಾಲದಲ್ಲೂ ಸುಳ್ಳಾಡಿದರೆ, ಅದರಿಂದ ದೋಷವಿಲ್ಲವೆಂದು ಹೇಳಲ್ಪಟ್ಟಿದೆ. ಇನ್ನಾದರೂ ಗಮನಿಸಿ ಜಾಗ್ರತನಾಗು" ಎಂದರು. ಬಲಿಯು, ತನ್ನ ನಿಶ್ಚಯ ಮನೋವೃತ್ತಿಯನ್ನರಿಯದೆ ಹೇಳುತ್ತಿದ್ದ ಅವರ ಮಾತುಗಳಿಗಾಗಿ ರೋಸಿ "ಗುರುವರ್ಯರೇ, ಏಕೆ ಶಂಕೆಗೊಳ್ಳುವಿರಿ. ಮೇರುಪರ್ವತವು ಈ ದಿನವೇ ತಲೆಕೆಳಗಾಗುವಂತಿದ್ದರೂ, ಸಪ್ತ ಸಾಗರಗಳೂ ಇಂದೇ ಬತ್ತಿಹೋದರೂ, ಭೂಮಿಯು ಇಂದೇ ಧೂಳಾಗಿ ಹಾರಿಹೋದರೂ ನಾನು ಕೊಡುತ್ತೇನೆಂದು ಹೇಳಿದ ವಸ್ತುವನ್ನು ಕೊಟ್ಟಲ್ಲದೆ ಸ್ವಸ್ಥಚಿತ್ತನಾಗಲಾರೆನು" ಎಂದು ನುಡಿದು, ಒಡನೆ ಆ ವಟುವಿನ ಹಸ್ತದಲ್ಲಿ ದಾನಜಲವನ್ನು ಬಿಡಲು ಸಿದ್ಧನಾದನು.

ವಾಮನಮೂರ್ತಿಯು ದಕ್ಷಿಣ ಹಸ್ತವನ್ನು ಮುಂದೆ ನೀಡಿ ನಿಂತಿದ್ದಾನೆ: ಚಕ್ರವರ್ತಿಯು, ತನ್ನ ಪತ್ನಿಯಾದ ವಿಂಧ್ಯಾವಳೀದೇವಿಯು ಬಂಗಾರದ ಗಿಂಡಿಯಿಂದೆರೆದ ಶುಭ್ರ ಜಲದಿಂದ ಪುನಃ ಆ ಭೂಸುರೋತ್ತಮನ ಪಾದ ಪ್ರಕ್ಷಾಳನಮಾಡಿ, ಆ ಪವಿತ್ರೋದಕವನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಂಡು, ಸಂಕಲ್ಪ ಪೂರ್ವಕವಾಗಿ, ದಾನಜಲವನ್ನು ವಾಮನನ ಕೈಗೆ ಬಿಡಲಾರಂಭಿಸಿದ್ದಾನೆ. ಗುರು ಶಾಪವನ್ನೂ ಅದರಿಂದ ತನಗೆ ಪ್ರಾಪ್ತವಾಗಲಿದ್ದ ಮಹಾ ಕಷ್ಟ ನಷ್ಟಗಳನ್ನೂ ಲಕ್ಷ್ಯಮಾಡದೆ, ಬಲಿಚಕ್ರವರ್ತಿಯು ಧೈರ್ಯಮೇರುವೋ ಎಂಬಂತೆ, ಮಾಡುತ್ತಿದ್ದ ಆತನ ಆ ಸಾಹಸಕಾರ್ಯಕ್ಕೆ ಪರಮಾಶ್ಚರ್ಯಪಟ್ಟು, ದೇವತೆಗಳು ಕೋಲಾಹಲ ಧ್ವನಿಮಾಡುತ್ತಾ, ಅಂತರಿಕ್ಷದಿಂದ ಪುಷ್ಪವರ್ಷವನ್ನು ಕರೆಯುತ್ತಿದ್ದಾರೆ. ದೇವದುಂದುಭಿಗಳು ಮೊಳಗುತ್ತಿವೆ. ಗಂಧರ್ವಾದಿಗಳು ಗುಂಪಾಗಿ ನೆರೆದು "ಆಹಾ ಬಲಿಚಕ್ರವರ್ತಿಯು ಎಂತಹ ಸತ್ಯಸಂಧನು, ಎಂತಹ ಧೀರೋದಾತ್ತನು, ಎಂತಹ ತ್ಯಾಗಿ ಶಿರೋಮಣಿಯು!' ಎಂದು ಹೊಗಳುತ್ತಿದ್ದಾರೆ. ಇಷ್ಟು ಸಂಭ್ರಮದಲ್ಲಿ, ಬಲಿಚಕ್ರವರ್ತಿಯು ದಾನ ಜಲವನ್ನು ವಾಮನನ ಕೈಯಲ್ಲಿ ಬಿಡುತ್ತಾ—

'ವಿಪ್ರಾಯ ಪ್ರಕಟವ್ರತಾಯ ಭವತೇ ವಿಷ್ಣುಸ್ವರೂಪಾಯ ವೇ
ದಪ್ರಾಮಾಣ್ಯವಿದೇಃ ತ್ರಿಪಾದ ಧರಣೀಂ ದಾಸ್ಯಾಮಿ.........'

ಎಂದು ನುಡಿದನು. ಅಷ್ಟೆ! ಆ ಮಾತುಗಳು ಬಲಿಯ ಬಾಯಿಂದ ಹೊರಟುದೇ ಸಾವಕಾಶವು. ಒಡನೆಯೇ ಎಲ್ಲರೂ ನೋಡುತ್ತಿದ್ದಂತೆಯೇ, ವಾಮನಮೂರ್ತಿಯ ಚಿಕ್ಕ ದೇಹವು ಸಕಲರಿಗೂ ಆಶ್ಚರ್ಯವುಂಟಾಗುವಂತೆ ಉಬ್ಬಿ ಬೆಳೆಯಲಾರಂಭವಾಯಿತು. ವಾಮನ ರೂಪದಿಂದಿದ್ದ ಆ ವಟುವಿನ ಲಘುರೂಪವು ಕ್ಷಣಮಾತ್ರದಲ್ಲಿ ಭೂಮ್ಯಂತರಿಕ್ಷಗಳು ಏಕವಾದಂತೆ ತ್ರಿವಿಕ್ರಮ ರೂಪದಿಂದ ಅಗಾಧವೆನ್ನಿಸಿತು. ಅದನ್ನು ನೋಡುತ್ತ ನೋಡುತ್ತ ಬಲಿಯೂ ಯಾಗಶಾಲೆಯಲ್ಲಿದ್ದ ಮಹರ್ಷಿಗಳೂ ಬ್ರಾಹ್ಮಣರೂ ಆ ದೃಶ್ಯವನ್ನು ನೋಡಿಕೊಂಡಿದ್ದ ಅಂತರಿಕ್ಷದಲ್ಲಿದ್ದ ದೇವತೆಗಳೂ ಸಕಲರೂ ಪರಮಾಶ್ಚರ್ಯಮಗ್ನರಾದರು.

## ಉಪಸಂಹಾರ

ಕುಬ್ಜನಾದ ವಾಮನವಟುವು, *ತ್ರಿವಿಕ್ರಮನಾಗಿ ಬೆಳೆದು ಭೂಲೋಕ ಭುವರ್ಲೋಕ ಸುವರ್ಲೋಕ ಜನೋಲೋಕ ತಪೋಲೋಕ ಮಹೋಲೋಕ ಸತ್ಯಲೋಕಗಳೆಂಬ ಸಪ್ತಲೋಕಗಳನ್ನೂ ವ್ಯಾಪಿಸಿ, ಸಕಲ ದಿಕ್ಕುಗಳನ್ನೂ ಆಕ್ರಮಿಸಿದನು. ಆ ವಿರಾಡ್ಮೂರ್ತಿಯ ದೇಹದ ಒಂದೊಂದವಯವವೂ ಜಗತ್ತಿನ ಪ್ರಕೃತಿ ತತ್ವಗಳನ್ನು ಒಳಕೊಂಡು ಸಂಪೂರ್ಣತೆಯನ್ನು ಹೊಂದಿ ಶೋಭಿಸುತ್ತಿದ್ದಿತು. ಪ್ರಪಂಚಕ್ಕೆ ಅಗಾಧವೆನಿಸುವ ಆ ದಿವ್ಯರೂ

---

*ಇಂತಿಂತೈ ವಟುಡಿಂತಯ್ಯೈ ಮರಿಯುದಾನಿಂತೈ ನಭೋ ವೀಥಿಪೈ
ನಂತೈ ತೋಯದ ಮಂಡಲಾಗ್ರಮುನಕಲ್ಲಂತೈ ಪ್ರಭಾರಾಶಿಪೈ
ನಂತೈ ಚಂದ್ರನಿಕಂತಯ್ಯೈ ಧ್ರುವುನಿಪೈನಂತೈ ಮಹಾರ್ಲೋಕಪೈ
ನಂತೈ ಸತ್ಯಪದೋನ್ನತುಂಡಗುಚು ಬ್ರಹ್ಮಾಂಡಾಂತ ಸಂವರ್ಧಿಯೈ

ಶ್ರೀಮದಾಂಧ್ರ ಮಹಾಭಾಗವತಮು.

ಪದಿಂದ ಕೂಡಿದ ತ್ರಿವಿಕ್ರಮಮೂರ್ತಿಯು ಒಂದು ಪಾದದಿಂದ ಭೂಲೋಕವನ್ನೂ ಮತ್ತೊಂದು ಪಾದದಿಂದ ನಭೋಲೋಕಗಳನ್ನೆಲ್ಲವನ್ನೂ ಅಳೆದುಬಿಟ್ಟನು. ಮಹಾವಿಷ್ಣುವಿನ ಎರಡನೆಯ ಪಾದವು ಬ್ರಹ್ಮದೇವನ ಸತ್ಯಲೋಕವನ್ನೂ ಮೀರಿಹೋಯಿತು. ಆಗ ಚತುರ್ಮುಖಬ್ರಹ್ಮನು ಭಯಭಕ್ತಿಯಿಂದ ಎದ್ದು, ಆ ವಿಶ್ವಮೂರ್ತಿಯ ಕಿರುಬೆರಳಿನ ತಗುಲುವಿಕೆಯಿಂದ ಒಡೆದ ಬ್ರಹ್ಮಾಂಡ ಕಟಾಹದಿಂದ ಒಳಹೊಕ್ಕ ಪವಿತ್ರೋದಕವನ್ನು ತನ್ನ ಕಮಂಡಲುವಿನಲ್ಲಿ ಹಿಡಿದು, ಆ ದೇವದೇವೋತ್ತಮನ ಪಾದಗಳನ್ನು ತೊಳೆದು, ಪಾದೋದಕವನ್ನು ಶಿರಸ್ಸಿನಲ್ಲಿ ಧರಿಸಿದನು. ಆ ಪಾದೋದಕವೇ ಗಂಗೆಯೆಂಬ ಸುಪ್ರಸಿದ್ಧ ದೇವತರಂಗಿಣಿಯಾಗಿ ಪ್ರವಹಿಸಿತು.

ಒಂದು ಪಾದದಿಂದ ಭೂಮಿಯನ್ನೂ ಮತ್ತೊಂದು ಪಾದದಿಂದ ಅಂತರಿಕ್ಷವನ್ನೂ ಅಳೆದ ತ್ರಿವಿಕ್ರಮನು ಮೂರನೆಯ ಅಡಿಗೆ ಸ್ಥಳವನ್ನು ತೋರಿಸೆಂದು ಬಲಿಯನ್ನು ಕೇಳಿದನು. ಆ ಪರಿಸ್ಥಿತಿಯನ್ನು ಕಂಡು ಸ್ತಬ್ಧನಾದ ಬಲಿಯು ಏನೂ ಪ್ರತ್ಯುತ್ತರ ಕೊಡಲಾರದೆ ಸ್ವಲ್ಪ ಹೊತ್ತು ಮೌನವಾಗಿರಲು, ವಿಷ್ಣುವಿನ ಆಜ್ಞೆಯಿಂದ ಗರುಡನು ಅವನನ್ನು ವರುಣಪಾಶದಿಂದ ಬಿಗಿದನು. ಆಗಲಾತನು-'ಮಹಾಪ್ರಭೋ, ನಾನಿನ್ನೆಲ್ಲಿ ಸ್ಥಳ ತೋರಿಸಲಿ! ನನಗಿದ್ದ ಪ್ರದೇಶವೆಲ್ಲವೂ ನಿನ್ನ ಎರಡು ಅಡಿಗಳಿಗೇ ಸರಿಹೋದುವು. ಮಿಕ್ಕ ಇನ್ನೊಂದು ಅಡಿಯನ್ನು ನನ್ನೀ ಶಿರಸ್ಸಿನಮೇಲೆಯೇ ಇಟ್ಟು ಅಳೆದುಕೋ'' ಎಂದು ತಲೆಯನ್ನೊಡ್ಡಿದನು. ತಮ್ಮರಾಜನಿಗೊದಗಿದ್ದ ದುರ್ಗತಿಯನ್ನು ಕಂಡು, ದೈತ್ಯವೀರರು ಪ್ರತಿಭಟಿಸಲಿಕ್ಕಾಗಿ ಸನ್ನಾಹಗೊಳ್ಳುತ್ತಿರಲು, ಪ್ರಾಜ್ಞನಾದ ಬಲೀಂದ್ರನು-'ಎಲೈ ಇದು ನಮಗೆ ಜಯಕಾಲವಲ್ಲ, ಪ್ರತಿಭಟಿಸದೆ ಸುಮ್ಮನಿರಿ' ಎಂದು ತಡೆದನು. ಹೀಗೆ ವಿಷ್ಣುಮೂರ್ತಿಯು, ತನ್ನ ಮೂರನೆಯ ಪಾದವನ್ನು ಅವನ ತಲೆಯಮೇಲೆ ಇಟ್ಟು, ನಿಂತಿರುವ ವೇಳೆಯಲ್ಲಿ ಬಲಿಯ ತಾತನಾದ ಪ್ರಹ್ಲಾದನು ಬಂದು ಶ್ರೀಹರಿಯನ್ನು ಪರಿಪರಿಯಿಂದ ಸ್ತುತಿಸಿ, ಭಕ್ತನೂ ದೀನನೂ ಶರಣಾಗತನೂ ಆದ ಆತನನ್ನು ಕಾಪಾಡೆಂದು ಬೇಡಿದನು. ಬ್ರಹ್ಮದೇವನು-'ಪ್ರಭೋ ಬಲಿಯು, ನಿಶ್ಶಂಕೆಯಿಂದ, ಗುರುಶಾಪವನ್ನೂ ಲಕ್ಷ್ಯಮಾಡದೆ ಸರ್ವಸ್ವವನ್ನೂ ನಿನ್ನ ಪಾದಗಳಿಗೆ ವಹಿಸಿ

ಕೊಟ್ಟಿರುವಾಗ ಹೀಗೆ ದಂಡಿಸುವುದು ನ್ಯಾಯವೇ ? ದಯೆಯಿಂದ ನೋಡಿ, ಕಾಪಾಡು" ಎಂದು ಪ್ರಾರ್ಥಿಸಿದನು. ಆಗ ವಾಮನಮೂರ್ತಿಯು,—'ಬ್ರಹ್ಮದೇವನೇ ಕೇಳು. 'ಯಸ್ಯಾನುಗ್ರಹ ಮಿಚ್ಛಾಮಿ ತಸ್ಯವಿತ್ತಂ ಹರಾವ್ಯಹಂ' ಎಂಬುದು ನನ್ನ ಪ್ರತಿಜ್ಞೆಯು. ನಾನು ಯಾವನ ವಿಷಯದಲ್ಲಿ ಅನುಗ್ರಹ ಮಾಡಲಿಚ್ಛಿಸುವೆನೋ ಅವನ ಐಶ್ವರ್ಯವನ್ನುಮೊದಲು ಅಪಹರಿಸುವೆನು. ಏಕೆಂದರೆ ಹಣವಿದ್ದಷ್ಟೂ ಮನುಷ್ಯನಿಗೆ ಮದವು ಹೆಚ್ಚಿ ಅವನು ಕುರುಡನಾಗಿ ದಾರಿತಪ್ಪುವುದು ಹೆಚ್ಚು. ಆದುದರಿಂದ ಬಲಿಯ ವಿಷಯದಲ್ಲಿ ನಡೆಸಿದ ನನ್ನ ಈ ಚರ್ಯೆಯು ಅವನಿಗೆ ಅನುಗ್ರಹವಲ್ಲದೆ, ಶಿಕ್ಷೆಯಲ್ಲವೆಂದು ತಿಳಿಯಿರಿ' ಎಂದು ನುಡಿದು, ಬಲಿಯನ್ನು ಕುರಿತು-'ದಾನವೇಂದ್ರಾ, ನೀನು ನಿನ್ನ ಪರಿವಾರದೊಂದಿಗೆ ವಿಶೇಷ ಭೋಗಸಮೃದ್ಧಿಯುಳ್ಳ ಸುತಲ ಲೋಕಕ್ಕೆ ಪ್ರಯಾಣಮಾಡಿ, ಅಲ್ಲಿ ಆಧಿಪತ್ಯಮಾಡಿಕೊಂಡಿರು. ಮುಂದೆ ಸಾವರ್ಣಿ ಮನ್ವಂತರದಲ್ಲಿ ಇಂದ್ರಪದವಿಯನ್ನು ಹೊಂದುವಂತೆ ನಿನಗೆ ಅನುಗ್ರಹಿಸಿರುವೆನು. ಅಲ್ಲಿ ನನ್ನ ಸುದರ್ಶನ ಚಕ್ರವು ಸರ್ವದಾ ನಿನ್ನನ್ನು ಸಲಹುತ್ತಿರುವುದು. ಅಲ್ಲದೆ, ನಾನೂ ಸಹ ನಿನ್ನ ಅರಮನೆಯ ಬಾಗಿಲಲ್ಲೇ ಕಾವಲಾಗಿದ್ದು ಆಗಾಗ್ಗೆ ನಿನಗೆ ದರ್ಶನಕೊಡುತ್ತಿರುವೆನು'' ಎಂದು ನುಡಿದು ದೇವೇಂದ್ರನೊಡನೆ ವಿಮಾನವನ್ನೇರಿ ಸ್ವರ್ಗಲೋಕಕ್ಕೆ ಪ್ರಯಾಣಮಾಡಿದನು. ಇತ್ತ ಬಲಿಚಕ್ರೇಶ್ವರನು ತನ್ನ ಸಕಲ ಪರಿವಾರವನ್ನೂ ಕರೆದುಕೊಂಡು, ಭಕ್ತ ಶಿರೋಮಣಿ ಪ್ರಹ್ಲಾದನನ್ನು ಮುಂದುಮಾಡಿಕೊಂಡು ಆ ಮೊದಲೇ ವಿಶ್ವಕರ್ಮನಿಂದ ನಿರ್ಮಿತವಾಗಿದ್ದ, ಸಕಲವಸ್ತು ಸಮೃದ್ಧವಾದ ಸುತಲ ಲೋಕವನ್ನು ಹೊಕ್ಕು ಅಲ್ಲಿ ಸುಖವಾಗಿ ವಾಸಮಾಡಿಕೊಂಡಿದ್ದನು. ಮಾತ್ರವಲ್ಲ, ಬಲಿಯು ಪುರಾಣ ಪ್ರಸಿದ್ಧರಾದ ಏಳುಮಂದಿ ಚಿರಜೀವಿಗಳಲ್ಲಿ ಒಬ್ಬನಾದುದರಿಂದ ಇನ್ನೂ ಜೀವಂತನಾಗಿಯೇ ಅಲ್ಲಿದ್ದಾನೆಂದೂ, ಸಾಕ್ಷಾದ್ವಿಷ್ಣುಮೂರ್ತಿಯು, ಈಗಲೂ ಆತನ ಗೃಹದ್ವಾರದಲ್ಲಿ ದಂಡಧಾರಿಯಾಗಿ ಕಾವಲಿದ್ದಾನೆಂದೂ ಪುರಾಣಗಳು ಉದ್ಘೋಷಿಸುತ್ತಿವೆ.

ಯಾವ ಶ್ರೀ ಬಲಿಚಕ್ರವರ್ತಿಯು, ತಾನು ಕೊಡಲಿರುವ ದಾನದಿಂದ ತನ್ನ ಮಹತ್ಪದವಿಯೂ, ಅಗಣಿತ ಐಶ್ವರ್ಯವೂ ತಪ್ಪಿಹೋಗಿ, ಮಹತ್ಕಷ್ಟ

ವು ಪ್ರಾಪ್ತವಾಗುವುದೆಂದು ತಿಳಿದಿದ್ದರೂ, ತಾನು ಕೊಟ್ಟ ಮಾತಿಗೆ ಪ್ರತಿಯಾಗಿ ನಡೆಯಲಿಚ್ಛಿಸದೆ, ಸತ್ಯಸಂಧತೆಯಿಂದ ತ್ರಿಲೋಕಾಧಿಪತ್ಯವನ್ನೂ ಮಹದೈಶ್ವರ್ಯವನ್ನೂ ದಾನವಾಗಿ ಕೊಟ್ಟು, ತ್ಯಾಗಿ ಶಿರೋಮಣಿಯೆನ್ನಿಸಿದನೋ, ಆ ದಾರ್ಢ್ಯವೂ ಸತ್ಯವಾಕ್ತ್ವಪರತೆಯೂ ಆತನ ಈ ಸಚ್ಚರಿತ್ರೆಯನ್ನು ಪಠಿಸುವ ಸಕಲರಿಗೂ ಪ್ರಾಪ್ತವಾಗಿ, ಪ್ರತಿಯೊಬ್ಬರೂ ಯಥಾಶಕ್ತಿ ಆ ಧ್ಯೇಯ ಸಾಧನೆಯಲ್ಲಿ ನಡೆಯಲು ಪ್ರಯತ್ನಿಸುವಂತೆ ಪುಂಡರೀಕಾಕ್ಷನಾದ ಶ್ರೀ ವಿಷ್ಣುಮೂರ್ತಿಯು ಅನುಗ್ರಹಿಸಲಿ.

ತಥಾಸ್ತು.



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.—೧೯೩೦.— ೩೦೦೦, ಪ್ರತಿಗಳು.

—— ಶ್ರೀರಾಮಸಹಾಯಂ ——

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)



**ಮುನ್ನುಡಿ:—**

ಶ್ರೀರಾಮಮೂರ್ತಿಯನ್ನು ತಮ್ಮ ಇಷ್ಟದೈವವೆಂದು ನಂಬಿ,ನವವಿಧ ಭಕ್ತಿಭಾವಗಳಿಂದ ಸೇವಿಸಿ, ಇಹಲೋಕದಲ್ಲಿ ಅಕ್ಷಯಕೀರ್ತಿಯನ್ನೂ ಪರಲೋಕದಲ್ಲಿ ಶಾಶ್ವತ ಸದ್ಗತಿಯನ್ನೂ ಗಳಿಸಿಕೊಂಡ ನರಪುಂಗವರು ಅನೇಕರುಂಟು. ಅಂತಹ ಭಕ್ತಶಿರೋಮಣಿಗಳಲ್ಲಿ ನಮ್ಮ ಕಥಾನಾಯಕರೂ ಒಬ್ಬರು. 'ರಾಮದಾಸ' ಎಂಬ ನಾಮಧೇಯದಿಂದ ಲೋಕಪ್ರಸಿದ್ಧರಾದವರು ದಕ್ಷಿಣ ಭಾರತದಲ್ಲಿ ಇಬ್ಬರುಂಟು. ಅವರಲ್ಲೊಬ್ಬರಿಗೆ ಸಮರ್ಥ ರಾಮದಾಸರೆಂದು ಹೆಸರು. ಈ ಸಮರ್ಥರಾಮದಾಸರೇ ಛತ್ರಪತಿ ಶಿವಾಜಿ ಮಹಾರಾಜನ ಗುರುಗಳು. ಇವರು ೧೭ನೆಯ ಶತಮಾನದಲ್ಲಿ ಮಹಾರಾಷ್ಟ್ರಜನಾಂಗದಲ್ಲಿ ಧರ್ಮಜಾಗೃತಿಯನ್ನುಂಟುಮಾಡಿ, ಶಿವಾಜೀಮಹಾರಾಜನ ಮೂಲಕ ದುಷ್ಟನಿಗ್ರಹ, ಶಿಷ್ಟಪರಿಪಾಲನ ಸ್ವರಾಜ್ಯ ಸಂಸ್ಥಾಪನಾದಿ ಕಾರ್ಯಗಳನ್ನು ಮಾಡಿಸಿದರು. ಇನ್ನೊಬ್ಬ ರಾಮದಾಸರೆಂಬುವರೇ ನಮ್ಮ ಪ್ರಕೃತ ಕಥಾನಾಯಕರು. ಇವರ ಭದ್ರಾಚಲರಾಮದಾಸ್ ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ. ಇವರ ಪುಣ್ಯಚರಿತ್ರೆಯು ಆಂಧ್ರದೇಶದಲ್ಲಿ ಪ್ರತಿಮನೆಯಲ್ಲೂ ಕೀರ್ತಿಸಲ್ಪಡುತ್ತಿದೆ. ಇವರ ಪವಿತ್ರ ನಾಮವನ್ನು ತಿಳಿಯದಿದ್ದ ಆಂಧ್ರನಿಲ್ಲ.

ಸಮರ್ಥರಾಮದಾಸರ ಕಾರ್ಯ ಕಲಾಪಗಳಿಗೂ, ಈ ಭದ್ರಾಚಲ ರಾಮದಾಸರ ಕಾರ್ಯಗಳಿಗೂ ವಿಶೇಷ ವ್ಯತ್ಯಾಸವುಂಟು. ಸಮರ್ಥರಾಮದಾಸರ ಕಾರ್ಯಕ್ಷೇತ್ರವು ಆದ್ಯಂತ ಮಹಾರಾಷ್ಟ್ರದೇಶ. ಹಿಂದೂಧರ್ಮವನ್ನು ಕಬಳಿಸಿ ನಿರ್ನಾಮಗೊಳಿಸಲು ಮುಂದುವರಿಯುತ್ತಿದ್ದ ಮಹಮ್ಮದೀಯ ರಾಜರ ಪ್ರಾಬಲ್ಯವನ್ನು ತಗ್ಗಿಸಿ, ಸನಾತನಾರ್ಯ ಧರ್ಮದ ಅಮೌಲ್ಯ

ಧ್ಯೇಯಗಳನ್ನು ಜನಾಂಗದ ದೃಷ್ಟಿಪಥಕ್ಕೆ ತಂದು, ಮಹಾಕರ್ತೃತ್ವಶಾಲಿಯಾದ ಶಿವಾಜಿ ಮಹಾರಾಜನ ಮೂಲಕ ಒಂದು ಸ್ವತಂತ್ರ ಸಾಮ್ರಾಜ್ಯವನ್ನೇ ಸ್ಥಾಪಿಸಿದ ಮಹಾಮಹಿಮರು ಸಮರ್ಥರಾಮದಾಸರು. ಆದರೆ ನಮ್ಮ ಕಥಾನಾಯಕರ ಕಾರ್ಯಕ್ಷೇತ್ರವು ಆಂಧ್ರದೇಶಕ್ಕೆ ಸೇರಿದ ಭದ್ರಾಚಲವೆಂಬ ಒಂದು ಗ್ರಾಮವು ಮಾತ್ರ. ಹದಿನೇಳನೆಯ ಶತಮಾನದಲ್ಲಿ ಗೋಲ್ಕೊಂಡ ರಾಜ್ಯಕ್ಕೆ ಸೇರಿದ್ದ ಈ ಗ್ರಾಮದ (ಇದೇ ಹೆಸರಿನ ತಾಲ್ಲೂಕಿನ) ಅಧಿಕಾರ (ತಹಸೀಲ್‌ದಾರ) ವನ್ನು ಪಡೆದು, ಬಹು ಕ್ಷೀಣದೆಸೆಯಲ್ಲಿದ್ದ ಈ ಭದ್ರಾಚಲದ ಶ್ರೀ ರಾಮದೇವಾಲಯವನ್ನು ಗೋಪುರ ಪ್ರಕಾರ ಕಟಾಕಾದಿಗಳಿಂದ ಬಹುಮಟ್ಟಿಗೆ ಊರ್ಜಿತಗೊಳಿಸಿ, ತರುವಾಯ ತಮ್ಮ ಸರ್ವಸ್ವವನ್ನೂ ಶ್ರೀರಾಮಸ್ವಾಮಿಯ ಚರಣಾರವಿಂದಗಳಿಗೇ ಸಮರ್ಪಿಸಿ ಭಕ್ತಕೋಟಿಯಲ್ಲಿ ಧನ್ಯತಮರೆಂದು ಪ್ರಖ್ಯಾತರಾದವರು ನಮ್ಮ ಭದ್ರಾಚಲ ರಾಮದಾಸರು. ಶ್ರೀರಾಮದೇವಾಲಯದ ಗೋಪುರ ಪ್ರಾಕಾರಾದಿಗಳ ನಿರ್ಮಾಣಕ್ಕಾಗಿ ರಾಮದಾಸರು ತಮ್ಮ ಸ್ವಾಧೀನದಲ್ಲಿದ್ದ ಭದ್ರಾಚಲ ತಹಸೀಲಿನ ರಾಜಕೀಯ ದ್ರವ್ಯವನ್ನು ಉಪಯೋಗಪಡಿಸಿ, ಬಹು ಸಂಖ್ಯೆಯ ಬ್ರಾಹ್ಮಣ ಸಂತರ್ಪಣೆಗಳನ್ನೂ, ಹಲವು ಬಗೆಯ ದೇವತಾ ಮಹೋತ್ಸವವಗಳನ್ನೂ ಜರುಗಿಸಿದರೆಂದೂ, ಆಗ ಗೋಲ್ಕೊಂಡ ರಾಜ್ಯಕ್ಕೆ ನವಾಬನಾಗಿದ್ದ ಅಬೂಹಸನ್ ಕುತುಬ್ ಷಾಹಿ ಎಂಬ ಮಹಮ್ಮದೀಯ ಪ್ರಭುವು ಈ ರಾಮದಾಸರನ್ನು ಹಿಡಿತರಿಸಿ, ಹನ್ನೆರಡು ವರ್ಷಕಾಲ ಬಂಧನದಲ್ಲಿ ಇರಿಸಿದ್ದನೆಂದೂ ಇವರ ಈ ಕಥೆಯಿಂದ ವ್ಯಕ್ತಪಡುತ್ತದೆ. ಕೊನೆಗೆ ಭಕ್ತ ಪರಾಧೀನನೂ ಕರುಣಾಕರನೂ ಆದ ಶ್ರೀರಾಮಚಂದ್ರನು ತನ್ನ ತಮ್ಮನಾದ ಲಕ್ಷ್ಮಣಸ್ವಾಮಿಯೊಂದಿಗೆ ಸೇವಕರ ರೂಪದಿಂದ ತಾನೀಷಾ ಸುಲ್ತಾನನಿಗೆ ಪ್ರತ್ಯಕ್ಷನಾಗಿ, ರಾಮದಾಸರಿಂದ ಆತನಿಗೆ ಸಲ್ಲಬೇಕಾಗಿದ್ದ ದ್ರವ್ಯವನ್ನು ತಲ್ಪಿಸಿ ಬಂಧದಲ್ಲಿದ್ದ ರಾಮದಾಸರನ್ನು ಬಿಡುಗಡೆ ಮಾಡಿಸುವನು. ಸಂತೃಪ್ತನಾದ ತಾನೀಷಾನಿಂದ ರಾಮದಾಸರು ಪುನಃ ಭದ್ರಾಚಲ ತಹಸೀಲಿನ ಸರ್ವಾಧಿಕಾರವನ್ನೂ ಪಡೆದು ತಮ್ಮ ಮರಣಾವಧಿ ಆ ಸ್ಥಳದಲ್ಲೇ ವಾಸಿಸಿ ವಿಶೇಷ ದೇವತಾ ಕೈಂಕರ್ಯಗಳನ್ನು ನಡೆಯಿಸಿ ಸದ್ಗತಿಯನ್ನು ಪಡೆದರು.

ಈ ಸತ್ಕಥೆಯನ್ನು ಆಂಧ್ರದೇಶದಲ್ಲಿ ಹರಿಕಥಾರೂಪವಾಗಿಯೂ, ನಾಟಕಾದಿಗಳ ರೂಪವಾಗಿಯೂ ಪ್ರದರ್ಶಿಸುವ ವಾಡಿಕೆಯುಂಟು. ಈ

ಭಕ್ತೋತ್ತಮನ ಚರಿತ್ರೆಯನ್ನು ಸಿಂಗರಿದಾಸನೆಂಬ ಆಂಧ್ರ ಕವಿಪುಂಗವನು ಹರಿಕಥಾ ಸಂಪ್ರದಾಯವನ್ನನುಸರಿಸಿ, ಶ್ರೀರಾಮಭಕ್ತಿ ಸುಧಾರಸವು ಪ್ರವಾಹವಾಗಿ ಹರಿಯುವಂತೆ ಮನೋಹರ ಕವಿತಾ ಪ್ರೌಢಿಮೆಯಿಂದ ರಚಿಸಿದ್ದಾನೆ. ಪ್ರಕೃತ ಕಥಾನುವಾದವು ಆ ಗ್ರಂಥರತ್ನವನ್ನು ಅವಲಂಬಿಸಿ ಬರೆದುದಾಗಿದೆ. ಗ್ರಂಥಮಾಲಾಭಿಮಾನಿಗಳಾದ ಕರ್ಣಾಟಕ ಮಹಾಜನರು, ಸ್ವಾಭಾವಿಕ ಪ್ರೇಮದಿಂದ, ಈ ಭಕ್ತ ಶಿರೋಮಣಿಯ ಜೀವಿತವನ್ನೂ ಸ್ವೀಕರಿಸಿ, ನಮ್ಮ ಭಾಷಾಸೇವಾ ಉದ್ಯಮವನ್ನು ಪ್ರೋತ್ಸಾಹಿಸಬೇಕಾಗಿ ಕೋರುತ್ತೇವೆ.

ಬೆಂಗಳೂರು ನಗರ,
ತಾ|| ೧೪-೭-೧೯೩೦.

ಇತಿ ಸುಜನ ವಿಧೇಯ,
**ಯಂ. ರಾಮರಾವ್.**



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.—೧೯೩೦—೩೦೦೦ ಪ್ರತಿಗಳು.

## ॥ ಈ ಜಗಮಂತಾರಾಮಮಯಂ ॥

ರಾಗಮು ವರಾಳಿ ಆದಿತಾಳಮು.

ಅಂತಾ ರಾಮಮಯಂ ಬೀ ಜಗ
ಮಂತಾ ರಾಮಮಯಂ. ಪ.

ಅಂತರಂಗಮುನ-ಆತ್ಮಾರಾಮುಡ
ನಂತರೂಪಮುಲ-ವಿಂತಲು ಸಲುಪಗ ಅ.

ಸೋಮಸೂರ್ಯುಲುನು-ಸುರಲು ತಾರಲುನು
ಆ ಮಹಾಂಬುಧುಲು-ನವನೀಜಂಬುಲು ೧

ಅಂಡಾಂಡಂಬುಲು-ಪಿಂಡಾಂಡಂಬುಲು
ಬ್ರಹ್ಮಾಂಡಂಬುಲು-ಬ್ರಹ್ಮಲು ಮೊದಲುಗ ೨.

ನದುಲು ವನಂಬುಲು-ನಾನಾಮೃಗಮುಲು
ವಿದಿತಕರ್ಮಮುಲು-ವೇದಶಾಸ್ತ್ರಮುಲು ೩.

ಅಷ್ಟದಿಕ್ಕುಲುನು-ನಾದಿ ಶೇಷುಡುನು
ಅಷ್ಟವಸುವುಲುನು-ನರಿಷಡ್ವರ್ಗಮು ೪.

ಧೀರುಡು ಭದ್ರಾ-ಚಲರಾಮದಾಸುನಿ
ಕೋರಿಕಲೊಸಗೆಡಿ-ತಾರಕನಾಮಮು ೫.



++ಶ್ರೀರಾಮಸಹಾಯಂ++

## ಶ್ರೀ ರಾ ಮ ಭ ಕ್ತಾ ಗ್ರ ಣಿ

# ಭದ್ರಾಚಲ ರಾಮದಾಸರು



### ಅಧ್ಯಾಯ ೧ "ಭದ್ರಾದ್ರಿ"

ಭಕ್ತ ಭಾಗವತರ ತೌರುಮನೆಯೆನ್ನಿಸಿಕೊಂಡ ನಮ್ಮ ಮಾತೃಭೂಮಿ ಈ ಭಾರತದೇಶದಲ್ಲಿ, ಶ್ರೀರಾಮಭಕ್ತಿ ಸಾಮ್ರಾಜ್ಯವನ್ನು ಗಳಿಸಿ, ತನ್ಮೂಲಕ ತಾವು ಶಾಶ್ವತಸದ್ಗತಿಯನ್ನು ಗಳಿಸಿಕೊಂಡುದು ಮಾತ್ರವಲ್ಲ- ಜಗತ್ತನ್ನೇ ಉದ್ಧರಿಸಿದ ಧನ್ಯಾತ್ಮರಿಗೆ, ಎಂದೂ ಕೊರತೆ ಬಿದ್ದಿಲ್ಲ. 'ಇದು ಕಲಿಯುಗ, ಧರ್ಮನಷ್ಟವಾಗಿದೆ. ಧರ್ಮಾತ್ಮರೂ, ಭಕ್ತಶಿರೋಮಣಿಗಳೂ ಈಗ ಭೂಮಿಯಲ್ಲಿ ಅವತರಿಸುವುದಿಲ್ಲ' ಎಂದು ಕೆಲವರು ಹೇಳುವುದುಂಟಲ್ಲವೆ! ಅದೂ ಒಂದು ದೃಷ್ಟಿ! ಆದರೆ ವಾಸ್ತವವಾಗಿ ನೋಡುವುದಾದರೆ, ಧರ್ಮನಷ್ಟವಾಗಿ, ಲೋಕವು ತಳಮಳಿಸುತ್ತಿರುವ ಈ ಕಾಲವೇ ಧರ್ಮಾತ್ಮರ, ಭಕ್ತೋತ್ತಮರ, ತ್ಯಾಗಶೀಲರ ಉದಯಕ್ಕೆ ಯೋಗ್ಯಕಾಲವೆನ್ನಬಹುದು. ಗಾಢಾಂಧಕಾರದಿಂದ ಕಣ್ಣು ಕಾಣದಂತಿರುವ ರಾತ್ರಿಕಾಲದಲ್ಲಲ್ಲವೆ, ದೀಪದ ಆವಶ್ಯಕತೆಯು ವಿಶೇಷವಾಗಿರುವುದು? ಹಾಗೆಯೇ ಲೋಕವು ವಿಶೇಷ ಪಾಪದುಃಖ ಸಂಕಟಗಳಿಂದ ತುಂಬಿ ಇಹಜೀವನವು ನರಕವಾಸಕ್ಕಿಂತಲೂ ದುಸ್ತರವೆನ್ನಿಸಿರುವಂತಹ ಈ ದುಷ್ಕಾಲದಲ್ಲಿಯೇ, ಜಗದುದ್ಧಾರಕ್ಕಾಗಿ ಭಗವದಾಜ್ಞೆಯಿಂದಲೋ ಎಂಬಂತೆ ಭಕ್ತಶ್ರೇಷ್ಠರೂ, ನೀತಿಕೋವಿದರೂ, ತತ್ವವೇತ್ತರೂ, ದಾನಶೂರರೂ, ಅದ್ವಿತೀಯ ಪರಾಕ್ರಮ

ಶಾಲಿಗಳೂ, ಧರ್ಮವೀರರೂ, ರಾಜಕಾರಣ ಪಟುಗಳೂ, ಸತ್ಯಸಂಧರೂ, ಪರೋಪಕಾರ ಧುರೀಣರೂ ಈ ಲೋಕದಲ್ಲಿ ಜನ್ಮವೆತ್ತಿ ಕಲುಷಿತವಾಗಿದ್ದ ವಾತಾವರಣವನ್ನು ತಮ್ಮ ಪವಿತ್ರ ಜೀವಿತದಿಂದ ಶುದ್ಧಿಗೊಳಿಸಿ, ಜಗತ್ತಿಗೇ ಉದಾಹರಣ ಸ್ವರೂಪರಾಗಿ, ಚರಿತ್ರಾಕಾಶದಲ್ಲಿ ನಕ್ಷತ್ರಗಳಂತೆ ದೇದೀಪ್ಯಮಾನರಾಗಿ ಯಶಃಕಾಯದಿಂದಲೇ ಜೀವಿಸುವರು. ಇಂತಹ ಮಹನೀಯರಿಗೆ ಕಾಲಕಾಲಕ್ಕೆ ಜನ್ಮವಿತ್ತು, ಜಗತ್ತಿಗೆ ಒದಗಿಸುತ್ತ ಬಂದುದರಿಂದಲೇ ಈ ಪವಿತ್ರ ಭಾರತ ಭೂಮಿಯು 'ತತ್ವವಿದರ ತೌರುಮನೆ' ಎಂಬ ಸಾರ್ಥಕನಾಮದಿಂದ ಶೋಭಿಸುತ್ತಿರುವುದು.

ತತ್ವಶಾಸ್ತ್ರವು ಕೇವಲ ಪರೋಪದೇಶಕ್ಕಾಗಿ ಮಾತ್ರ ರಚಿತವಾದುದಲ್ಲ. ನಮ್ಮ ದೇಶದಲ್ಲಿ ಅಣುರೇಣು ತೃಣಕಾಷ್ಠಗಳಲ್ಲೂ, ಶಿಲೆವೃಕ್ಷಾದಿಗಳಲ್ಲೂ ಭಗವತ್ಸಾನ್ನಿಧ್ಯವುಂಟೆಂಬ ನಂಬಿಕೆಯುಂಟು. ಈ ದೇಶದ ಯಾವುದೊಂದು ನದಿಯೂ, 'ವಿಷ್ಣುಪಾದೋದ್ಭವೆಯಾದ ಗಂಗೆಯಂತೆ ಪರಿಶುದ್ಧವಾದುದು; ತನ್ನಲ್ಲಿ ಸ್ನಾನಮಾಡಿದವರ ಅಂತರ್ಬಾಹ್ಯ ಪಾಪಗಳನ್ನು ನಿರ್ಮೂಲಗೊಳಿಸಿ ಸದ್ಗತಿಯನ್ನು ದೊರಕಿಸತಕ್ಕುದು' ಎಂಬ ಭಾವನೆಯೇ ನಮ್ಮಲ್ಲಿ ರೂಢಮೂಲವಾಗಿದೆಯಲ್ಲದೆ,-'ಈನದಿಯಿಂದ ಎಷ್ಟು ಮಾತ್ರ ನೀರು ವ್ಯವಸಾಯಕ್ಕೆ ಒದಗಬಹುದು ; ವ್ಯಾಪಾರಕ್ಕೆ ಈ ನದಿಯನ್ನು ಹೇಗೆ ಉಪಯೋಗಿಸಿಕೊಳ್ಳಬಹುದು; ಮತ್ತಾವ ಯಂತ್ರಾದಿ ಕಾರ್ಯಾನೆಗಳಿಗೆ ಈ ನದಿಯು ಉಪಯೋಗವಾಗುವುದು' ಎಂಬೀ ಮುಂತಾದ ಭಾವನೆಗಳು ನಮ್ಮಲ್ಲಿ ಉಂಟಾದುದೇ ಇಲ್ಲ. ಯಾವುದೊಂದು ಗಿರಿಶಿಖರವೂ, ಒಂದಾನೊಂದು ದೇವತಾ ಸಾನ್ನಿಧ್ಯದಿಂದ ಪವಿತ್ರವೆನ್ನಿಸಿದುದೇ ! ದೇಶದ ಸಕಲ ಭಾಗಗಳಿಂದಲೂ ಶ್ರದ್ಧಾಸಂಪನ್ನರಾದ ಯಾತ್ರಿಕರು ಸಹಸ್ರ, ಸಹಸ್ರ ಸಂಖ್ಯೆಯಿಂದ ಆ ಗಿರಿಶಿಖರದ ದೇವತಾಸಾನ್ನಿಧ್ಯಕ್ಕೆ ಬಂದು ತಮ್ಮ ಕಷ್ಟಾರ್ಜಿತವಾದ ದ್ರವ್ಯವನ್ನು ಲೋಭವಿಲ್ಲದೆ ದೇವತಾ ಸೇವೆಗೆಂದು ಖರ್ಚುಮಾಡಿ,ಧನ್ಯತೆಯನ್ನು ಹೊಂದಿ, ಹಿಂದಿರುಗುವಂತಹ ಮನೋಭಾವವು ನಮ್ಮಲ್ಲಿ ನೆಲೆಸಿದ್ದಿತಲ್ಲದೆ,-'ಈ ಗುಡ್ಡದಿಂದ ಎಷ್ಟು 'ಟನ್' ಕಲ್ಲು ದೊರೆತೀತು ? ಇದರ ಗರ್ಭದಲ್ಲಿ ಎಂತೆಂತಹ ಲೋಹಗಳು ದೊರೆತಾವು' ? ಎಂಬೀ ಮುಂತಾದ ಭಾವನೆಗಳೇ ಎಂದಿಗೂ ನಮ್ಮಲ್ಲಿ ಬಂದುದಿಲ್ಲ. ಪ್ರತಿ

ಯೊಂದು ವಸ್ತುವನ್ನೂ ದೇವತಾ ಭಾವನೆಯಿಂದ ಕಂಡು, ಅದರಲ್ಲಿ ಭಗವತ್ಸಾನ್ನಿಧ್ಯ ದೃಷ್ಟಿಯಿಂದ ಪೂಜ್ಯ ಬುದ್ಧಿಯನ್ನಿಟ್ಟು ಆರಾಧಿಸುವುದು ಭಾರತ ದೇಶಸ್ವಭಾವ! ಅದೇ ವಸ್ತುವಿನಲ್ಲೇ ವ್ಯಾಪಾರ ಭಾವವನ್ನಿಟ್ಟು, ಪ್ರತಿಯೊಂದು ವಸ್ತುವನ್ನೂ ಕಾಮುಕೀಸಗಳ ಬೆಳೆಗೆ ಒಳಪಡಿಸಿ ಭ್ರಷ್ಟಗೊಳಿಸದುದು ಪಾಶ್ಚಾತ್ಯನಾಗರಿಕತೆಯ ದುಷ್ಟಸ್ವಭಾವ! ಪಶುಪ್ರಾಣಿಯಾದ ಗೋವನ್ನೂ 'ಗೋಮಾತೆ' ಎಂಬ ಪೂಜ್ಯಭಾವದಿಂದ ಕಂಡು ಗೌರವಿಸಿ ಪೂಜಿಸಬೇಕೆಂಬುವ ಭಾರತದೇಶದ ಚಿತ್ತವೃತ್ತಿಯೆಲ್ಲಿ? ಅದೇ ಗೋವಿನ ದೇಹದಲ್ಲಿ ಎಷ್ಟು ಪೌಂಡು ಮಾಂಸ, ಎಷ್ಟು ಚದರ ಗಜಗಳ ಚರ್ಮ, ಎಷ್ಟು ತೂಕದ ಎಲುಬುಗಳು ದೊರೆತಾವೆಂದು ಲೆಕ್ಕಮಾಡಿ, ಆ ನಮ್ಮ ಪವಿತ್ರಮೂರ್ತಿ ಗೋವನ್ನು ವಧಿಸಿ ಭಕ್ಷಿಸುತ್ತಿರುವ ಪಾಶ್ಚಾತ್ಯ ಚಿತ್ತವೃತ್ತಿಯೆಲ್ಲಿ?

ಹೀಗೆಯೇ, ಪ್ರಿಯವಾಚಕ ಮಹಾಶಯರೇ, ಒಂದಲ್ಲ ಎರಡಲ್ಲ ನೂರಾರು, ಸಹಸ್ರಾರು ಸಂಗತಿಗಳನ್ನು ಉದಹರಿಸಬಹುದು. ಪ್ರತಿಯೊಂದರಲ್ಲೂ ಪವಿತ್ರಭಾವನೆಯನ್ನಿಟ್ಟು ಶ್ರದ್ಧಾಭಕ್ತಿಗಳಿಂದ, ಪೂಜಿಸಿ ಅದನ್ನು ರಕ್ಷಿಸುವುದು ನಮ್ಮಲ್ಲಿಯ ಭಾವನೆ. ಅದನ್ನು ವ್ಯಾಪಾರ ದೃಷ್ಟಿಯಿಂದ ನೋಡಿ, ಛೇದಿಸಿ ಭಕ್ಷಿಸುವುದು ಪಾಶ್ಚಾತ್ಯ ಭಾವನೆ! 'ಪ್ರತಿಯೊಂದು ವಸ್ತುವೂ ಲೌಕಿಕವಾಗಿ ಹೇಗೆ ಉಪಯೋಗವಾಗುವುದೆಂಬ ವಿಚಾರವೇ ಇಲ್ಲದಿರುವ, ಈ ಜಡಸ್ವಭಾವದಿಂದಲೇ ನೀವು ಇಂದು ಭಿಕ್ಷಾಪಾತ್ರೆಯನ್ನು ಕೈಯಲ್ಲಿ ಹಿಡಿದು, ಜಗತ್ತಿನೆದುರಿಗೆಹಲ್ಲಿರಿದು ನಿಂತಿರುವುದು!' ಎಂದು ಹಳಿಯುವವರೂ ಹಂಗಿಸುವವರೂ ಉಂಟು. ಬಾಧಕವಿಲ್ಲ. ಅದರಿಂದ ಕುಂದೇನು? ಬಾಲ್ಯದಿಂದ ಹಾಲಿತ್ತು ಪೋಷಿಸಿದ ಪರಮೋಪಕಾರಿಯೂ ಮಾತೃಸದೃಶವೂ ಆದ ಗೋವು ಮುದಿಯಾಯಿತೆಂದು, ಅದರ ನೂರು ಪೌಂಡು ಮಾಂಸ, ನಾಲ್ಕಾರು-ಗಜ ಚರ್ಮಗಳಿಗಾಗಿ ಅದನ್ನು ಮಾರಬಹುದೆಂದಮೇಲೆ, ವೃದ್ಧರಾದ ತಾಯಿತಂದೆಗಳನ್ನೂ ಚರ್ಮ ಎಲುಬುಗಳಿಗಾಗಿ ಮಾರಬಾರದೇಕೆ? ಲಾಭವೆಂದಮೇಲೆ ಪ್ರತಿಯೊಂದು ವಸ್ತುವಿನಿಂದ ದೊರೆವುದೂ ಲಾಭವೇ ಅಲ್ಲವೆ? ಈ ದುಷ್ಟಭಾವನೆಯಿಂದ ಕ್ರಮೇಣ ಬುದ್ಧಿಗೆಟ್ಟು, ಮನುಷ್ಯನು ಅನಂತ ಪಾಪಗಳನ್ನು ಮಾಡಲು ಹಿಂದೆ ಮುಂದೆ ನೋಡದೆ, ಭೂಮಿಯನ್ನು ನರಕವನ್ನಾಗಿ ಮಾರ್ಪಡಿಸುವನು. ಈ ಬಗೆಯಿಂದ ದೊರೆತ

ದ್ರವ್ಯವು ಮೇಲೆಮೇಲೆ ಧನದಾಹವನ್ನು ಹೆಚ್ಚಿಸಿ ಅಧಿಕಾಧಿಕ ಪಾಪ ಕಾರ್ಯ ಗಳಿಗೆ ಪ್ರೇರಣೆಯನ್ನುಂಟು ಮಾಡುವುದಲ್ಲದೆ, ತೃಪ್ತಿಶಾಂತತೆಗಳನ್ನು ಉಂಟುಮಾಡದು. ಈ ಲೋಭವು ಹೆಚ್ಚಿದಷ್ಟೂ, ಮಾನವನು ತನ್ನ ಸ್ಥಾನ ವನ್ನೇ ಕಳೆದುಕೊಂಡು ದಾನವನಾಗುತ್ತ ಸಾಗುವನು. ಪ್ರಪಂಚದಲ್ಲಿ ಜನ್ಮವೆತ್ತಿದ ಮಾನವನು ತನ್ನ ಲೌಕಿಕ ರೀತಿನೀತಿಗಳ ಅನುಸರಣೆಯಿಂದ ಕ್ರಮಶಃ ದೇವತೆಯುಂತಾಗಬೇಕೆಂಬುದು ಭಾರತದೇಶದ ಧ್ಯೇಯವು! ಅವನೇ ಪ್ರತಿವಸ್ತುವನ್ನೂ ವ್ಯಾಪಾರ ದೃಷ್ಟಿಯಿಂದ ನೋಡಿ, ಲೋಭಮೋಹ ಬದ್ಧ ನಾಗಿ, ಕ್ರಮೇಣ ದಾನವ ಸ್ವಭಾವವನ್ನು ಹೊಂದುವಂತೆ ಮಾಡತಕ್ಕದು ಪಾಶ್ಚಾತ್ಯ ನಾಗರಿಕತೆಯ ಧ್ಯೇಯ !

ಆದರೆ, ಇಲ್ಲೊಂದು ಪ್ರಶ್ನೆ ಹುಟ್ಟುವುದು. 'ಹೀಗೆ ಪ್ರತಿಯೊಂದು ವಸ್ತುವನ್ನೂ ದೇವತಾ ಭಾವದಿಂದಲೇ ನೋಡಿ, ಪೂಜಿಸುತ್ತಾ ಕುಳಿತರೆ ಉದರಂಭರಣ ಕಾರ್ಯವು ಸಾಗಬೇಡವೇ ? ಲೌಕಿಕವಾಗಿ ಪ್ರಪಂಚದ ಇತ ರ ಭಾಗಗಳವರೊಂದಿಗೆ ನಾವೂ ಪ್ರಗತಿ ಮಾರ್ಗದಲ್ಲಿ ನಡೆಯಬೇಡವೆ?' ಎಂಬ ಹಲವು ಪ್ರಶ್ನೆಗಳನ್ನು ಪ್ರೌಢರು ಕೇಳುವರು. ಆದರೆ ಅವರು ಒಂದು ವಿಷಯವನ್ನು ಮಾತ್ರ ಗಮನಿಸಬೇಕೆಂದು ಕೋರುವೆವು. ರೈತನು ಭೂಮಿಯನ್ನು ಉತ್ತು ನೀರುಕಟ್ಟಿ ಬಿತ್ತಿ, ಗೊಬ್ಬರಗೋಡುಗಳನ್ನು ಹೊ ಡೆದು ಕಾವಲಿದ್ದು ಹಲವು ಕಷ್ಟತಾಪತ್ರಯಗಳನ್ನು ಅನುಭವಿಸುವುದು ಏನು ಹುಲ್ಲಿಗಾಗಿಯೋ, ಹೊಟ್ಟಿಗಾಗಿಯೋ ಅಥವ ಧಾನ್ಯಕ್ಕಾಗಿಯೋ ? ಧಾನ್ಯ ಕ್ಕಾಗಿ ಮಾಡುವ ವ್ಯವಸಾಯದಿಂದ ಹುಲ್ಲೂ ಹೊಟ್ಟುಗಳೂ ಹೇಗೆ ದೊರೆ ವುವೋ, ಹಾಗೆಯೇ ಆಯಾ ವಸ್ತುಗಳಿಂದ ಸ್ವಾಭಾವಿಕವಾಗಿ ದೊರೆವ ಪ್ರಯೋಜನಗಳೆಲ್ಲವೂ ದೊರತೇ ದೊರೆಯುವುವು. ದೇವತಾ ಭಾವನೆ ಯಿಂದ ಪಶುವನ್ನು ಪೋಷಿಸಿ, ಅದರ ಹಾಲನ್ನು ಪಡೆದು, ಸಾಲಗ್ರಾಮಕ್ಕೆ ಕ್ಷೀರಾಭಿಷೇಕಮಾಡಿ ನಿವೇದಿಸಿ ತರುವಾಯ ತನಗಾಗಿ ಉಪಯೋಗಿಸಿ ಕೊ ಳ್ಳುವವನೂ, ಹಾಲು ಮೊಸರು ಬೆಣ್ಣೆ ತುಪ್ಪಗಳನ್ನು ಪಡೆಯುವನು. ಕೇವ ಲ ವ್ಯಾಪಾರ ಭಾವನೆಯಿಂದ, ಕೆಚ್ಚಲಿಂದ ರಕ್ತವು ತೊಟ್ಟಿಕ್ಕುವವರೆಗೂ ಹಾಲ್ಕರೆಯುವವನಿಗೂ ಮೇಲೆ ಹೇಳಿದ ಎಲ್ಲವೂ ದೊರೆವುವು. ಲಾಭವೇನೋ ಇಬ್ಬರಿಗೂ ಒಂದೇ! ಆದರೆ ಕೃತಿಯಿಂದ ನೊದಲನೆಯವನು ಮಾನವ ಸ್ಥಿತಿ

ಯಿಂದ ಉತ್ತಮಗೊಳ್ಳುತ್ತ ದೇವತೆಯಾಗುತ್ತಾಸಾಗುವನು. ಎರಡನೆಯವನು ಮಾನವಸ್ಥಿತಿಯಿಂದ ದಾನವನಾಗುತ್ತಾಸಾಗುವನು. ಒಂದೇ ವಸ್ತುವಿನಿಂದಲೇ ಮೊದಲನೆಯವನು ಪುಣ್ಯಸಾಧನವಮಾಡಿಕೊಳ್ಳುವನು. ಅದೇ ವಸ್ತುವಿನಿಂದಲೇ ಮತ್ತೊಬ್ಬನು ಅಗಾಧ ಪಾಪಸಾಧನೆ ಮಾಡಿಕೊಳ್ಳುವನು. ಹೀಗೆಯೇ ಯಾವ ದ್ರವ್ಯವನ್ನು ಸ್ವಸುಖಸಾಧನೆ, ಸ್ವದೇಹ ಪೋಷಣೆಗಳಿಗಾಗಿ ಉಪಯೋಗಿಸಿ, ಸುಲ್ತಾನನು ಖರ್ಚುಮಾಡಿ ವ್ಯರ್ಥಗೊಳಿಸ ಬಹುದಾಗಿದ್ದಿತೋ ಅದೇ ದ್ರವ್ಯವನ್ನೇ, ನಮ್ಮ ಕಥಾನಾಯಕರು ಭಗವತ್ಸೇವೆಗಾಗಿ ನಿಶ್ಶಂಕೆಯಿಂದ ಉಪಯೋಗಿಸಿ ಶಾಶ್ವತ ಕೀರ್ತಿಯನ್ನೂ ಸದ್ಗತಿಯನ್ನೂ ಸಂಪಾದಿಸಿಕೊಂಡರು. ಈ ಸಂದರ್ಭದಲ್ಲಿ ತನ್ನದಲ್ಲದ ದ್ರವ್ಯವನ್ನು ಸ್ವತಂತ್ರಿಸಿ ಖರ್ಚುಮಾಡಿ, ಧರ್ಮಕಾರ್ಯ ಮಾಡಿದೆನೆನ್ನಬಹುದೆ? ಎಂಬ ಮುಂತಾದ ಪ್ರಶ್ನೆಗಳೂ ಉಂಟಾಗದಿರವು! ಅವುಗಳನ್ನು ಕಥಾಸಂಧರ್ಭದಲ್ಲಿ ವಿವೇಚಿಸಲಾಗುವುದು. ಪಾಠಕಮಹಾಶಯರು ಮುಂದರಿಸಬೇಕು.

ನಮ್ಮ ಕಥಾನಾಯಕರ ನಿಸ್ವಾರ್ಥ ಪರಿಶ್ರಮದಿಂದ ಲೋಕಪ್ರಸಿದ್ಧಿಯನ್ನು ಪಡೆದ ಭದ್ರಾಚಲ ಕ್ಷೇತ್ರದ ವಿಷಯವಾಗಿ ಭವಿಷ್ಯೋತ್ತರ ಪುರಾಣದಲ್ಲಿ ಒಂದು ಚಿಕ್ಕ ಕಥೆಯುಂಟು. ದಶರಥಪುತ್ರನಾದ ಶ್ರೀರಾಮಚಂದ್ರನು ಸೀತಾಲಕ್ಷ್ಮಣ ಸಮೇತನಾಗಿ ಅರಣ್ಯವಾಸಮಾಡುತ್ತಿದ್ದ ಕಾಲದಲ್ಲಿ, ಒಂದುದಿನ ಮಾರ್ಗಾಯಾಸದಿಂದ ಕಾಡಿನಲ್ಲಿ ಶುಭ್ರನಾಗಿಯೂ ವಿಶಾಲವಾಗಿಯೂ ಇದ್ದ ಒಂದು ಬಂಡೆಯಮೇಲೆ ಕುಳಿತು ವಿಶ್ರಾಂತಿಗೊಂಡು ಸಂತುಷ್ಟನಾದನಂತೆ! ಹಾಗೆ ಸಂತುಷ್ಟಾಂತರಂಗನಾದ ಶ್ರೀರಾಮನು ತಾವು ಕುಳಿತಿದ್ದ ಆ ಶಿಲೆಯ ರಾಮಣೀಯತೆಗಾಗಿ ಪರಮ ಸುಪ್ರೀತನಾಗಿ ಅದನ್ನುದ್ದೇಶಿಸಿ- 'ಎಲೈ ನೀನು ನನಗೆ ಈ ದಿನ ಕುಳ್ಳಿರಲು ಎಡೆಯಿತ್ತು ಶ್ರಮಪರಿಹಾರ ಮಾಡಿದೆಯಾದ್ದರಿಂದ ಈ ಸುಕೃತ ಫಲವಾಗಿ ಪರ್ವತರಾಜನಾದ ಮೇರುವಿಗೆ ಪುತ್ರನಾಗಿ ಜನ್ಮಿಸು. ಮುಂದೆ ನೀನು ನನ್ನ ಭಕ್ತನಾಗಿ ಶಾಶ್ವತಕೀರ್ತಿ ಸಂಪನ್ನನಾಗುವೆ' ಎಂದು ವರವನ್ನು ಅನುಗ್ರಹಿಸಿದನು. ಆ ಶಿಲೆಯು ಶ್ರೀರಾಮಾನುಗ್ರಹದಿಂದ ಭದ್ರನೆಂಬ ನಾಮಧೇಯವನ್ನು ಹೊಂದಿ ಮೇರುಪರ್ವತ ಮೇನಕಾದೇವಿಯರಿಗೆ ಪುತ್ರನಾಗಿ ಜನ್ಮಿಸಿತು. ಮುಂದೆ ಕಾಲಕ್ರಮದಲ್ಲಿ ಭದ್ರನು, ಜಡರೂಪವನ್ನು ತ್ಯಜಿಸಿ, ಜ್ಞಾನಸಂಪನ್ನನಾಗಿ, ಶ್ರೀರಾ

ಮುನ ಚರಣಗಳನ್ನು ವಿಶೇಷಭಕ್ತಿಭಾವದಿಂದ ಆರಾಧಿಸುತ್ತ ತಪೋನಿರತನಾಗಿದ್ದನು. ಹೀಗೆ ತಪಸ್ಸಿನಲ್ಲೇ ಬಹುಕಾಲ ಕಳೆದಮೇಲೆ ಶ್ರೀರಾಮಚಂದ್ರಮೂರ್ತಿಯು ಸೀತಾಲಕ್ಷ್ಮಣ ಸಮೇತನಾಗಿ, ಆ ಭದ್ರನಿಗೆ ಪ್ರತ್ಯಕ್ಷನಾಗಿ, ವರವನ್ನು ಬೇಡೆಂದು ನುಡಿಯಲಾಗಿ, ಭದ್ರನು ಭಕ್ತ್ಯತಿರೇಕದಿಂದ ಆನಂದಬಾಷ್ಪಗಳನ್ನು ಸುರಿಸುತ್ತ- 'ಪ್ರಭೋ, ನನಗೆ ಇನ್ನಾವ ಅಪೇಕ್ಷೆಯೂ ಇಲ್ಲ. ನೀನು ಸೀತಾಲಕ್ಷ್ಮಣಸಮೇತನಾಗಿ, ನನ್ನೀ ಶಿಖರದಲ್ಲಿ ನಿವಾಸಮಾಡಿ ನನ್ನನ್ನು ಅನುಗ್ರಹಿಸಬೇಕು' ಎಂದು ಪ್ರಾರ್ಥಿಸಿದನು. ದಯಾನಿಧಿಯಾದ ಶ್ರೀರಾಮಚಂದ್ರನು, ಆ ಭಕ್ತೋತ್ತಮನ ಕೋರಿಕೆಯನ್ನು ಮನ್ನಿಸಿ- 'ಭಕ್ತವರಾ ನಿನ್ನ ಇಷ್ಟದಂತೆಯೇ ನಾನು ಈ ನಿನ್ನ ಶಿಖರದಲ್ಲಿ ಸೂರ್ಯಚಂದ್ರಾದಿಗಳಿರುವವರೆಗೂ ನೆಲೆಸಿ, ಭಕ್ತಾಭೀಷ್ಟ ವರಪ್ರದನಾಗಿರುವೆನು. ಕಲ್ಪಾಂತದಲ್ಲಿ ನೀನು ಈಪರ್ವತಸ್ವರೂಪವನ್ನು ತ್ಯಜಿಸಿ ನಿರ್ಮಲಜ್ಞಾನ ಸಂಪನ್ನನಾಗಿ ಮುಕ್ತನಾಗುವೆ. ನಿನ್ನೀ ಗಿರಿಯಸಮೀಪದಲ್ಲಿ, ಮಹರ್ಷಿಗೌತಮ ಮುನೀಂದ್ರನು, ಸಹ್ಯಾಮಲಯಾಚಲದಿಂದ ಗೋದಾವರೀ ನದಿಯನ್ನು ಕರೆತಂದು ಪ್ರವಹಿಸುವಂತೆ ಮಾಡುವನು. ಆ ನದಿಯು ಗೌತಮೀ ಎಂಬ ನಾಮಧೇಯದಿಂದ ಪ್ರಸಿದ್ಧವಾಗಿ ನಿನ್ನ ಬಳಿ ಪ್ರವಹಿಸುವುದು. ಅದರಲ್ಲಿ ವಿರಜಾನದಿಯ ಸಾನ್ನಿಧ್ಯವೂ ಇದ್ದು, ತನ್ನಲ್ಲಿ ಸ್ನಾನಮಾಡಿದ ಸಕಲ ಜನರಿಗೂ ಅದು ಪಾಪನಿವಾರಕವಾಗುವುದು. ಯಾರು ಗೌತಮಿಯನ್ನು ವಿರಜಾನದಿಯೆಂಬ ಭಾವನೆಯಿಂದಲೂ, ನಿನ್ನ ಶಿಖರವನ್ನೇ ವೈಕುಂಠವೆಂಬ ಭಾವನೆಯಿಂದಲೂ ಸಂದರ್ಶಿಸಿ, ನನ್ನನ್ನು ಸೇವಿಸುವರೋ ಅವರು ತಮ್ಮ ಸಕಲಪಾಪಗಳನ್ನೂ ಕಳೆದುಕೊಂಡು ಅಂತ್ಯಕಾಲದಲ್ಲಿ ವೈಕುಂಠ ಪದವಿಯನ್ನು ಪಡೆದು ಸುಖಿಸುವರು' ಎಂದು ವರವನ್ನು ಕೊಟ್ಟು ಅಂತರ್ಧಾನನಾದನು. ಹೀಗೆ ಭದ್ರಾದ್ರಿಯೂ, ವೇಂಕಟಾದ್ರಿಯಂತೆಯೇ ಪುರಾಣ ಪ್ರಸಿದ್ಧವಾದುದಾಗಿ ಭಕ್ತಜನರಿಗೆ ಸುಪ್ರಸಿದ್ಧ ಯಾತ್ರಾಸ್ಥಳವಾಗಿ ಶೋಭಿಸುತ್ತಿರುವುದು.



## ಅಧ್ಯಾಯ ೨ "ಅಕ್ಕನ್ನ ಮಾದನ್ನ"

ಈಗಿನ ನಿಜಾಮ ರಾಷ್ಟ್ರದಲ್ಲಿ ನೇಲಕೊಂಡಪಲ್ಲಿ ಎಂಬ ಹೆಸರಿನಿಂದ ಒಂದು ಗ್ರಾಮವುಂಟು. ಆ ಗ್ರಾಮದಲ್ಲಿ ಲಿಂಗನಮಂತ್ರಿಯೆಂಬ ಹೆಸರಿನಿಂದ ಒಬ್ಬ ಆಂಧ್ರ ಬ್ರಾಹ್ಮಣನು ವಾಸವಾಗಿದ್ದನು. ಆತನು ಆತ್ರೇಯಸ ಗೋತ್ರಜನು. 'ಕಂಚರ್ಲ' ಎಂಬುದು ಅವರ ವಂಶದ ಹೆಸರು. ಅವರು ಪ್ರಥಮ ಶಾಖಾನುವರ್ತಿಗಳು. ಲಿಂಗನಮಂತ್ರಿಯು ಕಾಮಮ್ಮ ಎಂಬ ಸಾಧ್ವಿಯಯನ್ನು ವರಿಸಿ, ಆ ಕಾಲದಲ್ಲಿ ಬ್ರಾಹ್ಮಣರಿಗೆ ಸರ್ವಸಾಮಾನ್ಯವಾಗಿದ್ದ 'ನಿಯೋಗಿ' (ರಾಜಕೀಯೋದ್ಯೋಗ) ಉದ್ಯೋಗವನ್ನು ನಿರ್ವಹಿಸಿಕೊಂಡು ಜೀವನಯಾತ್ರೆಯನ್ನು ಸಾಗಿಸುತಿದ್ದನು. ಲಿಂಗನಮಂತ್ರಿಯು ತನ್ನ ಕುಲಧರ್ಮಾನುಸಾರವಾಗಿ ಸ್ನಾನಸಂಧ್ಯಾದಿಗಳನ್ನು ಆಚರಿಸಿ ಕೊಳ್ಳುವುದರಲ್ಲಿ ಸದಾ ಜಾಗರೂಕನಾಗಿ, ಸತ್ಯಸಂಧನೂ ಪರೋಪಕಾರಿಯೂ ದೈವಭಕ್ತನೂ ಆದ ಸಜ್ಜನನೆಂದು ನೆರೆಹೊರೆಯ ಗ್ರಾಮಗಳಲ್ಲೂ ಪ್ರಸಿದ್ಧಿಯನ್ನು ಪಡೆದಿದ್ದನು. ಈ ದಂಪತಿಗಳಿಗೆ ಕ್ರಿ. ಶ. ಹದಿನೇಳನೆಯ ಶತಮಾನದ ಪ್ರಥಮಪಾದಭಾಗವು ಕಳೆದ ಸುಮಾರಿನಲ್ಲಿ ಒಂದು ಪುರುಷಶಿಶುವು ಜನ್ಮಿಸಿತು. ಲಿಂಗನಮಂತ್ರಿಯು ಅಪೂರ್ವವಾಗಿ ಲಭ್ಯವಾದ ಆ ಶಿಶುವಿಗೆ ಯಥ್ಯೋಕ್ತವಾಗಿ ಜಾತಕರ್ಮನಾಮಕರಣಾದಿ ಮಹೋತ್ಸವಗಳನ್ನು ಅತ್ಯಂತ ವಿಜೃಂಭಣೆಯಿಂದ ನೆರವೇರಿಸಿ, ತಮ್ಮ ಬಂಧುವರ್ಗಕ್ಕೂ, ಬ್ರಾಹ್ಮಣ ಸುವಾಸಿನಿಯರಿಗೂ, ದೀನಾನಾಥರಿಗೂ ವಿಶೇಷ ಅನ್ನದಾನಾದಿಗಳನ್ನು ನಡೆಸಿ ತೃಪ್ತಿಪಡಿಸಿದನು. ತಮ್ಮ ಮುದ್ದು ಶಿಶುವನ್ನು ಮಾತಾಪಿತೃಗಳು 'ಗೋಪನ್ನ' ಎಂಬ ನಾಮಧೇಯವನ್ನಿಟ್ಟು ಕರೆದರು. ಗೋಪನ್ನನು ತನ್ನ ಶಿಶು ಸಹಜ ಲೀಲೆಗಳಿಂದ ಕಾಮಮ್ಮ ಲಿಂಗನಮಂತ್ರಿಗಳ ಕಣ್ಣುಗಳಿಗೆ ಮಹೋತ್ಸವವನ್ನುಂಟುಮಾಡುತ್ತ ದಿನದಿನಕ್ಕೆ ಅಭಿವೃದ್ಧಿಯಾಗುತ್ತಿದ್ದನು.

ಕಂಚರ್ಲ ಗೋಪನ್ನನು ಶೈಶವಾವಸ್ಥೆಯನ್ನು ಕಳೆದು ಬಾಲ್ಯಾವಸ್ಥೆಯಲ್ಲಿ, ದೇವರಪೂಜೆಮಾಡುತ್ತೇನೆಂಬುದು, ಭಜನೆಮಾಡುತ್ತೇನೆಂಬುದು ಮುಂತಾದ ಹಲವು ಬಗೆಯ ಆಟಪಾಟಗಳಿಂದ ಕಾಲಕಳೆಯುತ್ತಾ, ಆರೇಳು ವರ್ಷಗಳ ವಯಸ್ಕನಾಗಲು, ಲಿಂಗನಮಂತ್ರಿಯು ತನ್ನ ಮಗನಿಗೆ ಅಕ್ಷರಾಭ್ಯಾಸಮಾಡಿ

ಸಿ ವಿದ್ಯಾಗುರುಗಳ ವಶಮಾಡಿದನು. ಗೋಪನ್ನನು ಕುಶಾಗ್ರಮತಿಯಾದುದರಿಂದ ಕೆಲವರ್ಷಗಳಲ್ಲೇ ಸಂಸ್ಕೃತ ಮತ್ತು ಆಂಧ್ರಭಾಷೆಗಳೆರಡರಲ್ಲೂ ತಕ್ಕಮಟ್ಟಿನ ಪಾಂಡಿತ್ಯವನ್ನು ಸಂಪಾದಿಸಿ ಗುರುವನ್ನೂ ತಂದೆಯನ್ನೂ ಮೆಚ್ಚಿಸಿದನು.

ನಮ್ಮ ಕಥಾನಾಯಕನು ಕೇವಲ ತನ್ನ ಭಗವದ್ಭಕ್ತಿಗಾಗಿಯೇ ಪ್ರಸಿದ್ಧನಾಗಿರುವನಾದರೂ, ಆತನ ಚರಿತ್ರೆಯೊಂದಿಗೆ ಆ ಕಾಲದ ರಾಜ್ಯಸ್ಥಿತಿಯ ಸಂಬಂಧವೂ ಕೆಲಮಟ್ಟಿಗೆ ಬೆರೆತಿರುವುದರಿಂದ, ಅದರ ವಿಚಾರವೂ ಸ್ವಲ್ಪಮಟ್ಟಿಗೆ ಅವಶ್ಯಕವಿದೆ. ಇತ್ತ ಗೋಪನ್ನನು ಹುಟ್ಟಿಬೆಳೆದು ಅಭಿವೃದ್ಧಿಯಾಗುತ್ತಿದ್ದ ಈ ಕಾಲದಲ್ಲೇ, ಆ ಪ್ರಾಂತವನ್ನು ಎಂದರೆ ಗೋಲ್ಕೊಂಡ ರಾಜ್ಯವನ್ನು ಅಬೂಹಸನ್ ಕುತುಬ್‌ಷಾಹೀ ಎಂಬ ಮಹಮ್ಮದೀಯನು ಪಾಲಿಸುತ್ತಿದ್ದನು. ಆತನನ್ನು ಅಬ್ದುಲ್‌ಹಸನ್ ಕುತುಬ್‌ಷಾಹೀ ಎಂದೂ ಕರೆಯುವ ರೂಢಿಯುಂಟು. ಈತನೇ ತಾನೀಷಾ ಎಂಬ ಸಾಮಾನ್ಯ ಹೆಸರಿನಿಂದ ರಾಮದಾಸ ಚರಿತ್ರೆ ಮತ್ತು ನಾಟಕಾದಿಗಳಲ್ಲಿ ಪ್ರಸಿದ್ಧನಾಗಿದ್ದಾನೆ. ಈತನು, ಕ್ರಿ. ಶ. ೧೬೭೨ರಿಂದ ೧೬೮೭ರವರೆಗೆ ಗೋಲ್ಕೊಂಡ ರಾಜ್ಯವನ್ನು ಪಾಲಿಸಿದನೆಂದು, ಚಾರಿತ್ರಿಕ ಸಂಗತಿಗಳಿಂದ ತಿಳಿಯಬರುತ್ತದೆ. ಈತನ ಬಳಿಯಲ್ಲಿ ಅಕ್ಕನ್ನಮಾದನ್ನ ಎಂಬಿಬ್ಬರು ಅಣ್ಣತಮ್ಮಂದಿರು ಮಂತ್ರಿಗಳಾಗಿ ಪ್ರಬಲಿಸಿದ್ದರು. ಅಕ್ಕನ್ನಮಾದನ್ನರು, ಪಿಂಗಳಿವಂಶದ ಆಂಧ್ರ ಬ್ರಾಹ್ಮಣರು. ಲಿಂಗನಮಂತ್ರಿಗೆ ಸಮೀಪದ ಬಂಧುಗಳು. ಗೋಪನ್ನನಿಗೆ ಸೋದರಮಾವಂದಿರು.

ಈ ಅಕ್ಕನ್ನಮಾದನ್ನ ಮಂತ್ರಿಗಳು ಅಣ್ಣತಮ್ಮಂದಿರೆಂಬ ವ್ಯವಹಾರವು ಸರ್ವಸಾಮಾನ್ಯವಾಗಿ ಬಂದಿದ್ದರೂ, ಇವರ ಬಾಂಧವ್ಯ ವಿಚಾರದಲ್ಲಿ ಒಂದು ವಿಚಿತ್ರ ಕಥೆಯು ಹೇಳಲ್ಪಟ್ಟಿದೆ. ಅಕ್ಕನ್ನನು ಅಣ್ಣನೆಂದೂ ಮಾದನ್ನನು ತಮ್ಮನೆಂದೂ ಸಾಮಾನ್ಯವಾಗಿ ಜನರು ತಿಳಿದಿದ್ದರಾದರೂ, ಅಕ್ಕನ್ನನು ನಿಜವಾದ ಅಣ್ಣನಲ್ಲವಂತೆ! ಮಾದನ್ನನು ಮಂತ್ರಿತ್ವಮಾಡುತ್ತಿದ್ದಾಗ್ಗೆ, ದಿಕ್ಕಿಲ್ಲದ ಬಡಬ್ರಾಹ್ಮಣನಾದ ಅಕ್ಕನ್ನನು ಹೇಗೋ ಬಂದು ಮಂತ್ರಿಯಮನೆಯನ್ನು ಸೇರಿಬಿಟ್ಟನಂತೆ! ಮಾದನ್ನನು, ಆತನನ್ನು ತನ್ನ ಹೆಂಡತಿಯ ಬಂಧುವಾಗಿರಬಹುದೆಂದು ತಿಳಿದು ಯಾರು ಏನು ಎಂದು ವಿಚಾರಿಸದೆಯೇ ಆತ

ನೊಂದಿಗೆ ಸ್ನೇಹದಿಂದ ಮಾತುಕಥೆಗಳನ್ನಾಡಿಕೊಳ್ಳುತ್ತಾ ಇದ್ದುಬಿಟ್ಟನು. ತನ್ನ ಪತಿಯಬಳಿ ವಿಶೇಷಸಲಿಗೆಯಿಂದ ಮಾತುಕಥೆಗಳನ್ನಾಡುತ್ತಾ ನಿರ್ಭೀತಿಯಿಂದ ಇದ್ದ ಆತನು ತಪ್ಪದೆ ಆತನ ಸಂಬಂಧಿಯಾಗಿರಬಹುದೆಂದು ತಿಳಿದು ಮಾದಣ್ಣನ ಪತ್ನಿಯು ಆಗಂತುಕನು ಯಾರು ಎಲ್ಲಿಯವನು ಎಂಬ ವಿಚಾರವನ್ನೇ ಮಾಡದೆ ಸುಮ್ಮನೆ ಇದ್ದುಬಿಟ್ಟಳು. ಹೀಗೆ ಗಂಡನಕಡೆಯವನಿರಬಹುದೆಂದು ಹೆಂಡತಿಯೂ ಹೆಂಡತಿಯಕಡೆಯವನಿರಬಹುದೆಂದು ಗಂಡನೂ, ತಿಳಿದುಕೊಂಡು, ಕೇಳಲು ಇಬ್ಬರೂ ದಾಕ್ಷಿಣ್ಯಪಟ್ಟು ಸುಮ್ಮನಿದ್ದುಬಿಟ್ಟುದರಿಂದ, ಧಾರ್ಷ್ಟ್ಯ ಸ್ವಭಾವದ ಅಕ್ಕಣ್ಣನು ಆ ಮನೆಯಲ್ಲಿ ನಿರಾತಂಕವಾಗಿ ಬಹುವರ್ಷಗಳಕಾಲ ವಾಸಮಾಡಿಕೊಂಡಿದ್ದುಬಿಟ್ಟನು. ಯಜಮಾನ ಯಜಮಾನಿತಿಯರು ಪರಸ್ಪರರ ಬಂಧುವೇನೋ ಎಂಬ ಭಾವನೆಯಿಂದ ಆತನನ್ನು ಯೋಗ್ಯ ಮರ್ಯಾದೆಯಿಂದ ಕಾಣುತ್ತಿದ್ದುದರಿಂದ ಸೇವಕಜನರೂ, ಇತರರೂ, ಆತನನ್ನು ಗೌರವಪೂರ್ವಕವಾಗಿಯೇ ನೋಡಿಕೊಳ್ಳುತ್ತಿದ್ದರು. ಅಕ್ಕಣ್ಣನಾದರೋ ,ನಿಶ್ಶಂಕೆಯಿಂದ ಮನೆಯ ಕಾರ್ಯಭಾರಗಳಲ್ಲಿ ಪ್ರವೇಶಿಸಿ ತರುವುದು ಕೊಡುವುದು, ಆಗುವುದು ಹೋಗುವುದು, ಶುಭ ಅಶುಭ ಕಾರ್ಯಗಳಲ್ಲಿ ಲೇಶಮಾತ್ರವೂ ವ್ಯತ್ಯಾಸವನ್ನೆಣಿಸದೆ ಕ್ರಮೇಣ ಯಾಜಮಾನ್ಯವನ್ನೂ ನಡೆಯಿಸುತ್ತಾ ಬಂದನು. ಸರ್ವದಾ ರಾಜಕಾರ್ಯಗಳ ಗಲಭೆಯಲ್ಲಿ ತಗುಲಿ ತೊಂದರೆಪಡುತ್ತಿದ್ದ ಮಾದಣ್ಣನಿಗೆ ಅದು ಎಷ್ಟೋಮಟ್ಟಿನ ಸಹಾಯವಾಗಿದ್ದಿತು. ಮನೆಯ ಸೇವಕವರ್ಗವೂ ಬರುಹೋಗುವವರೂ, ಇತರ ಆಪ್ತರೂ ಹೀಗೆ ಎಲ್ಲರೂ ಮಂತ್ರಿಯ ಮನೆಯಲ್ಲಿ ಅಕ್ಕಣ್ಣನ ಅನುಮತಿಯನ್ನು ಕೇಳಿಯೇ ಕೆಲಸಕಾರ್ಯಗಳನ್ನು ನಡೆಯಿಸುವಂತಹ ಸ್ಥಿತಿಯೊದಗಿತು. ಹೊರಗಿನವರೆಲ್ಲರೂ ಅವರನ್ನು ಅಣ್ಣತಮ್ಮಂದಿರೆಂದೇ ತಿಳಿದುಕೊಂಡಿದ್ದರು. ಅಕ್ಕಣ್ಣನ ಅಧಿಕಾರವು ಕೇವಲ ಗೃಹಕೃತ್ಯದ ಮಟ್ಟಿಗೆ ಮಾತ್ರನಿಂತಿದ್ದಿಲ್ಲ. ಮಹಾ ತೀಕ್ಷ್ಣಮತಿಯೂ ವ್ಯವಹಾರಜ್ಞನೂ ಆದ ಆತನು, ರಾಜಕೀಯ ವಿಚಾರಗಳಲ್ಲೂ ಪ್ರವೇಶಿಸಿ ಸಲಹೆ ಕೊಡುತ್ತಿದ್ದನು. ಅನೇಕ ಸಂದರ್ಭಗಳಲ್ಲಿ ಪ್ರಭುಸಮ್ಮುಖದಲ್ಲಿ ಅಕ್ಕಣ್ಣ ಮಾದಣ್ಣರಿಬ್ಬರೂ ಕುಳಿತು ರಾಜಕೀಯ ವಿಚಾರಗಳನ್ನು ಚರ್ಚಿಸುವರು. ತಾನೀಷಾ ಸುಲ್ತಾನನೂ ಅವರಿಬ್ಬರೂ ಅಣ್ಣತಮ್ಮಂದಿರೆಂದೇ ತಿಳಿದುಕೊಂಡಿದ್ದನು.

ಹೀಗಿಯೇ ಅನೇಕ ಸಂವತ್ಸರಗಳು ಕಳೆದುಹೋದ ತರುವಾಯ ಒಂದು ದಿನ ಮಾದಣ್ಣ ಮಂತ್ರಿಯು, ತನ್ನ ಪತ್ನಿಯನ್ನು ಕುರಿತು, ಅಕ್ಕಣ್ಣನು ನಿನಗೇನಾಗಬೇಕು, ಎಂದು ಪ್ರಶ್ನಿಸಿದನು. ಆಕೆಯು, ತನಗೂ ಆತನಿಗೂ ಯಾವ ಸಂಬಂಧವೂ ಇಲ್ಲವೆಂದಳು. ಆ ಸಂಗತಿಯನ್ನು ಕೇಳಿದ ಮಾದಣ್ಣನು ಬುದ್ಧಿಶಾಲಿಯಾದುದರಿಂದ ಹೆಚ್ಚು ಚರ್ಚೆಗೆ ಪ್ರವೇಶಿಸದೆ ಆಗ ಸುಮ್ಮನಿದ್ದುಬಿಟ್ಟು ಮಾರನೆಯದಿನ, ಅಕ್ಕಣ್ಣನನ್ನು ಏಕಾಂತವಾಗಿ ಕಂಡಾಗ, ನಮ್ಮ ಬಾಂಧವ್ಯ ರಹಸ್ಯವನ್ನು ತಿಳಿಸೆಂದು ಕೇಳಿದನು. ಆಗ ಅಕ್ಕಣ್ಣನು ಸ್ವಲ್ಪವೂ ಅಪ್ರತಿಭನಾಗದೆ-'ಅಪ್ಪಾ ಕೇಳು, * ನಾನು ದೊಡ್ಡಮ್ಮನ ಮಗನು· ನೀನು ಚಿಕ್ಕಮ್ಮನ ಮಗನು. ಹೀಗೆ ನಾವಿಬ್ಬರೂ ಅಕ್ಕತಂಗಿಯರ ಮಕ್ಕಳಾಗಬೇಕು. ಆದುದರಿಂದ ನಮ್ಮಿಬ್ಬರಿಗೂ ಅಣ್ಣತಮ್ಮಂದಿರ ವರಸೆಯುಂಟಷ್ಟೆ! ಈ ರಹಸ್ಯವನ್ನು ತಿಳಿ, ಈ ಸಂಗತಿಯನ್ನು ಮನಸ್ಸಿನಲ್ಲಿಟ್ಟುಕೊಂಡರು. ಇದುವರೆಗೂ ನಾವು ವ್ಯವಹರಿಸುತ್ತಿದ್ದಂತೆಯೇ ಅಣ್ಣತಮ್ಮಂದಿರಂತಲೇ ಇದ್ದುಬಿಡೋಣ! ಎಂದು ನುಡಿದನಂತೆ! ಆ ಸಂಗತಿಯನ್ನು ತಿಳಿದ ಮಾದಣ್ಣನು, ಆತನ ಬುದ್ಧಿಚಾತುರ್ಯಕ್ಕೆ ಮೆಚ್ಚಿ, ಅಂದಿನಿಂದ ಮುಂದೆ ಆತನನ್ನು ನಿಜವಾಗಿಯೂ ತನ್ನ ಅಣ್ಣನೆಂದೇ ಭಾವಿಸಿ ಎಂದಿನಂತೆಯೇ ಇದ್ದುಬಿಟ್ಟನು.



## ಅಧ್ಯಾಯ. ೩ "ಗೋಪಣ್ಣ-ರಾಮದಾಸ"

ಅತ್ತ ನೆಲಕೊಂಡಪಲ್ಲಿಯಲ್ಲಿ ವಾಸಮಾಡಿಕೊಂಡಿದ್ದ ಗೋಪಣ್ಣನು ಇನ್ನೂ ಚಿಕ್ಕವಯಸ್ಸಿನವನಾಗಿದ್ದರೂ, ಪೂರ್ವಜನ್ಮಸಂಸ್ಕಾರ ಬಲದಿಂದ ಸದಾಕಾಲದಲ್ಲೂ ಹರಿಭಜನತತ್ಪರನಾಗಿರುತ್ತಿದ್ದನು. ಎಲ್ಲಿ ಭಜನೆಯಾಗುತ್ತಿರಲಿ, ಅಲ್ಲಿ ಗೋಪಣ್ಣನಿರುವನು. ಎಲ್ಲಿ ಹರಿಕಥೆ ಜರುಗುವುದೆಂದು ತಿಳಿದರೆ ಅಲ್ಲಿ ಎಲ್ಲರಿಗಿಂತಲೂ ಮುಂಚೆ ಗೋಪಣ್ಣನು ಸಿದ್ಧನಾಗಿರುವನು. ಮಾತ್ರವಲ್ಲ, ಆ ಸ್ಥಳದಲ್ಲಿ ನಡೆಯಬೇಕಾದ ಕಸತೆಗೆಯುವುದು, ತೋರಣಕಟ್ಟುವುದು, ನೆಲಕ್ಕೆ ಚಾಪೆಮುಂತಾದುವುಗಳನ್ನು ಹಾಸುವುದು, ಮೊದಲಾದ ಅನೇಕ ಸಣ್ಣಪುಟ್ಟಕೆಲಸಗಳಿಗೆಲ್ಲ ಸಿದ್ಧನಾಗಿರುವನು. ತಮ್ಮ ಮನೆಯ

* ನಾನು ಜ್ಯೇಷ್ಠಾದೇವಿಯ ಮಗನು.—ನೀನು ಲಕ್ಷ್ಮೀಪುತ್ರನು, ಎಂಬುದು ಇದರ ಭಾವವು.

ಬಳಿ ಇದ್ದ ಆಂಜನೇಯ ದೇವಾಲಯದಲ್ಲಿ ಪೂಜೆಗೆಂದು ಪ್ರತಿದಿನವೂ ಹೂವು ತುಲಸಿಗಳನ್ನು ತಂದು ಒದಗಿಸುವನು. ಬೆಳಗಾದರೆ ಸಂಜೆಯಾದರೆ, ಆ ದೇವರಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕುವುದರಲ್ಲೂ, ತನಗೆ ಬರುತ್ತಿದ್ದ ದೇವರಕೀರ್ತನೆಗಳನ್ನು ಹೇಳುಕೊಳ್ಳುವುದರಲ್ಲೂ ನಿರತನಾಗಿರುವನು.

ಹೀಗೆ ಗೋಪನ್ನ ಬಾಲಕನಿಗೆ ೧೦-೧೨ ವಯಸ್ಸಾಗುವವೇಳೆಗೆ ತಂದೆಯಾದ ಲಿಂಗನಮಂತ್ರಿಯೂ ತಾಯಿ ಕಾಮಮ್ಮನೂ ಮೃತ್ಯುವಶರಾದರು. ಮುಂದೆ ಗೋಪನ್ನನು ಏನು ಮಾಡಲೂ ಅರಿಯದೆ, ಎಲ್ಲಿಗೆ ಹೋಗಲೂ ದಿಕ್ಕುತೋರದೆ ಬಹುದಿನಗಳಿಂದಲೂ ಇದ್ದ ಆ ಊರಿನಲ್ಲಿ ಎಲ್ಲರೂ ಪರಿಚಯಸ್ಥರಾಗಿದ್ದುದರಿಂದ, ತಾನು ಏಕಾಂಗಿಯಾಗಿದ್ದರೂ ಭಯವಿಲ್ಲದೆ ಅದೇ ಗ್ರಾಮದಲ್ಲೇ ವಾಸಮಾಡಿಕೊಂಡಿದ್ದನು. ಗೋಪನ್ನನ ಸ್ನೇಹಪರತೆಯೂ, ಪರರಕಷ್ಟಕ್ಕೆ ಮರುಗಿ ಸ್ವಕಾಯಕಷ್ಟವನ್ನು ನೋಡದೆ ಸಹಾಯಮಾಡುತ್ತಿದ್ದ ಆತನ ನಿಸ್ವಾರ್ಥತೆಯೂ, ಸರ್ವದಾ ಕೋಪತಾಪಗಳ ಸೆರೆಯನ್ನೇ ಅರಿಯದ ಆತನ ಸಾಧುಗುಣವೂ, ಹಸನ್ಮುಖವೂ ಎಲ್ಲರಿಗೂ ಅವನಲ್ಲಿ ಅನಿವಾರ್ಯವಾದ ಪ್ರೇಮಸೌಹಾರ್ದಭಾವಗಳನ್ನುಂಟುಮಾಡುವಂತೆ ಮಾಡಿದುವು. ಆ ಗ್ರಾಮಸ್ಥರೆಲ್ಲರೂ ಆತನನ್ನು ಲೇಶವೂ ಭೇದವೆಣಿಸದೆ, ತಮ್ಮ ಮನೆಯವನೋ ಎಂದು ನೋಡಿಕೊಂಡು,ಊಟಉಪಚಾರಗಳಿಂದ ಆದರಿಸುತ್ತಿದ್ದರು. ಗೋಪನ್ನನು ನಿಶ್ಚಿಂತನಾಗಿ ಯಾರ ಆತಂಕವೂ ಇಲ್ಲದೆ ವಿಶಾಲವಾದ ಅಂತರಿಕ್ಷದಲ್ಲಿ ತಾನೇತಾನಾಗಿ ಹಾರಾಡಿಕೊಂಡಿರುವ ಪಕ್ಷಿಯಂತೆ, ಇದ್ದುಬಿಟ್ಟನು. ಸರ್ವದಾ ಹರಿಭಜನತತ್ಪರನಾಗಿ, ಪರೋಪಕಾರನಿರತನಾಗಿ, ಸಾಧುಸಂಗತತ್ಪರನಾಗಿ ಇರುತ್ತಿದ್ದ ಆತನ ಮುಖದಲ್ಲಿ ದಿನದಿನಕ್ಕೆ ದಿವ್ಯಕಳೆಯು ಉಂಟಾಗಿ ಪ್ರಕಾಶಿಸತೊಡಗಿತು.

ಗೋಪನ್ನನಿಗೆ ದಿನದಿನಕ್ಕೆ ಭಗವತ್ಸಂಬಂಧವಾದ ಚಿಂತೆಯು ಹೆಚ್ಚಾಗತೊಡಗಿತು. 'ನಾನು ಮಾಡುತ್ತಿರುವ ಈ ಭಜನ ಸೇವಾ ಮುಂತಾದ ಕಾರ್ಯಗಳು ನಿಶ್ಚಯವಾಗಿಯೂ ಭಗವಂತನಿಗೆ ಪ್ರಿಯಕರಗಳಾಗುತ್ತಿವೆಯೇ? ಹಾಗಲ್ಲದಿದ್ದರೆ ಆತನನ್ನು ಸೇವಿಸುವ ಮಾರ್ಗವಾವುದು ? ಅಕ್ಕಟಾ, ಏನು ಮಾಡಲಿ ನನಗೆ ಆ ಮಾರ್ಗವು ಇಂಥದೆಂದು ತೋರಿಸುವ ದಯಾಘನರು ಯಾರೂ ದೊರೆಯಲೊಲ್ಲರಲ್ಲಾ! ಗುರುಮುಖದಿಂದಲ್ಲದೆ,ಭಗವತ್ಪ್ರಾಪ್ತಿಗೆ

ಯೋಗ್ಯಬೋಧನೆಯು ಮತ್ತೆಲ್ಲೂ ದೊರೆಯದೆಂದು ಹಿರಿಯರು ಹೇಳುತ್ತಿರುವರು. ಹಾಗೆ ಶ್ರೀಹರಿಯ ಚರಣಸೇವೆಯು, ನಾಮಭಜನೆಯು, ನಿಶ್ಚಯು ಯು ಮಾರ್ಗವಿಂಥದೆಂಬುದನ್ನು ನನಗೆ ಯಾವ ಪುಣ್ಯಾತ್ಮನು ತಿಳಿಸಿ, ಉಪಕಾರಮಾಡುವನೋ ತಿಳಿಯದಲ್ಲ. ಇದಕ್ಕಾಗಿ ಯಾರನ್ನು ಆಶ್ರಯಿಸಲಿ. ಯಾರಿಗೆ ಮರೆಬೀಳಲಿ, ಯಾರು ನನಗೆ ಸಹಾಯಮಾಡುವರು ? ಭಕ್ತವತ್ಸಲಾ, ಕರಿರಾಜವರದಾ, ದೀನದಯಾಪರಾ, ನನ್ನನ್ನು ಹೇಗೆ ಉದ್ಧರಿಸುವೆ, ಎಂದು ಕಾತರಗೊಳ್ಳುತ್ತಾ, ಕೆಲವು ದಿನಗಳನ್ನು ಕಳೆದನು.

ಗೋಪಣ್ಣನ ಮನಸ್ಸಿನಲ್ಲಿ ಸದಾ ತನಗೆ ಸದ್ಗುರುಸಮಾಗಮವು ಹೇಗಾದೀತು ? ತಾನು ಹೇಗೆ ಈ ಭವಬಂಧವನ್ನು ಕಳೆದುಕೊಂಡು ಮುಕ್ತನಾದೇನು ! ಎಂಬ ಭಾವಗಳೇ ತುಂಬಿಹೋಗಿ ಬಿಟ್ಟಿದ್ದುದರಿಂದ ಆತನು, ತನ್ನ ಜೀವನ ಸಂಪಾದನೆಯ ಮಾರ್ಗವನ್ನು ಕುರಿತಾಗಲಿ ತನ್ನ ಮನೆಬಾಗಿಲು ಒಡವೆ ವಸ್ತ್ರಗಳು, ಹೊಲಗದ್ದೆ ತೋಟಗಳ ವಿಚಾರವನ್ನು ಕುರಿತಾಗಲೀ ಎಂದೂ ಯೋಚನೆಯನ್ನೇ ಮಾಡದೆ, ಕೇವಲ ವೈರಾಗ್ಯ ತತ್ಪರನಾಗಿ ಇದ್ದುಬಿಟ್ಟನು. ಹಣೆಯಲ್ಲಿ ಧೀರ್ಘಪುಂಡ್ರಗಳು, ಕೊರಳಲ್ಲಿ ದಿವ್ಯ ತುಲಸೀ ಮಣಿಗಳ ಮಾಲೆಗಳು, ಮುಂತಾದ ವೈಷ್ಣವಚಿಹ್ನೆಗಳನ್ನು ಧರಿಸಿ, ಸದಾ ಶುಚಿರ್ಭೂತನಾಗಿರುತ್ತಿದ್ದನು. ಪ್ರಾಣಧಾರಣೆಗಾಗಿ ಏನು ದೊರೆತರೆ ಅಷ್ಟು ಪದಾರ್ಥವನ್ನು ತನ್ನ ಇಷ್ಟದೈವಕ್ಕೆ ನಿವೇದಿಸಿ ಭಕ್ಷಿಸಿ, ಅಷ್ಟರಿಂದಲೇ ತೃಪ್ತನಾಗಿರುವನು.

ಹೀಗಿ ದಿನದಿನಕ್ಕೆ ಭಕ್ತಿಸೋಪಾನದ ಒಂದೊಂದೇ ಮೆಟ್ಟಿಲನ್ನು ಏರುತ್ತಾನಾಗುತ್ತಿದ್ದ ಆತನ ಇಚ್ಛೆಯು ನೆರವೇರುವ ಒಂದು ಸುಸಂಧಿಯೂ ಒದಗಿತು. ಆ ಗ್ರಾಮಸ್ಥರು ಚೈತ್ರಮಾಸದಲ್ಲೊಂದುಬಾರಿ ಶ್ರೀರಾಮೋತ್ಸವವನ್ನು ಜರುಗಿಸಲು ಪ್ರಯತ್ನಿಸಿ, ಸಕಲರೂ ಅತ್ಯುತ್ಸಾಹಗೊಂಡು ವಿಶೇಷ ವಿಜೃಂಭಣೆಯಿಂದ ಆ ಕಾರ್ಯವನ್ನು ನಡೆಯಿಸಿದರು. ದೂರದ ಪರಸ್ಥಳಗಳಿಂದಲೂ ಅನೇಕಮಂದಿ ಭಕ್ತರೂ ಭಾಗವತರೂ ಬಂದು ನೆರೆದು ಸ್ವಾಮಿಯನ್ನು ಅನೇಕ ವಿಧಗಳಲ್ಲಿ ಸೇವಿಸಲು ಸಿದ್ಧರಾದರು. ಪ್ರತಿದಿನವೂ ಭಜನೆಯೂ ಹರಿಕಥೆಯೂ ತಪ್ಪದೆ ನಡೆಯುತ್ತಿದ್ದುವು. ಊರಿನ ಆಬಾಲವೃದ್ಧರೂ ಆ ದೇವತಾಕಾರ್ಯದಲ್ಲಿ ಅತ್ಯಂತ ಭಕ್ತಿ ಶ್ರದ್ಧೆಗಳಿಂದ ಕಲೆತು ಒಂ

ದಾಗಿ, ತಮ್ಮ ತನುಮನಧನಗಳನ್ನರ್ಪಿಸಿ, ಆ ಕಾರ್ಯವನ್ನು ಸಾಂಗವಾಗಿ ನೆರವೇರಿಸಲು ಪ್ರಯತ್ನಿಸುತ್ತಿದ್ದರು. ನಿತ್ಯವೂ ಬ್ರಾಹ್ಮಣ ಸುವಾಸಿನೀಜನಕ್ಕೆ ಸಂತರ್ಪಣೆಯೂ ವಿಶೇಷವಾಗಿ ನಡೆಯುತ್ತಿದ್ದಿತು. ಹೀಗಿರುವಲ್ಲಿ ಉತ್ತರದೇಶ ಪ್ರಾಂತದ ಒಬ್ಬಾನೊಬ್ಬ ಸಾಧುವರ್ಯನು ಆ ಮಹೋತ್ಸವದ ವರ್ತಮಾನವನ್ನು ಕೇಳಿ, ಮಾರ್ಗಾಂತರವಾಗಿ ಆ ಗ್ರಾಮಕ್ಕೆ ಬಂದನು. ಬಂದವನು, ಜನಗಳ ಉತ್ಸಾಹವನ್ನೂ, ಶ್ರದ್ಧಾಭಕ್ತಿಗಳನ್ನೂ, ಭಗವತ್ಸೇವೆಗಾಗಿ ಅವರು ಮಾಡಿದ್ದ ಏರ್ಪಾಡುಗಳನ್ನೂ ಕಂಡು ಪರಮಸಂತೋಷ ಭರಿತನಾಗಿ, ಮಂದಿರದ ಒಳಹೊಕ್ಕು ದೇವತಾದರ್ಶನ ಮಾಡಬೇಕೆಂದು ಇಚ್ಛಿಸಿದನು. ಆತನು ಸಾಧುವೂ ರಾಮಭಕ್ತನೂ ಆಗಿದ್ದರೂ, ಜಾತಿಯಲ್ಲಿ ಮುಸಲ್ಮಾನನಾಗಿದ್ದುದರಿಂದ ಅವನನ್ನು ಒಳಕ್ಕೆ ಬಿಡಲು ಜನಗಳು ಒಪ್ಪಲಿಲ್ಲ. ಉತ್ಸವಾರಂಭವಾದಾಗಿನಿಂದಲೂ, ನಮ್ಮ ಗೋಪನ್ನನಿಗೆ ತಮ್ಮ ಊರಿನಲ್ಲಿ ವೈಕುಂಠಲೋಕವೇ ಬಂದು ಇಳಿದಿದೆಯೋ ಎಂಬಷ್ಟುಮಟ್ಟಿನ ಪರಮಾನಂದವಾಗಿ ಅವನು ಸಕಲವನ್ನೂ ಮರೆತು ದಿನದ ಇಪ್ಪತ್ನಾಲ್ಕು ಗಂಟೆಯೂ, ಆ ಮಂದಿರವನ್ನುಬಿಟ್ಟು ಅತ್ತಿತ್ತ ಕದಲದೆ, ಪ್ರತಿಯೊಂದುವಿಧವಾದ ಸೇವೆಗೂ ಮುಂದಾಳಾಗಿ ನಿದ್ರಾಹಾರಗಳೆಣಿಸದೆ ಕೆಲಸ ಮಾಡುತ್ತಿದ್ದನು.

ಆಗಂತುಕನಾದ ಮುಹಮ್ಮದೀಯ ಸಾಧುವು ದೇವತಾದರ್ಶನ ಮಾಡಬೇಕೆಂದು ಎಷ್ಟು ಅಪೇಕ್ಷಿಸಿದರೂ ಗ್ರಾಮಸ್ಥರು ನಿಷೇಧಿಸುತ್ತಿದ್ದುದು ಗೋಪನ್ನನಿಗೆ ಯುಕ್ತವೆಂದು ತೋರಲಿಲ್ಲ. 'ಆಕಾಶವನ್ನು ನೋಡಲು ನೂಕುನುಗ್ಗಲೇಕೆ ?' ಎಂಬಂತೆ ಸರ್ವಲೋಕೇಶ್ವರನಾದ ಸ್ವಾಮಿಯನ್ನು ಸಕಲರೂ ನೋಡಿ ಆನಂದಿಸಬಾರದೇಕೆ?' ಎಂಬ ಮನೋಭಾವದಿಂದ ಗೋಪನ್ನನು ಆ ಸಾಧುವು ದೇವತಾದರ್ಶನ ಮಾಡುವ ವಿಷಯದಲ್ಲಿ ಸಹಾನುಭೂತಿಯುಳ್ಳವನಾಗಿದ್ದನು. ಅಲ್ಲದೆ ಆ ಸಾಧುವಿನ ಮುಖದಲ್ಲಿ ಪ್ರಕಾಶಿಸುತ್ತಿದ್ದ ದಿವ್ಯ ಕಳೆಯೂ ಆತನ ಭವ್ಯ ಆಕಾರವೂ, ಎಂತಹ ನಾಸ್ತಿಕನ ಹೃದಯದಲ್ಲೂ ಭಗವದ್ಭಕ್ತಿಯನ್ನು ಹುಟ್ಟಿಸಿ, ಆಸ್ತಿಕನನ್ನಾಗಿ ಮಾಡುವಂತೆ ಇದ್ದುದರಿಂದ ಗೋಪನ್ನನು ಸ್ವಾಭಾವಿಕವಾಗಿಯೇ ಆತನನ್ನು ಮಹಾನುಭಾವನೆಂದು ಗ್ರಹಿಸಿ,--'ಆತನನ್ನು ಗರ್ಭಗೃಹಕ್ಕೆ ಪ್ರವೇಶಗೊಳಿ

ಸುವುದು ಬೇಡ. ಸಕಲರೂ ಕುಳ್ಳಿರುವ ಹಜಾರದವರೆಗಾದರೂ ಆತನನ್ನು ಬರಗೊಳಿಸಬಹುದಲ್ಲವೆ?' ಎಂದು ತನ್ನವರನ್ನೊಪ್ಪಿಸಿ, ಆತನ ದೇವತಾ ದರ್ಶನಕ್ಕೆ ಅನುವುಗೊಳಿಸಿದನು. ಸಾಧುವು ಪ್ರವೇಶಿಸಿ, ದೇವತಾದರ್ಶನ ದಿಂದ ಪರಮಾನಂದಹೊಂದಿ ಮೈಮರೆತು, ತನ್ನ ಇಷ್ಟದೈವವಾದ ಶ್ರೀರಾ ಮನನ್ನು ಮನೋಹರವಾದ ಗೀತೆಗಳಿಂದ ಕೀರ್ತಿಸತೊಡಗಿದನು. ಅಷ್ಟ ರೊಳಗಾಗಿ ಈ ಸಂಗತಿಯು ಮಹಾ ನಿಷ್ಠುರನೂ, ಕಠಿಣಾತ್ಮನೂ ಆದ ಒಬ್ಬ ಧರ್ಮಾಧಿಕಾರಿಗೆ ತಿಳಿಯಬರಲು, ಅವನು ಒಡನೆ ಮಂದಿರದ ಸಮೀಪಕ್ಕೆ ಬಂದು, ಬಹು ಕಠಿನ ವಚನಗಳಿಂದ ನಿಷೇಧಿಸಿ, ದೇವತಾಸ್ತೋತ್ರ ಮಾಡು ತ್ತ ನಿಂತಿದ್ದ ಆ ಸಾಧುವನ್ನು ಕೈಹಿಡಿದು ಎಳೆದು ಹೊರಕ್ಕೆ ತಳ್ಳಿಬಿಟ್ಟನು. ಈ ವಿಚಾರವು ಗೋಪನ್ನನಿಗೂ ಇತರ ಕೆಲವರಿಗೂ ಮನಸ್ಸಿಗೆ ಬಹು ಪರಿ ತಾಪವನ್ನು ಉಂಟುಮಾಡಿತಾದರೂ, ಅವರಾರೂ ಆ ಧೂರ್ತನಾದ ಧರ್ಮಾ ಧಿಕಾರಿಗೆ ವಿರುದ್ಧವಾಗಿ ಮಾತನಾಡಲು ಸಾಧ್ಯವಿರಲಿಲ್ಲ. ಆದುದರಿಂದ ಎಲ್ಲ ರೂ ಖಿನ್ನ ಮನಸ್ಕರಾಗಿ ಆತನ ನಿಷ್ಠುರತೆಗಾಗಿ ಒಳಗೊಳಗೇ ಶಪಿಸಿಕೊಳ್ಳು ತ್ತಾ ಸುಮ್ಮನಿದ್ದರು.

ಆದರೆ ಅಷ್ಟರಲ್ಲಿ ಒಂದು ವಿಶೇಷ ವಿಚಾರ ನಡೆಯಿತು. ಹಾಗೆ ಆ ಮಹಮ್ಮದೀಯ ಸಾಧುವನ್ನು ಮಂದಿರದಿಂದ ಹೊರಡಿಸಿದ ತರುವಾಯ ಆ ಧೂರ್ತ ಧರ್ಮಾಧಿಕಾರಿಯು, ಅವನ ಪ್ರವೇಶದಿಂದ ಮಂದಿರವು ಅಪವಿತ್ರ ವಾಯಿತೆಂದೂ ಪುನಃ ಸಮ್ಮಾರ್ಜನೆ ಮಾಡಬೇಕೆಂದೂ, ಕೂಗಾಡುತ್ತ ಒಳ ಹೊಕ್ಕು ಅಲ್ಲಲ್ಲಿ ಸುತ್ತಾಡಿಕೊಂಡು, ಅಕಸ್ಮಾತ್ತಾಗಿ ಗರ್ಭಗುಡಿಯ ಕಡೆ ತಿರುಗಿ ದೇವತಾ ವಿಗ್ರಹಗಳಿದ್ದ ಕಡೆಗೆ ನೋಡಿದನು. ಆದರೆ ಇದೇನಾಶ್ಚರ್ಯ! ಅಲ್ಲಿ ವಿರಾಜಮಾನವಾಗಿದ್ದ ಸೀತಾಲಕ್ಷ್ಮಣ ಸಮೇತ ವಾದ ಶ್ರೀರಾಮ ವಿಗ್ರಹವೇ ಮಾಯವಾಗಿದ್ದಿತು. ಆ ಅದ್ಭುತವನ್ನು ಕಂಡು ಆತನು ಸರ್ವನಾಶವಾಯಿತೆಂದು ಕೂಗುತ್ತ—'ಅಯ್ಯೋ, ಎಲ್ಲಿಹೋದು ವು? ವಿಗ್ರಹಗಳನ್ನಾರು ಕದ್ದರು! ಇದೇನನ್ಯಾಯ?' ಎಂದು ಮುಂತಾಗಿ ಕೂಗಾಡುತ್ತ, ಎಲ್ಲರಮೇಲೂ ಸಿಡಿಮಿಡಿಗೊಳ್ಳುತ್ತ, ಏನುಮಾಡಲೂ ತೋರದೆ,—'ಆ ಪರದೇಶೀ ಮ್ಲೇಂಛನು ದೇವಮಂದಿರವನ್ನು ಹೊಕ್ಕುದರಿಂದ ಇಂತಹ ಅನಾಹುತವಾಯಿತೆಂದು ರೇಗಿ ಆತನನ್ನು ಒಳ ಹೊಗಿಸಿದ ಎಲ್ಲರ

ನ್ನೂ ದೋಷಾರೋಪಣೆಗೆ ಗುರಿಮಾಡಿ, ನಿಷ್ಠುರ ವಾಕ್ಯಗಳಿಂದ ನಿಂದಿಸು ತ್ತಿದ್ದನು. ಆಗ ಗೋಪನ್ನನೂ, ಆತನಂತೆಯೇ ಕ್ಷಮಾಗುಣ ಶೀಲರಾದ ಇತರ ಕೆಲವರೂ ಮುಂದೆ ಬಂದು,-'ಆತನು ಜಾತಿಯಲ್ಲಿ ಮುಸಲ್ಮಾನನಾ ದರೂ ಶ್ರೀರಾಮ ಭಕ್ತನಾಗಿದ್ದಾನೆ. ಮುಖದಲ್ಲಿ ದಿವ್ಯ ತೇಜಸ್ಸಿದೆ. ಆತ ನಿಗೆ ಅವಮಾನಗೊಳಿಸಿ, ಆತನ ಭಗವತ್ಸಂಕೀರ್ತನೆಗೆ ವಿಘ್ನವನ್ನುಂಟುಮಾ ಡಿದ ಕಾರಣದಿಂದಲೇ ದೇವತಾವಿಗ್ರಹಗಳು ಮರೆಯಾಗಿವೆ. ಈಗಲೂ ಸಾಧುವರ್ಯನಾದ ಆತನನ್ನು ಆದರಿಸಿ ಕರೆತಂದು, ಮರ್ಯಾದೆಯಿಂದ ಮಂದಿರ ಪ್ರವೇಶಗೊಳಿಸಿದರೆ, ಆತನ ಪ್ರಭಾವದಿಂದ ದೇವಮೂರ್ತಿಗಳು ದೃಷ್ಟಿಗೋಚರವಾಗದಿರಲಾರದು. ಸಜ್ಜನಾಪಮಾನವನ್ನು ದೇವರು ಎಂ ದಿಗೂ ಸಹಿಸಲಾರನು. ಆದುದರಿಂದಲೇ ಇಂತಹ ಅನರ್ಥವು ಪ್ರಾಪ್ತವಾ ಗಿದೆ" ಎಂದು ನಯವಾಕ್ಯಗಳಿಂದ ಆ ಧೂರ್ತನಿಗೆ ತಿಳಿಯ ಹೇಳಿದರು. ಮುಂದೆ ಏನುಮಾಡಬೇಕೆಂದು ತೋರದೆ, ನಿರ್ವಿಣ್ಣನಾಗಿ ಕುಳಿತಿದ್ದ ಆತ ನು, ಅವರ ಸಲಹೆಗೆ ಪ್ರತಿ ಹೇಳಲರಿಯದೆ - 'ಹೇಗಾದರಾಗಲಿ, ಮೊದಲು ಇಲ್ಲಿಗೆ ವಿಗ್ರಹಗಳು ಬರುವಂತೆ ಮಾಡಿ' ಎಂದನು. ಗೋಪನ್ನನು, ಆ ಧರ್ಮಾಧಿಕಾರಿಯನ್ನು ಮುಂದು ಮಾಡಿಕೊಂಡು ಹೊರಟು, ಊರ ಹೊರ ಗೆ ಅಶ್ವತ್ಥ ಕಟ್ಟೆಯಮೇಲೆ ಭಗವತ್ಸಂಕೀರ್ತನೆಯಲ್ಲಿ ಮಗ್ನನಾಗಿ ಕುಳಿತಿದ್ದ ಆ ಸಾಧುವರ್ಯನನ್ನು ಸಂದರ್ಶಿಸಿ-ಆ ಧರ್ಮಾಧಿಕಾರಿಯನ್ನು ಆತನ ಪಾದ ಗಳಮೇಲೆ ಕೆಡಹಿ-ಕೃಪೆಮಾಡಿ ದೇವಮಂದಿರಕ್ಕೆ ಬಂದು ದೇವತಾ ವಿಗ್ರಹ ಗಳನ್ನು ಪ್ರಸಾದಿಸಿ ತಮ್ಮನ್ನು ಅನುಗ್ರಹಿಸಬೇಕೆಂದು ಎಲ್ಲರೂ ಬೇಡಿ ಕೊಂಡರು.

ಭಗವದ್ಭಕ್ತರಾದ ಸಾಧುಗಳು ದ್ವೇಷಭಾವವನ್ನು ಮನಸ್ಸಿನಲ್ಲಿಡು ವರೆ? ಒಡನೆ ಆತನು ಅವರೊಂದಿಗೆ ಹಿಂದಿರುಗಿ ಬಂದು ಮಂದಿರ ಪ್ರವೇಶ ಮಾಡಿ, ಹಿಂದೆ ಅರ್ಧವಾಗಿ ಬಿಟ್ಟಿದ್ದ ಕೀರ್ತನೆಯನ್ನೇ ಮುಂದರಿಸಿ ಹಾಡ ತೊಡಗಿ, ಸಕಲರಿಗೂ ದರ್ಶನವಿತ್ತು ಅನುಗ್ರಹಿಸಬೇಕೆಂದು ಸ್ವಾಮಿಯನ್ನು ಬಗೆ ಬಗೆಯಿಂದ ಪ್ರಾರ್ಥಿಸಿದನು. ಆ ಆಶ್ಚರ್ಯವನ್ನೇನೆಂದು ಬಣ್ಣಿಸ ಬಹುದು? ವಿಗ್ರಹಗಳು ಕಣ್ಮರೆಯಾಗಿ ಶೂನ್ಯಪ್ರದೇಶದಂತೆ ತೋರು ತ್ತಿದ್ದ ಆ ಗರ್ಭಗುಡಿಯಲ್ಲಿ ಒಡನೆ ಕಣ್ಣು ಕೋರೈಸಿ ಹೋಗುವಂತಹ ಒಂ

ದು ಪ್ರಕಾಶವು ತೋರಿ, ಅದೃಶ್ಯವಾಗಿದ್ದ ಶ್ರೀ ಸೀತಾಲಕ್ಷ್ಮಣ ಸಮೇತವಾದ ಶ್ರೀರಾಮ ವಿಗ್ರಹವು ದೃಷ್ಟಿಗೋಚರವಾಯಿತು. ಆ ಅದ್ಭುತವನ್ನು ಕಂಡು, ಎಲ್ಲರೂ ಪರಮಾನಂದದಿಂದ ಮಹಾಮಹಿಮಾಸ್ಪದನಾದ ಆ ಸಾಧುವರ್ಯನ ಪಾದಗಳಿಗೆ ಬಿದ್ದು ತಮ್ಮ ಅಪರಾಧಗಳನ್ನು ಕ್ಷಮಿಸಬೇಕೆಂದು ಬೇಡಿಕೊಂಡರು.

ಮಿಕ್ಕ ಎಲ್ಲರೂ-ಕಳೆದು ಹೋಗಿದ್ದು ಪುನಃ ದೊರೆತ ಆ ದೇವತಾ ವಿಗ್ರಹಗಳಿಗೆ, ನೂತನ ಪೂಜೆಪುರಸ್ಕಾರಗಳು, ಅಲಂಕಾರಗಳು, ನೈವೇದ್ಯ, ದೀಪಾರಾಧನೆ ಮಂಗಳಾರತಿಗಳು ಮುಂತಾದ ಹಲವು ಕಾರ್ಯಕಲಾಪಗಳಲ್ಲಿ ತೊಡಗಿ ಅಲ್ಲಲ್ಲಿ ತಿರುಗಾಡುತ್ತಿದ್ದರು. ಆದರೆ ಗೋಪನ್ನನನ್ನು ಆ ಕಾರ್ಯಗಳಾವುವೂ ಆಕರ್ಷಿಸಲಿಲ್ಲ. ಅಸೂಯಾಪರನಾದ ಆ ಧರ್ಮಾಧಿಕಾರಿಯು ಹೇಳಿದ್ದಂತೆ ಆ ಸಾಧುವು ಯಕ್ಷಿಣಿ ಇಂದ್ರಜಾಲಗಳನ್ನರಿತ ತಾಂತ್ರಿಕನಲ್ಲ, ಭಗವದ್ಭಕ್ತಾಗ್ರೇಸರನಾದ ಸಾಧುಶ್ರೇಷ್ಠನು ಎಂಬುದು ಆತನ ಮನಸ್ಸಿಗೆ ನಿಶ್ಚಯವಾಯಿತು. ತಾನು ಬಹು ದಿನಗಳಿಂದಲೂ, ಯೋಗ್ಯಗುರುವೊಬ್ಬಾತನು ದೊರೆಯಬೇಕೆಂದು ಮಾಡುತ್ತಿದ್ದ ಭಗವತ್ಪ್ರಾರ್ಥನೆಗೆ ಜಗದೀಶನಾದ ಶ್ರೀರಾಮಮೂರ್ತಿಯು ಸುಪ್ರೀತನಾಗಿ ತನ್ನ ಉದ್ಧಾರಕ್ಕಾಗಿಯೇ ಆ ಮಹಾತ್ಮನನ್ನು ಕಳುಹಿಸಿದ್ದಾನೆಂದು ಆತನ ಮನಸ್ಸಿಗೆ ತೋರಿತು. ಒಡನೆ ನಿಷ್ಕಳಂಕ ಮನಸ್ಕನಾಗಿ, ಆತನ ಪಾದಗಳಿಗೆ ನಮಸ್ಕರಿಸಿ— ಗುರುವರ್ಯ, ನನ್ನನ್ನು ಅನುಗ್ರಹಿಸಬೇಕು. ಭಗವನ್ಮಾಹಾತ್ಮ್ಯವನ್ನು ಬಲ್ಲ ಸಾಧುಶ್ರೇಷ್ಠನಾದ ನೀನಲ್ಲದೆ ನನ್ನನ್ನು ರಕ್ಷಿಸಲು ಮತ್ತಾರೂ ಶಕ್ತರಿಲ್ಲ' ಎಂದು ಪುನಃಪುನಃ ವಂದಿಸಿ ಪ್ರಾರ್ಥಿಸತೊಡಗಿದನು.

ಆಗಲಾ ಸಾಧುವರ್ಯನು, ಗೋಪನ್ನನಲ್ಲಿ ಕಂಡು ಬಂದ ಶ್ರದ್ಧಾಭಕ್ತಿಗಳು, ಸಾಧುಭಾವ, ಭಗವತ್ಸೇವಾಕಾಂಕ್ಷೆ, ಜ್ಞಾನತೃಷ್ಣೆ ಮುಂತಾದುವುಗಳನ್ನು ನೋಡಿ ಆತನು ನಿಶ್ಚಯವಾಗಿ ಭಕ್ತನೆಂದು ತಿಳಿದು, ಪ್ರತ್ಯೇಕವಾದ ಒಂದು ಸ್ಥಳಕ್ಕೆ ಕರೆದೊಯ್ದು-'ಗೋಪನ್ನಾ, ನೀನು ಧನ್ಯನು. ನಿನ್ನಲ್ಲಿ ಶಾಂತ್ಯಾದಿ ಗುಣಗಳು ನೆಲೆಗೊಂಡಿವೆ. ನೀನಿನ್ನು ಚಿಂತಿಸಬೇಡ. ಭಕ್ತಾಭೀಷ್ಟವರಪ್ರದಾಯಕನೂ, ಸಕಲ ಕಲ್ಯಾಣ ಗುಣೋಪೇತನೂ, ಸೀತಾನಾಥನೂ ಆದ ಶ್ರೀರಾಮಚಂದ್ರಮೂರ್ತಿಯ ದಿವ್ಯ ಪಾದಕಮಲಗ

ಳನ್ನು ಸದಾ ಧ್ಯಾನ ಮಾಡುತ್ತಿರು. ರಾಮನಾಮ ಮಂತ್ರವು ಸಾಮಾನ್ಯವಾದುದೆಂದು ತಿಳಿಯಬೇಡ. ಮಂತ್ರರಾಜವಾದ ಆ ದಿವ್ಯಮಂತ್ರ ಪಠನೆಯಿಂದ ಭವರೋಗವು ನಷ್ಟವಾಗಿ, ಮಾನವನು ತಪ್ಪದೆ ಮೋಕ್ಷ ಸಾಮ್ರಾಜ್ಯವನ್ನು ಸೂರೆಗೊಳ್ಳಬಹುದು.' ಎಂದು ನುಡಿದು, ಬಹು ರಹಸ್ಯವಾದ ಆ ಮಂತ್ರವನ್ನು ಸಾಂಪ್ರದಾಯ ರೀತಿಯಾಗಿ ಉಪದೇಶ ಮಾಡಿ, ಒಡನೆ ಆ ಸ್ಥಳದಿಂದ ಹೊರಟು, ಯಾರಿಗೂ ದೃಷ್ಟಿಗೋಚರನಾಗದೆ, ಎಲ್ಲೋ ಹೊರಟು ಹೋದನು.

ಗುರುಮುಖದಿಂದ ಶ್ರೀರಾಮ ಮಂತ್ರವನ್ನು ಉಪದೇಶ ಹೊಂದಿದ ಗೋಪನ್ನನ ಮನಸ್ಸು ಮಹದಾನಂದಪೂರ್ಣವಾಯಿತು. ಅವನ ಮನಸ್ಸಿನಲ್ಲಿ ಮುಂದೆ ಭಗವದ್ವಿಚಾರವೇ ವ್ಯಾಪಿಸಿಬಿಟ್ಟಿದ್ದುದರಿಂದ, ಮತ್ತಾವ ವಿಚಾರವೂ ಆತನ ಬಳಿ ಸುಳಿಯುವಂತೆಯೇ ಇರಲಿಲ್ಲ. ಎಲ್ಲಿ ನಿಂತರಲ್ಲಿ, ಎಲ್ಲಿ ಕುಳಿತರಲ್ಲಿ, ಶ್ರೀರಾಮನ ದಿವ್ಯಮೂರ್ತಿಯನ್ನು ಧ್ಯಾನಿಸಿಕೊಂಡು, ಮಹದಾನಂದದಿಂದ ನಾಮೋಚ್ಚಾರಣೆ ಮಾಡುತ್ತ ಇದ್ದುಬಿಡುವನು. ಯಾರೊಂದಿಗೂ ಮಾತುಕಥೆಗಳನ್ನಾಡಲೊಲ್ಲನು. ಲೌಕಿಕವಾದ ಯಾವ ಬಗೆಯ ಕೆಲಸಕಾರ್ಯಗಳ ಮೇಲೂ ಮನಸ್ಸಿಡನು. ಪೂರ್ವದಂತೆ ಸ್ವಕೀಯ ಪರಕೀಯ ಭಾವನೆಯಿಲ್ಲದೆ, ಯಾವ ಪರೋಪಕಾರ ಕಾರ್ಯವೊದರೂ ಮುಂದೆ ನುಗ್ಗಿ ಹೋಗುತಿದ್ದ, ಗೋಪನ್ನನು ದಿನದಿನಕ್ಕೆ ಆ ಬಗೆಯ ಯಾವ ಕಾರ್ಯದಲ್ಲೂ ಅಪೇಕ್ಷೆಯಿಲ್ಲದೆ, ಸದಾ ಏಕಾಂಗಿಯಾಗಿರಲು ಇಚ್ಛಿಸುತ್ತಾ, ಹಾಗೆ ಒಬ್ಬನೇ ಇದ್ದಾಗಲೆಲ್ಲ ಬೇರೊಂದು ಯೋಚನೆಯೇ ಇಲ್ಲದೆ, ರಾಮಧ್ಯಾನ ರಾಮನಾಮ ಜಪ ಈ ಎರಡು ಕಾರ್ಯಗಳಲ್ಲೇ ನಿರತನಾಗಿದ್ದುಬಿಟ್ಟನು.

ಹೀಗೆ ಮನೆಬಾಗಿಲುಗಳನ್ನೂ, ಊಟ ಉಡಿಗೆಗಳನ್ನೂ ಅಪೇಕ್ಷಿಸದೆ, ಸದಾ ರಾಮನಾಮಜಪ ರಾಮರೂಪ ಧ್ಯಾನ ಇವುಗಳಲ್ಲೇ ಮಗ್ನನಾಗಿ, ಕೇವಲ ಪರತಂತ್ರನಂತೆ ಕಾಲಯಾಪನೆ ಮಾಡುತ್ತಿದ್ದ ಗೋಪನ್ನನನ್ನು ಕಂಡು ಆ ಗ್ರಾಮವಾಸೀಜನರು, ಆತನಿಗೆ ಹುಚ್ಚು ಹಿಡಿದಿದೆಯೆಂದುಕೊಂಡರು. ಮತ್ತೆ ಕೆಲವರು, ತಂದೆ ತಾಯಿಗಳು ಹೋಗಿ ಏಕಾಂಗಿಯಾಗಿಬಿಟ್ಟುದರಿಂದ ಜೀವಿತದಲ್ಲಿ ನಿರಾಶೆ ಹುಟ್ಟಿ ಹೀಗೆ ಆಗಿದ್ದಾನೆಂದೂ, ವಿವಾಹ

ವಾದರೆ ಪತ್ನಿಯ ಮುಖದರ್ಶನದಿಂದ ಈ ಭ್ರಾಂತಿಗಳು ನೀಗಿಹೋಗುವು ದೆಂದೂ ಊಹಿಸಿದರು. ಇದೇ ಸಮಯವೆಂದು ಸಾಧಿಸಿಕೊಂಡಿದ್ದ ಕಾಪಟ್ಯ ಸ್ವಭಾವದ ಬೇರೆ ಕೆಲವರು ಲೌಕಿಕ ವಿಚಾರಗಳಲ್ಲಿ ಲೇಶಮಾತ್ರವೂ ಗಮನವಿಡದೆ ಸದಾ ಭಗವಧ್ಯಾನ ತತ್ಪರನಾಗಿರುತ್ತಿದ್ದ ಆತನನ್ನು, ಬಗೆ ಬಗೆಯಿಂದ ನಂಬಿಸಿ ಮೋಸಗೊಳಿಸಿ, ಕ್ರಮ ಕ್ರಮವಾಗಿ ಆತನ ತಂದೆಯ ಕಾಲದ ಹೊಲಗದ್ದೆ ತೋಟಗಳು, ಮನೆ ವಸ್ತ್ರ ಒಡವೆಗಳು ಮುಂತಾದ ಸಮಸ್ತವನ್ನೂ ಅಪಹರಿಸಿಬಿಟ್ಟರು. ಹೀಗೆ ಗೋಪನ್ನನಿಗೆ ಆ ಸಾಧುವಿನಿಂದ ಮಂತ್ರೋಪದೇಶವಾದ ಸ್ವಲ್ಪಕಾಲಗಳೊಳಗಾಗಿಯೇ ಆತನ ಪಿತ್ರಾರ್ಜಿತವಾದ ಸಮಸ್ತ ಆಸ್ತಿಯೂ ಪರಾಧೀನವಾಗಿ, ಆತನು ನಿಲ್ಲಲು ನೆರಳಿಲ್ಲದಂತೆ, ತನ್ನದೆಂಬ ಅಂಗೈಯಗಲದ ಭೂಮಿಯಿಲ್ಲದಂತೆ ಶುದ್ಧ ಪರದೇಶಿಯಾದನು.

ಆದರೆ ಆ ಸ್ಥಿತಿಯು ಆತನ ಚಿತ್ತವೃತ್ತಿಯನ್ನು ಯಾವ ಬಗೆಯಿಂದಲೂ ವ್ಯತ್ಯಾಸಗೊಳಿಸಲಿಲ್ಲ. ಗೋಪನ್ನನು ಎಂದಿನಂತೆ ನಿಶ್ಚಿಂತನಾಗಿಯೇ ಇದ್ದು, ಎಲ್ಲಿ ಯಾರಮನೆಯಲ್ಲಿ ಆಹಾರ ದೊರೆತರ ಅಷ್ಟರಿಂದಲೇ ತೃಪ್ತನಾಗುತ್ತ, ಎಲ್ಲಿ ಎಡೆ ದೊರೆತರೆ ಅಲ್ಲಿ ಮಲಗಿ ನಿದ್ರಿಸುತ್ತಾ ತನ್ನಮೇಲೆ ತನ್ನ ಇಷ್ಟದೈವವಾದ ಶ್ರೀರಾಮಮೂರ್ತಿಗೆ ಎಂದಿಗೆ ದಯೆಯುಂಟಾಗುವುದೋ, ಎಂದಿಗೆ ತನ್ನ ಜನ್ಮಸಾರ್ಥಕ್ಯದ ಮಾರ್ಗವು ಗೋಚರಿಸುವುದೋ ಎಂದು ಕೇವಲ ಭಗವತ್ಪರ ಚಿತ್ತವೃತ್ತಿಯಲ್ಲೇ ಮಗ್ನನಾಗಿ ಇದ್ದುಬಿಟ್ಟನು.

ಗೋಪನ್ನನು ಹೀಗೆ ಭಗವದ್ಭಾವನಾಮಯ ಚಿತ್ತವೃತ್ತಿಯಿಂದ, ಇತರ ಯಾವ ಲೌಕಿಕ ವಿಚಾರವನ್ನೂ ಲಕ್ಷ್ಯಕ್ಕೆ ತಾರದೆ ಇದ್ದುಬಿಟ್ಟನಾದರೂ, ಆತನ ತಂದೆಯ ಕಾಲದಿಂದಲೂ ಅವರ ಮನೆತನದ ಸ್ಥಿತಿಗತಿಗಳನ್ನು ತಿಳಿದಿದ್ದ ಲಿಂಗನಮಂತ್ರಿಯ ಆಪ್ತಸ್ನೇಹಿತರು ಕೆಲವರಿಗೆ, ಆತನ ಸ್ಥಿತಿಯು ವಿಶೇಷ ಪರಿತಾಪವನ್ನುಂಟುಮಾಡಿತು. ಅವರು ತಮ್ಮ ಮಿತ್ರನ ಮಗನಾದ ಆ ಗೋಪನ್ನನನ್ನು ಹೇಗಾದರೂ ಉತ್ತಮಸ್ಥಿತಿಗೆ ತಂದು, ಅವನೂ ನಾಲ್ಕುಮಂದಿ ಪ್ರಾಪಂಚಿಕರಂತೆ ಇರಲು ತಕ್ಕ ಪ್ರಯತ್ನಮಾಡಿ, ತನ್ಮೂಲಕ ಲಿಂಗನ ಮಂತ್ರಿಯ ವಂಶವು ಬೆಳೆಯುವಂತೆ ಅನುಕೂಲಪಡಿಸ

ಬೇಕೆಂದೂ ಅದಕ್ಕಾಗಿ ಏನು ಮಾಡಬಹುದೆಂದೂ ಯೋಚಿಸಲಾರಂಭಿಸಿದರು. ಲಿಂಗನ ಮಂತ್ರಿಯ ಭಾವಮೈದುನರಾದ ಅಕ್ಕನ್ನ ಮಾದನ್ನರೆಂಬ ಮಂತ್ರಿಗಳು ಗೋಲ್ಕೊಂಡ ರಾಜ್ಯದಲ್ಲಿ ಮಂತ್ರಿಗಳಾಗಿ, ಸುಪ್ರಸಿದ್ಧರಾಗಿದ್ದರೆಂದು ಈ ಮೊದಲೇ ಹೇಳಿದೆಯಲ್ಲವೆ! ಆ ಅಕ್ಕನ್ನ ಮಾದನ್ನರಿಗೆ ಅವರ ಸೋದರಳಿಯನಾದ ಈತನ ಸ್ಥಿತಿಗತಿಗಳನ್ನು ತಿಳಿಸಿ, ಸಜ್ಜನನಾದ ಆತನ ಕೈಹಿಡಿದು ಊರ್ಜಿತಸ್ಥಿತಿಗೆ ತಂದು ಲಿಂಗನ ಮಂತ್ರಿಯ ವಂಶವು ಬೆಳೆಯುವಂತೆ ಮಾಡಬೇಕೆಂದು ಅವರನ್ನು ಪ್ರಾರ್ಥಿಸಬೇಕೆಂದು ನಿರ್ಧರಿಸಿದರು. ತದನುಸಾರವಾಗಿಯೇ ಬುದ್ಧಿಶಾಲಿಯಾದ ಒಬ್ಬ ಮನುಷ್ಯನನ್ನು ಅವರಬಳಿಗೆ ಕಳುಹಿಸಿ, ಲಿಂಗನ ಮಂತ್ರಿ ಮತ್ತು ಕಾಮಮ್ಮ ಇವರ ಮರಣವಾರ್ತೆಯನ್ನೂ ಅವರ ಮಗನಾದ ಗೋಪನ್ನನ ಪ್ರಸ್ತುತ ಸ್ಥಿತಿಯನ್ನೂ, ಆತನ ಮೂಲಕ ಅವರಿಗೆ ತಿಳಿಸಿದರು. ತಮ್ಮ ಅಕ್ಕ ಭಾವಂದಿರ ಮರಣವಾರ್ತೆಯನ್ನು ಕೇಳಿದ ಆ ಮಂತ್ರಿಗಳು ಬಹು ಸಂತಾಪಪಟ್ಟು, ಆ ದೂರದೇಶದಲ್ಲಿ ಏಕಾಂಗಿಯಾಗಿ ಕಷ್ಟಪಡುತ್ತಿರುವ ಗೋಪನ್ನನನ್ನು ತಮ್ಮ ಬಳಿಗೆ ಕಳುಹಿಸಿಕೊಡಬೇಕೆಂದೂ, ಆತನ ಯೋಗಕ್ಷೇಮವನ್ನು ತಾವು ನೋಡಿಕೊಂಡು ಲಿಂಗನ ಮಂತ್ರಿಯ ಹೆಸರನ್ನು ಉಳಿಸಲು ತಕ್ಕ ಪ್ರಯತ್ನಮಾಡುವೆವೆಂದೂ, ಬಂದಿದ್ದ ಆ ಮನುಷ್ಯನ ಮೂಲಕವೇ ಸಂದೇಶವನ್ನು ಕಳುಹಿಸಿದರು.

ಜನ್ಮಸ್ಥಳವಾದ ಆ ಗ್ರಾಮವನ್ನು ಬಿಟ್ಟು ಹೋಗಲು ಮನಸ್ಸು ಒಪ್ಪದಿದ್ದರೂ, ಗ್ರಾಮಮುಖ್ಯಸ್ಥರ ಸಲಹೆಯನ್ನು ಮೀರಲಾರದೆ, ಆ ಸಂದೇಶವನ್ನು ತಂದ ಬ್ರಾಹ್ಮಣನೊಡನೆಯೇ ಹೊರಟು ಗೋಪನ್ನನು, ತಮ್ಮ ಸೋದರಮಾವಂದಿರ ಮನೆಯನ್ನು ಸೇರಿದನು. ಬಹು ದಿನಗಳಿಂದಲೂ ತಮ್ಮ ರಾಜಕೀಯ ಕೆಲಸಕಾರ್ಯಗಳ ಗಲಭೆಯಲ್ಲಿ, ತಮ್ಮ ಅಕ್ಕ ಮತ್ತು ಭಾವಂದಿರ ವಿಚಾರವನ್ನೇ ಜ್ಞಾಪಿಸಿಕೊಳ್ಳದ ತಮ್ಮ ಲೋಪಕ್ಕಾಗಿ ಅವರೂ ಬಹಳವಾಗಿ ಮರುಗಿದರು. ಅವರ ಮರಣಕ್ಕಾಗಿ ವ್ಯಥೆಪಟ್ಟರು.–'ಅವರನ್ನು ಜ್ಞಾಪಿಸಲು ನೀನಾದರೂ ಉಳಿದು, ನಮಗೆ ದರ್ಶನಕೊಟ್ಟೆಯಲ್ಲಾ!' ಎಂದು ಆದರಪೂರ್ವಕ ನುಡಿದು,–'ಮುಂದೆ ಎಲ್ಲಿಗೂ ಹೋಗದೆ, ಇಲ್ಲೇ ನಮ್ಮ ಮನೆಯಲ್ಲೇ ಇದ್ದುಬಿಡು." ಎಂದು ಹೇಳಿದರು.

ಸ್ವಾಭಾವಿಕವಾಗಿಯೇ ಸರಳಸ್ವಭಾವದ ಗೋಪಣ್ಣನು, ತನಗೆ ಹಿರಿಯರೂ, ಹಿತಚಿಂತಕರೂ ಆದ ಆ ಮಂತ್ರಿಪುಂಗವರ ಮಾತನ್ನು ತೆಗೆದು ಹಾಕಲಾರದೆ, ಅವರ ಸಲಹೆಗೆ ಒಪ್ಪಿ, ಅಲ್ಲೇ ನಿಲ್ಲಲು ಮನಸ್ಸು ಮಾಡಿದನು. ಕೆಲವು ದಿನಗಳೊಳಗಾಗಿಯೇ, ಗೋಪಣ್ಣನ ಸದ್ಗುಣ ಸದಾಚರಣೆಗಳೂ, ವಿದ್ಯಾವೈದುಷ್ಯಗಳೂ, ವಿನಯ ವಿಧೇಯತೆಗಳೂ, ಭಗವದ್ಭಕ್ತಿಯೂ ಪ್ರಕಾಶಕ್ಕೆ ಬಂದು, ಆ ಪ್ರಾಜ್ಞಮಂತ್ರಿಗಳ ಮೆಚ್ಚುಗೆಯನ್ನು ಪಡೆದುವು. ಅಕ್ಕಣ್ಣ ಮಾದಣ್ಣರಿಬ್ಬರೂ ಗೋಪಣ್ಣನ ನಯ ನಡತೆಗಳಿಗಾಗಿ ಅತ್ಯಂತ ತೃಪ್ತಿಪಟ್ಟುಕೊಂಡರು. ಮುಂದೆ ಯಥಾಕಾಲದಲ್ಲಿ, ವಿವಾಹ ಯೋಗ್ಯಳಾಗಿದ್ದ ಮಾದಣ್ಣನ ಮಗಳನ್ನು ಕೊಟ್ಟು, ಗೋಪಣ್ಣನಿಗೆ ವಿವಾಹ ಮಹೋತ್ಸವವನ್ನೂ ನೆರವೇರಿಸಿದರು. ತರುವಾಯ ಕೆಲಕಾಲ ಗೋಪಣ್ಣನು ಮಾವನ ಮನೆಯಲ್ಲೇ ವಾಸಿಸಿಕೊಂಡಿದ್ದನು.

ನೆಲಕೊಂಡ ಪಲ್ಲಿಯಲ್ಲಿದ್ದಂತೆ ಏಕಾಂಗಿಯಾಗಿಲ್ಲದೆ, ಹಿರಿಯರ ಮೇಲ್ವಿಚಾರಣೆಗೊಳಪಟ್ಟು ಗೌರವನೀಯವಾದ ಸ್ಥಳದಲ್ಲಿ ವಾಸಿಸುತ್ತಿದ್ದುದರಿಂದ ಗೋಪಣ್ಣನು, ಭಾವೋದ್ರೇಕದಿಂದ ಮನಬಂದಂತೆ ನಡೆಯಲು ಅಷ್ಟು ಮಟ್ಟಿನ ಅವಕಾಶವಿರಲಿಲ್ಲ. ಆದರೂ, ಸಾಧುವಿನ ಉಪದೇಶದಿಂದ ಆತನ ಮಾನಸಕ್ಷೇತ್ರದಲ್ಲಿ ಬೇರೂರಿದ್ದ ಭಗವದ್ಭಕ್ತಿ ಸಸಿಯು ಮ್ಲಾನವಾಗದೆ ನಿದಾನವಾಗಿ ಬೆಳಯುತ್ತಲೇ ಇದ್ದಿತು. ನೂತನಪರಿಸ್ಥಿತಿಗೊಳಪಟ್ಟ ಗೋಪಣ್ಣನು, ತನ್ನ ಮಾವಂದಿರ ಸಲಹೆಯನ್ನು ಅನುಸರಿಸಿ, ಆಗಾಗ ರಾಜಾಸ್ಥಾನವನ್ನೂ ಪ್ರವೇಶಿಸಿ, ಹಲವು ರಾಜಕೀಯ ಕಾರ್ಯಗಳ ಅನುಭವವನ್ನೂ ಪಡೆಯುತ್ತಿದ್ದನು.

ಹಾಗೆ ಕೆಲವುಕಾಲ ಕಳೆಯಲು, ಅಕ್ಕಣ್ಣ ಮಾದಣ್ಣರು ಗೋಪಣ್ಣನನ್ನು ಕರೆದೊಯ್ದು ತಾನೀಷಾನಿಗೆ ಭೇಟಿ (ದರ್ಶನ) ಮಾಡಿಸಿದರು. ಗೋಪಣ್ಣನು ಆಗಿನಕಾಲದ ಮಹಮ್ಮದೀಯ ರಾಜಾಸ್ಥಾನಗಳಲ್ಲಿ ಪದ್ಧತಿಯಲ್ಲಿದ್ದಂತೆ ಸುಲ್ತಾನನ ಸಮ್ಮುಖದಲ್ಲಿ ನಡುವಿಗೆ ಅಂಗವಸ್ತ್ರವನ್ನು ಕಟ್ಟಿಕೊಂಡು, ನೆಲಮುಟ್ಟಿ 'ಸಲ್ಲಾಂ' ಮಾಡಿ, ರತ್ನಖಚಿತವಾದ ಆತನು ಕುಳಿತಿದ್ದ ತಿವಾಸಿಯನ್ನು ಮುತ್ತಿಟ್ಟುಕೊಂಡು, ಭಯಭಕ್ತಿಗಳಿಂದ ದೂರದಲ್ಲಿ ನಿಂತನು. ತಾನೀಷಾನು ಸಮೀಪದಲ್ಲೇ ಕುಳಿತಿದ್ದ ಅಕ್ಕಣ್ಣ ಮಾದಣ್ಣರನ್ನು ಕುರಿತು

ಆತನ ಪರಿಚಯವನ್ನು ಕೇಳಲು, ಅವರು ಆತನು ತಮ್ಮ ಸೋದರಳಿಯನೆಂದೂ, ಮಾತಾಪಿತೃಗಳು ನಷ್ಟವಾದ ತರುವಾಯ ಸ್ವಸ್ಥಳವನ್ನು ಬಿಟ್ಟು ತಮ್ಮ ಬಳಿಗೆ ಬಂದು ಸೇರಿದನೆಂದೂ ಹೇಳಿ, ಸುಲ್ತಾನರು ತಮಗೆ ಆಶ್ರಯಕೊಟ್ಟು ಕಾಪಾಡುತ್ತಿರುವಂತೆಯೇ ಆತನನ್ನೂ ಕೈಹಿಡಿದು ಉದ್ಧರಿಸಬೇಕೆಂದು ಪ್ರಾರ್ಥಿಸಿದರು.

ಸುಲ್ತಾನನು ಅತ್ಯುತ್ಸಾಹಗೊಂಡು-'ಇದೇನು ಮಂತ್ರಿಪುಂಗವರೇ ಈತನು ನಿಮ್ಮ ಕುಟುಂಬಕ್ಕೆ ಸೇರಿದಾತನೆಂದಮೇಲೆ, ರಾಜಾಸ್ಥಾನದಲ್ಲಿ ಈತನಿಗೂ ಆಶ್ರಯಕೊಡಬೇಕೆಂದು ನೀವು ಪ್ರತ್ಯೇಕವಾಗಿ ನನಗೆ ಹೇಳಬೇಕೇ ? ಅಗತ್ಯವಾಗಿ ಈತನನ್ನೂ ನಮ್ಮ ರಾಜ್ಯಾಂಗದಲ್ಲಿ ಸೇರಿಸಿಕೊಳ್ಳೋಣ ! ನೋಡಿ, ವಿಚಾರಮಾಡಿ, ಎಲ್ಲಿ ಯಾವ ಉದ್ಯೋಗ ಖಾಲಿ ಇದೆ ಎಂಬುದನ್ನು ! ಆ ಕೆಲಸಕ್ಕೆ ಈತನಿಗೆ ಈ ಕ್ಷಣದಲ್ಲೇ ಹುಕುಂ (ಅಪ್ಪಣೆ) ಕೊಟ್ಟು ಕಳುಹಿಸೋಣ !' ಎಂದು ನುಡಿದನು.

ಒಡನೆ, ಅಕ್ಕನ್ನಮಾದನ್ನರು - 'ಪ್ರಭೋ, ತಮ್ಮ ಆಧಿಪತ್ಯಕ್ಕೊಳಪಟ್ಟ ಭದ್ರಾಚಲವೆಂಬೊಂದು ತಹಶೀಲಿಗೆ (ತಾಲ್ಲೂಕಿಗೆ) ಬಹು ದಿನಗಳಿಂದಲೂ ಅಧಿಕಾರಿಯಿಲ್ಲದೆ, ಅದೊಂದು ಉದ್ಯೋಗವು ಖಾಲಿ ಬಿದ್ದಿದೆ' ಎಂದರು. ಒಡನೆ ತಾನೀಶಾನು ಆ ಉದ್ಯೋಗಕ್ಕೆ ಗೋಪನ್ನನನ್ನು ನಿಯಮಿಸಿ, ಮುದ್ರೆಯುಂಗುರ, ಸಿಪಾಸೀ (ರಾಜಚಿಹ್ನೆ) ಮತ್ತು ಅಧಿಕಾರಪತ್ರ ಮುಂತಾದುವುಗಳನ್ನು ಆತನಿಗೆ ಕೊಡಿಸಿ, - 'ಗೋಪನ್ನಾ, ಭದ್ರಾಚಲ ತಹಶೀಲಿನಿಂದ ಸರ್ಕಾರಕ್ಕೆ ಬರಬೇಕಾದ ಕಂದಾಯ ಕೌಳಿಗೆಗಳನ್ನು ಪ್ರಜೆಗಳಿಂದ ವಸೂಲುಮಾಡಿ, ರವಾನಿಸುತ್ತಾ ಜಾಗ್ರತೆಯಿಂದ ರಾಜಕಾರ್ಯಗಳನ್ನು ಗಮನಿಸುತ್ತಾ ಇರಬೇಕು' ಎಂದು ಆಜ್ಞಾಪಿಸಿ ಕಳುಹಿಸಿದನು. ಗೋಪನ್ನನು ತನ್ನಮೇಲೆ ಈ ಬಗೆಯಿಂದ ಶ್ರೀರಾಮಾನುಗ್ರಹವಾದುದಕ್ಕಾಗಿ ಪರಮ ಸಂತುಷ್ಟನಾಗಿ, ಸುಲ್ತಾನನಿಗೆ ಕೃತಜ್ಞತೆಯಿಂದ ವಂದಿಸಿ, ಮನೆಯಲ್ಲಿ ಅತ್ತೆಮಾವಂದಿರ ಅಜ್ಞೆಯನ್ನು ಪಡೆದು, ಪತ್ನಿಯೊಂದಿಗೂ, ಚಿಕ್ಕ ವಯಸ್ಸಿನ ಏಕಮಾತ್ರ ಪುತ್ರನೊಂದಿಗೂ ಭದ್ರಾಚಲವನ್ನು ಕುರಿತು ಪ್ರಯಾಣಮಾಡಿದನು. ಗೋಪನ್ನನು ಅನ್ವರ್ಥ ರಾಮದಾಸನೇ

ಆಗಿ ಜಗತ್ಪ್ರಸಿದ್ಧನಾಗಲು ಈ ರಾಜಕೀಯ ಉದ್ಯೋಗವೇ ಹೇಗೆ ಕಾರಣ ವಾಯಿತೆಂಬುದನ್ನು, ವಾಚಕ ಮಹಾಶಯರು ಮುಂದಿನ ಕಥಾ ಭಾಗದಲ್ಲಿ ತಿಳಿಯಬಹುದು.



## ಅಧ್ಯಾಯ ೪ "ಶ್ರೀರಾಮನೇ ಸೂತ್ರಧಾರಿಯು"

ಲೋಕದಲ್ಲಿ ಒಬ್ಬನು ಸಜ್ಜನನೋ ದುರ್ಜನನೋ, ಸಾಧುವೋ ಅಸಾಧುವೋ, ದೈವಭಕ್ತನೋ ನಾಸ್ತಿಕನೋ ಎಂಬುದನ್ನು ತಿಳಿಯುವುದಕ್ಕೆ ಅವನ ಅಂತರ್ಬಾಹ್ಯ ಆಚರಣೆಗಳೂ ಗುಣಗಳೂ ಕಾರಣಗಳಾಗುವುವಲ್ಲದೆ, ದೇಹಸೌಂದರ್ಯವಲ್ಲ, ವಿದ್ಯಾಪ್ರೌಢಿಮೆಯಲ್ಲ, ವಾಕ್ಪಟುತ್ವ-ಕವಿತಾ ಸಾಮರ್ಥ್ಯಗಳಲ್ಲ, ಆಚಾರ ಶೀಲತೆಯ ಆಡಂಬರವಲ್ಲ, ವಿಶೇಷ ಧನ ಧಾನ್ಯ ಭೂಸ್ವಾಸ್ಥ್ಯಗಳನ್ನು ಗಳಿಸಿರುವಿಕೆಯೂ ಅಲ್ಲ. ಈ ಬಾಹ್ಯ ವೇಷಗಳನ್ನು ಮಾತ್ರವೇ ಗಳಿಸಿದ್ದು, ಅಂತರ್ಯದಲ್ಲಿ ಕಪಟಿಯೂ, ದುರಹಂಕಾರಿಯೂ, ಹಟಮಾರಿಯೂ, ಘಾತುಕನೂ ಆಗಿರುವವನನ್ನು ಸಹ ಸಾಮಾನ್ಯ ಲೋಕವು ದೊಡ್ಡಮನುಷ್ಯನೆಂದು ಗೌರವಿಸುವುದುಂಟು. ಹೀಗೆ ತಿಳಿಯುವುದಕ್ಕೆ ಕಾರಣವು ಗುಣಗ್ರಹಣಶೀಲತೆಯೆಂದು ಭಾವಿಸಬಾರದು; ಆದರೆ ಸ್ವಾರ್ಥಪರತೆ, ದ್ರವ್ಯಾಸೆಗಳೇ ಕಾರಣವಾಗಿರುವುವು. ಸಜ್ಜನರನ್ನು ದುರ್ಜನರಿಂದ ಪ್ರತ್ಯೇಕಿಸುವುದಕ್ಕೆ ಅವಕಾಶಗಳು ಹಲವಿರುವುವು. ಅವುಗಳಲ್ಲಿ ಪ್ರಕೃತ ಸಂದರ್ಭಕ್ಕೆ ತಕ್ಕಂತೆ ಕೇವಲ ಒಂದೇ ಒಂದನ್ನು ಮಾತ್ರ ಇಲ್ಲಿ ಉದಹರಿಸಬಹುದಾಗಿದೆ. ಸಜ್ಜನರು ತಮಗೆ ಪ್ರಾಪ್ತವಾಗುವ ಕಷ್ಟ ಸುಖಗಳೆಲ್ಲಕ್ಕೂ ದೇವರೇ ಕಾರಣನೆಂದೂ, ಆತನ ಆಜ್ಞೆಯಿಲ್ಲದೆ ಕಷ್ಟವು ಹೇಗೋ, ಸುಖವೂ ಹಾಗೆಯೇ ಪ್ರಾಪ್ತವಾಗಲಾರದೆಂದೂ ತಿಳಿದಿರುವರು. ಅಲ್ಲದೆ ದಯಾಮಯನಾದ ಭಗವಂತನು ತಮಗೆ ವಿನಾಕಾರಣ ಕಷ್ಟ ದುಃಖ ಸಂಕಟಗಳನ್ನು ಒದಗಿಸಿರಲಾರನೆಂದೂ, ತಮಗೆ ತಿಳಿಯದ ತಮ್ಮ ಯಾವುದೋ ಒಂದು ಅಪರಾಧಕ್ಕೆ ಶಿಕ್ಷಾರೂಪವಾಗಿಯೇ ಆ ಕಷ್ಟವು ಪ್ರಾಪ್ತವಾ

ಗಿದೆಯೆಂದೂ ತಿಳಿದು, ಅಂತಹ ಅಸಹನೀಯ ಕಷ್ಟದಲ್ಲಿಯೂ ಭಗವಾನ ನನ್ನು ಮರೆಯದೆ, ಸದಾ ಧ್ಯಾನಿಸುತ್ತ ಅಜ್ಞಾನಿಗಳಾದ ತಮ್ಮ ಅಪರಾಧಗಳನ್ನು ಮನ್ನಿಸಿ ಕಾಪಾಡೆಂದು ಆ ದೇವದೇವನನ್ನು ಬೇಡಿಕೊಳ್ಳುತ್ತಿರುವರು. ಒಂದುವೇಳೆ ಆ ದುಃಖವು ಪರಿಹಾರವಾಗಿ ಸುಖಸಂಪತ್ತುಗಳು ಪ್ರಾಪ್ತವಾದರೆ, ಅವೂ ಸಹ ಕಲ್ಪವೃಕ್ಷ ಸದೃಶನೂ, ಭಕ್ತಾಭಿಮಾನಿಯೂ, ಕರುಣಾಕರನೂ ಆದ ಆ ಪರಮಪುರುಷನ ಪರಮಾನುಗ್ರಹದಿಂದಲೇ ಪ್ರಾಪ್ತವಾದುವೆಂದು ತಿಳಿದು, ಕೃತಜ್ಞತೆಯಿಂದ ವಂದಿಸುವರಲ್ಲದೆ, ಸದಾ ವಿನೀತರಾಗಿಯೂ, ಶಾಂತರಾಗಿಯೂ, ಪರೋಪಕಾರ ಪರಾಯಣರಾಗಿಯೂ, ನಿಸ್ವಾರ್ಥಿಗಳಾಗಿಯೂ ಇರುವರು. ಆದರೆ ದುರ್ಜನರು, ಇವುಗಳಿಗೆ ಸರಿ ವಿರುದ್ಧಗಳಾದ ತಮ್ಮ ಗುಣನಡತೆಗಳಿಂದ, ತಾವು ಎಂಥವರೆಂಬುದನ್ನು ಸ್ಪಷ್ಟಪಡಿಸಿಕೊಳ್ಳುವರು. ತಮಗೆ ಪ್ರಾಪ್ತವಾಗುವ ಕಷ್ಟಗಳಿಗೆ ನಿಷ್ಠುರಿಯಾದ ದೈವವೇ ಕಾರಣವೆಂದು ನಂಬಿ, ಹಾಗೆ ತಮಗೆ ಒದಗಿದ ಆ ಕಷ್ಟ ದುಃಖಗಳಿಗಾಗಿ ದೈವವನ್ನು ನಿಂದಿಸುತ್ತ, ಪರರನ್ನು ದ್ವೇಷಿಸಿ, ಅಸೂಯೆಪಡುತ್ತಾ,-'ಪಾಪಿ ದೈವವು, ಲೋಕದಲ್ಲಿ ಸಕಲರನ್ನೂ ಸುಖಸಂತೋಷಗಳಲ್ಲಿಟ್ಟು ತಮ್ಮನ್ನು ಮಾತ್ರವೇ ನಿಷ್ಕಾರಣವಾಗಿ ನೀಗಲಾರದ ಆ ಸಂಕಟ ಸಮುದ್ರದಲ್ಲಿ ಮುಳುಗಿಸಿದೆ'ಯೆಂದು ಹಲವು ಬಗೆಗಳಿಂದ ಶಪಿಸುವರು. ಹೀಗಿರುವಲ್ಲಿ ಒಂದು ವೇಳೆ ಸುಖಸಂಪತ್ತುಗಳು ಪ್ರಾಪ್ತವಾದುವೆಂದರೆ, ಒಡನೆಯೇ—'ಹೋ, ನಾನು ಅಂತಹ ಪ್ರಬಲ ಪರಾಕ್ರಮಿ, ಸರಸ್ವತಿಯ ಪುರುಷಾವತಾರವೋ ಎಂಬಂತಹ ವಿದ್ಯಾನಿಧಿ, ಈ ಕಾರ್ಯಸಾಧನೆಗಾಗಿ ನಾನು ಹಾಗೆ-ಹೀಗೆ ಮಾಡಿಬಿಟ್ಟೆ; ನನ್ನ ಯುಕ್ತಿಸಾಮರ್ಥ್ಯಗಳು ಲೋಕದಲ್ಲಿ ಮತ್ತಾವನಿಗೆ ಇರುವುವು? ಈ ಐಶ್ವರ್ಯ ಧನಕನಕಗಳನ್ನೆಲ್ಲ ಸ್ವಸಾಮರ್ಥ್ಯದಿಂದ ನಾನೇ ಸಂಪಾದಿಸಿದವನು. ಪುರುಷ ಪ್ರಯತ್ನವಿಲ್ಲದೆ ಯಾವ ಕಾರ್ಯವಾದರೂ ಎಂದಾದರೂ ಆದುದುಂಟೆ?' ಎಂದು ಮುಂತಾಗಿ ಹೆಮ್ಮೆಪಟ್ಟು, ದೈವವನ್ನು ಮರೆವುದು ಮಾತ್ರವಲ್ಲದೆ, ತಮ್ಮ ಸಮಾನರು ಮತ್ತಾರೂ ಇಲ್ಲವೆಂದು ಅಹಂಕಾರ ಪಡುವರು. ಪ್ರಾಪ್ತವಾದ ಐಶ್ವರ್ಯವನ್ನು ಕೇವಲ ಸ್ವಸುಖಲೋಲುಪತೆ, ಸ್ವೋದರಪೋಷಣೆಗಳಿಗಾಗಿ ವ್ಯಯಮಾಡುವರಲ್ಲದೆ ಗುಂಜಿಮಾತ್ರವನ್ನಾದರೂ ಪರೋಪಕಾರಕ್ಕಾಗಲೀ ದೀನಾನಾಥರಿ

ಗಾಗಲೀ ಉಪಯೋಗಮಾಡರು. ಸ್ಪಷ್ಟವಾಗಿ ಕಂಡುಬರುವ ಈ ಬಗೆಯ ಗುಣನಡತೆಗಳಿಂದ ಇಂಥವನು ಸಜ್ಜನನು, ಇಂಥವನು ದುರ್ಜನನು ಎಂಬುದನ್ನು ತಿಳಿಯಬಹುದಲ್ಲವೆ? ಮಾತ್ರವಲ್ಲ, ಮನುಷ್ಯನು ತಾನು ಸಜ್ಜನನೋ ಅಥವ ದುರ್ಜನನೋ ಎಂಬುದನ್ನು ಸಹ ಈ ಗುಣನಡತೆಗಳೊಂದಿಗೆ ತನ್ನ ನಿತ್ಯದ ಆಚರಣೆಯನ್ನು ಒಪ್ಪಿಟ್ಟು ನೋಡಿಕೊಳ್ಳುವುದರಿಂದ ಗ್ರಹಿಸಲು ಸಾಧ್ಯವಿರುವುದರಲ್ಲಿ ಸಂದೇಹವೇನು ?

ಸಜ್ಜನ ಶಿರೋಮಣಿಯಾದ ಗೋಪನ್ನನು, ಕೇವಲ ಅನಾಥನಾಗಿದ್ದ ತನಗೆ ಅಂತಹ ಗೌರವನೀಯವಾದ ಪದವಿಯನ್ನು ಅನುಗ್ರಹಿಸಿದ ಶ್ರೀ ರಾಮಮೂರ್ತಿಯ ಕಾರುಣ್ಯವನ್ನು ಕುರಿತು ಮನಸ್ಸಿನಲ್ಲೇ ಅಪಾರ ಕೃತಜ್ಞತೆಯನ್ನು ಸೂಚಿಸುವ ಸ್ತೋತ್ರಗಳಿಂದ ಹೊಗಳುತ್ತಾ-' ಪ್ರಭೋ ರಾಮಭದ್ರಾ, ನಿನ್ನದಯಾಸ್ವಭಾವವನ್ನು ಪಾಮರನಾದ ನಾನು ಏನೆಂದು ವರ್ಣಿಸಲಿ? ನಿನ್ನ ಕಟಾಕ್ಷಬಲವೊಂದು ಒದಗಿದರೆ ತೃಣವು ಪರ್ವತವಾಗಲಾರದೆ-ಅಣುವು ಬ್ರಹ್ಮಾಂಡವಾಗಲಾರದೆ? ಅನಾಮಧೇಯನಾಗಿ ಎಲ್ಲೋ ಬಿದ್ದಿದ್ದ ನನಗೆ ಇಂತಹ ಮಹತ್ಪದವಿಯನ್ನು ಕೊಡಸಿದುದು ಮಾತ್ರವಲ್ಲ-ನಿನ್ನ ಪವಿತ್ರ ಸಾನ್ನಿಧ್ಯದಲ್ಲೇ ಸದಾ ಇದ್ದು ಸೇವೆಮಾಡಲು ಅನುಕೂಲವಾಗಿರುವಂತೆಯೂ ಅವಕಾಶಮಾಡಿ ಕೊಟ್ಟೆಯಲ್ಲ ? ದಯಾಶರಧಿಯಾದ ನಿನ್ನ ಕಾರುಣ್ಯಕ್ಕೆ, ದೀನನಾದ ನಾನು ಯಾವಬಗೆಯಿಂದ ಸೇವೆಮಾಡಿದರೆ ಯೋಗ್ಯವೆನ್ನಿಸೀತು ? ' ಎಂದು ಸದಾ ಭದ್ರಾದ್ರೀಶನಾದ ಶ್ರೀ ರಾಮಚಂದ್ರಮೂರ್ತಿಯ ಪಾದಕಮಲಗಳನ್ನೇ ಧ್ಯಾನಿಸುತ್ತಾ, ಪತ್ನೀ ಪುತ್ರ ಪರಿವಾರದೊಂದಿಗೆ, ಭದ್ರಾಚಲವನ್ನು ಕುರಿತು ಪ್ರಯಾಣವಾಗಿ ಬರುತ್ತಿದ್ದನು.

ದೂರದಿಂದಲೇ ಭದ್ರಾಚಲದ ದೇವಾಲಯದ ಗೋಪುರವು ಕಾಣಿಸಿತು. ಜೊತೆಗಿದ್ದ ಸೇವಕರು, -'ಅದೋ, ಅದೇ ಶ್ರೀ ರಾಮದೇವಾಲಯದ ಗೋಪುರ ' ವೆಂದು ಹೇಳಿ ತೋರಿಸಿದರು. ಆ ಮಾತನ್ನು ಕೇಳಿದೊಡನೆಯೇ, ಇಷ್ಟುಹೊತ್ತೂ ಕೃತಜ್ಞತೆಯಿಂದ ಭಾವನಾಮಯನಾಗಿ ಧ್ಯಾನಮಗ್ನನಾಗಿದ್ದ ಗೋಪನ್ನನು - 'ಆ, ಅದೇ ನಮ್ಮ ಶ್ರೀ ರಾಮಮೂರ್ತಿಯು ನೆಲೆಸಿರುವ ಆಲಯವೇ ? ಸೀತಾಲಕ್ಷ್ಮಣರು ಎಡಬಲಗಳಲ್ಲಿ ವಿನೀತರಾಗಿ ನಿಂತಿರಲು,ಮುಂದೆ ಆಂಜನೇಯನು ಪಾದಾಕ್ರಾಂತನಾಗಿ ಸೇವೆಮಾಡುತ್ತಲಿರ

ಲು, ಮಂದಸ್ಮಿತ ವದನಾರವಿಂದದಿಂದ ಕೋಟಿ ಸೂರ್ಯ ಪ್ರಭಾ ಭಾಸುರನಾಗಿ ನನ್ನ ಹೃದಯೇಶನು ನೆಲೆಸಿರುವುದು, ಅದೇ ದೇವಾಲಯದಲ್ಲಿಯೋ ?' ಎಂದು ನುಡಿಯುತ್ತಾ, ಆ ದಿಕ್ಕಿಗೆ ಸಾಷ್ಟಾಂಗ ನಮಸ್ಕಾರಮಾಡಿ ನಟ್ಟದೃಷ್ಟಿಯಿಂದ ಆ ಗೋಪುರವನ್ನೇ ನೋಡುತ್ತಾ-ಉಕ್ಕಿ ಉಕ್ಕಿಬರುವ ಭಕ್ತಿಭಾವದಿಂದ ಹೊರಟ ಆನಂದ ಬಾಷ್ಪಗಳಿಂದ ಕಣ್ಣುಗಳು ಮಂಜಾಗುತ್ತಿರಲು ಮೇಲೆಮೇಲೆ ಒರಸಿ ಕೊಳ್ಳುತ್ತಾ-' ಅಗೋ ಅಲ್ಲೇ ನಮ್ಮ ರಾಮಮೂರ್ತಿಯಿರುವುದು. ಅದೋ ಗೋಪುರ, ಅದೇ ಪ್ರಾಕಾರವಲ್ಲವೆ ! ಓ, ಈ ಕಡೆ ಕಾಣುವುದು ಉತ್ತರದಿಕ್ಕಿನ ಹೆಬ್ಬಾಗಿಲು ' ಎಂದು ಮುಂತಾಗಿ ಹೇಳಿಕೊಳ್ಳುತ್ತಾ, ಮಹದಾನಂದದಿಂದ ಮುಂದೆ ವಾಹನಾರೂಢನಾಗಿ ಪ್ರಯಾಣಮಾಡಲಿಚ್ಛಿಸದೆ, ನಡೆದುಕೊಂಡೇ ಹೊರಟನು. ಅವಿಚ್ಛಿನ್ನವಾಗಿ ರಾಮ ಭಜನೆಮಾಡಿಕೊಳ್ಳುತ್ತಾ, ಆಗಾಗ ಆ ದೇವಸ್ಥಾನವಿರುವ ದಿಕ್ಕಿಗೆ ದೀರ್ಘದಂಡ ನಮಸ್ಕಾರಮಾಡುತ್ತ, ಎಂತೂ ಭದ್ರಾಚಲ ಗ್ರಾಮದ ಸಮೀಪಕ್ಕೆ ಪರಿವಾರದೊಂದಿಗೆ ಬಂದು ಸೇರಿದನು.

' ಗೋಪನ್ನನವರಿಗೆ ಭದ್ರಾಚಲ ತಹಶೀಲಿನ ಅಧಿಕಾರವು ಸುಲ್ತಾನರಿಂದ ದೊರೆತಿದೆ,-ಅವರು ಪತ್ನೀಪರಿವಾರ ಸಮೇತರಾಗಿ ಪ್ರಯಾಣವಾಗಿ ಬರುತ್ತಿದ್ದಾರೆ ' ಎಂಬ ವಾರ್ತೆಯನ್ನು ರಾಜದೂತರು ಈ ಮೊದಲೇ ಭದ್ರಾಚಲ ಗ್ರಾಮಸ್ಥರಿಗೆ ತಿಳಿಸಿದ್ದುದರಿಂದ, ಅವರು ತಮ್ಮ ಗ್ರಾಮವನ್ನೆಲ್ಲಾ ಶುದ್ಧಿಗೊಳಿಸಿ, ಮಾರ್ಗಗಳನ್ನು ಜಲಸೇಚನೆ, ತಳಿರ್ದೋರಣ ಕದಳೀಸ್ತಂಭ ಮುಂತಾದುವುಗಳಿಂದ ಅಲಂಕರಿಸಿ, ತಾವೂ ದಿವ್ಯಾವಸ್ತ್ರಾಭರಣಭೂಷಿತರಾಗಿ, ಫಲ ತಾಂಬೂಲಗಳೊಂದಿಗೆ ಅವರನ್ನು ಎದುರುಗೊಳ್ಳಲು ಸಿದ್ಧರಾಗಿ ನಡೆದು ಬಂದರು. ಗ್ರಾಮದ ಬಹಿರ್ಭಾಗದಲ್ಲಿ, ಆ ಸಕಲರೂ ಗೋಪನ್ನನಿಗೆ ದಂಡವತ್ಪ್ರಣಾಮಮಾಡಿ, ತಾನೀಷಾಯವರ ಆಜ್ಞೆಯನ್ನನುಸರಿಸಿ ಆ ಗ್ರಾಮದ ಸ್ವಾಮ್ಯವನ್ನು ಒಪ್ಪಿಸಿದರು. ತಹಶೀಲಿನ ಇತರ ಅಧಿಕಾರಿಗಳೂ ಕಾಣಿಸಿಕೊಂಡು ಭಂಡಾರದ ಮುದ್ರಿಕೆ ಮೊದಲಾದುವನ್ನು ಒಪ್ಪಿಸಿದರು. ದೇವಸ್ಥಾನದ ಧರ್ಮಾಧಿಕಾರಿ ಮುಂತಾದವರು, ಭಗವತ್ಪ್ರಸಾದವನ್ನೂ ಫಲ ಮಂತ್ರಾಕ್ಷತೆಗಳನ್ನೂ ಒಪ್ಪಿಸಿ-ರಾಜಾಶೀರ್ವಾದವನ್ನು ಸಲ್ಲಿಸಿದರು.

ಗೋಪನ್ನನು ಆ ನೌಕರರ ಸೌಜನ್ಯವನ್ನು ಕಂಡು ಪರಮಸಂತೃಪ್ತನಾಗಿ—'ಎಲ್ಲೈ ನನಗೆ ಮಾತ್ರವಲ್ಲ, ನಿಮಗೂ ಸಹ ಜೀವಿತದಲ್ಲಿ ಲೋಕಸೇವೆಗಾಗಿ ದೊರೆತಿರುವ ಈ ರಾಜಕೀಯ ಉದ್ಯೋಗವೆಂಬ ಸುಸಂಧಿಯನ್ನು ಒಂದು ಪರಮಸೌಭಾಗ್ಯವೆಂದು ತಿಳಿಯಬೇಕು. ನಮ್ಮ ಸಾಂಸಾರಿಕ ತಾಪತ್ರಯವನ್ನು ಈ ಬಗೆಯಿಂದ ಯಥಾಶಕ್ತಿ ನೀಗಿಸಿಕೊಂಡು, ನಾವುಗಳು ಸರ್ವದಾ ನಮ್ಮ ಜನ್ಮಸಾರ್ಥಕ್ಯಕ್ಕಾಗಿ ದೇವರ ಸೇವೆಯನ್ನೂ, ಅಂತೆಯೇ ಜನತಾರೂಪೀಜನಾರ್ದನನ ಸೇವೆಯನ್ನೂ ಮಾಡೋಣ!' ಎಂದು ನುಡಿದು ಅಂದಿನ ಓಲಗವನ್ನು ಸಮಾಪ್ತಿಮಾಡಿ, ಎಲ್ಲರನ್ನೂ ಅವರವರ ಸ್ಥಳಗಳಿಗೆ ಹೋಗಹೇಳಿದನು. ತಾನೂ ಒಡನೆ ಸ್ನಾನಮಾಡಿ ಶುಭ್ರವಸ್ತ್ರಧಾರಿಯಾಗಿ ಶ್ರೀರಾಮದರ್ಶನಕ್ಕಾಗಿ ದೇವಸ್ಥಾನಕ್ಕೆ ಬಂದನು. ಸೀತಾಲಕ್ಷ್ಮಣಾಂಜನೇಯ ಸಮೇತನಾದ ಶ್ರೀರಾಮಚಂದ್ರಸ್ವಾಮಿಯ ಮನೋಹರಮೂರ್ತಿಯು ಅಂದು ಗೋಪನ್ನನ ಕಣ್ಣುಗಳಿಗೆ ದರ್ಶನವಿತ್ತುದು, ಆತನನ್ನು ಆನಂದಸಾಗರದಲ್ಲಿ ಓಲಾಡಿಸಿತು. ಗೋಪನ್ನನು ಸ್ವಾಮಿಗೆ ದೀರ್ಘದಂಡ ನಮಸ್ಕಾರಮಾಡಿ, ಮನಸಾರೆ ಹೊಗಳಿ, ತನ್ನ ಹೃದಯಸ್ಥಿತನಾದ ಆ ಮೂರ್ತಿಯ ದಿವ್ಯ ಸುಂದರವಿಗ್ರಹವನ್ನೇ ಎಷ್ಟು ಬಾರಿ ನೋಡಿದರೂ ತೃಪ್ತಿಯಿಲ್ಲದೆ ಆ ಸ್ಥಳದಿಂದ ಹೊರಟು ಈಚೆಗೆ ಬರಲಾರದೆ, ಕೊನೆಗೆ ಹೇಗೋ ಹೊರಹೊರಟು, ದೇವಸ್ಥಾನಕ್ಕೆ ಪ್ರದಕ್ಷಿಣೆಯಾಗಿ ಬಂದು, ಮನೆಯನ್ನು ಸೇರಿದನು. ಪ್ರಥಮಾವೃತ್ತಿ ದೇವಾಲಯವನ್ನು ಸಂದರ್ಶಿಸಿದ ಆ ಸಂದರ್ಭದಲ್ಲೇ ದೇವಾಲಯವು ತಕ್ಕ ಮೇಲ್ವಿಚಾರಣೆಯಿಲ್ಲದೆಯೂ, ತಕ್ಕಷ್ಟು ದ್ರವ್ಯಸಹಾಯವಿಲ್ಲದೆಯೂ, ಶಿಥಿಲವಾಗತೊಡಗಿದ್ದುದನ್ನೂ, ದೇವವಿಗ್ರಹಗಳಿಗೂ ಸಾಕಾದಷ್ಟು ವಸ್ತ್ರಭೂಷಣಾದಿಗಳು ಇಲ್ಲದೆ ಇದ್ದುದನ್ನೂ ಗಮನಿಸಿ, ಗೋಪನ್ನನು—'ಭಗವದನುಗ್ರಹವೊದಗಿದರೆ, ಉತ್ತಮರೀತಿಯಿಂದ ದೇವತಾಸೇವೆಯನ್ನು ಜರುಗಿಸಿ ಧನ್ಯನಾಗಬೇಕು' ಎಂದುಕೊಂಡನು.

ಗೋಪನ್ನನು ತನ್ನ ಜನ್ಮಸ್ಥಳವನ್ನು ಬಿಟ್ಟು ಗೋಲ್ಕೊಂಡಕ್ಕೆ ಬಂದು, ಅಲ್ಲಿಂದ ಸುಲ್ತಾನನ ಫರ್ಮಾನಾಪಡೆದು ಭದ್ರಾಚಲವನ್ನು ಸೇರಿದ ಸಂದರ್ಭವನ್ನು ಕುರಿತ ಒಂದು ದಂತಕಥೆಯು ಪ್ರಚಾರದಲ್ಲಿದೆ. ಈಗ ಭದ್ರಾಚಲವಿರುವ ಗ್ರಾಮದ ಒಳಿ ತಮ್ಮಲ-ದಮ್ಮಕ್ಕ ಎಂಬೊಬ್ಬ ಭಕ್ತಳು,

ತನ್ನ ಮಗಳೊಂದಿಗೆ ವಾಸಮಾಡಿಕೊಂಡಿದ್ದಳಂತೆ! ಒಂದಾನೊಂದು ದಿನ ಶ್ರೀರಾಮಚಂದ್ರಸ್ವಾಮಿಯು ಆಕೆಯ ಕನಸಿನಲ್ಲಿ ಬಂದು-'ಎಲೌ ಭಕ್ತಳೇ, ನಾನು ಭದ್ರಗಿರಿ ಶಿಖರದಲ್ಲಿರುವ ಶ್ರೀರಾಮನು. ನೀನು ಬಹು ಭಗವದ್ಭಕ್ತಿಯುಳ್ಳವಳು. ನೀನು ನನ್ನನ್ನು ಒಂದು ಸರಿಯಾದ ಸ್ಥಳದಲ್ಲಿಟ್ಟು ಪೂಜೆ ಪುರಸ್ಕಾರಾದಿಗಳು ನಡೆಯುವುದಕ್ಕೆ ಏರ್ಪಡಿಸಿದೆಯಾದರೆ, ಮುಂದೆ ಕೆಲವು ದಿನಗಳೊಳಗಾಗಿಯೇ ನನ್ನ ಪ್ರಿಯಭಕ್ತನೊಬ್ಬನು ಈ ಗ್ರಾಮಾಧಿಕಾರಿಯಾಗಿ ಬಂದು, ನನ್ನ ದೇವಾಲಯಕ್ಕೆ ಗೋಪುರ ಪ್ರಾಕಾರಾದಿಗಳನ್ನು ನಿರ್ಮಿಸಿ ಸಕಲ ವಿಧವಾದ ಉತ್ಸವಗಳೂ ನಡೆಯಲು ಏರ್ಪಡಿಸುವನು. ಇದರಿಂದ ನಿನಗೆ ಶಾಶ್ವತಸದ್ಗತಿ ಪ್ರಾಪ್ತವಾಗುವುದು' ಎಂದು ನುಡಿದು ಅಂತರ್ಧಾನವಾದಂತೆ ಆಯಿತಂತೆ! ದಮ್ಮಕ್ಕನು ಒಡನೆ ನಿದ್ರೆ ತಿಳಿದೆದ್ದು, ತನ್ನ ಆಪ್ತರೊಂದಿಗೆ ಗಿರಿಶಿಖರದ ಬಳಿಗೆ ಹೋಗಿ ಅಲ್ಲಿ ಒಂದು ಮರದ ಪೊಟರೆಯ ಪೊದೆ ಬಳ್ಳಿಗಳ ಮಧ್ಯೆ ಹುದುಗಿದ್ದ ಸೀತಾರಾಮಲಕ್ಷ್ಮಣರ ದಿವ್ಯವಿಗ್ರಹಗಳನ್ನು ಹೊರಕ್ಕೆ ತೆಗೆಸಿ, ಎಲ್ಲರೂ ಒಂದಾಗಿ ಸಂಪ್ರೋಕ್ಷಣಾದಿಗಳನ್ನು ಮಾಡಿ, ಓಲಗ ತಾಳ ಮೇಳಗಳಿಂದ ಮಹದುತ್ಸವವನ್ನು ನಡೆಸಿ, ವಿಧ್ಯುಕ್ತವಾಗಿ ಪ್ರತಿಷ್ಠಿಸಿ, ನಿತ್ಯವೂ ಪೂಜೆನೈವೇದ್ಯಾದಿಗಳಿಗೆ ತಕ್ಕ ಏರ್ಪಾಟುಗಳನ್ನು ಗ್ರಾಮಸ್ಥರ ಸಹಾಯದಿಂದ ಮಾಡಿದ್ದಳು. ಹಾಗೆ ಕೆಲವು ದಿನಗಳು ನಡೆದ ತರುವಾಯ ಅತ್ತ ನೆಲಕೊಂಡ ಪಲ್ಲೆಯಲ್ಲಿದ್ದ ಗೋಪನ್ನನಿಗೂ ಸ್ವಪ್ನವಾಗಿ ಆತನೂ ಗೋಲ್ಕೊಂಡಕ್ಕೆ ಹೋಗಿ ಅಲ್ಲಿಂದ ಫರ್ಮಾನಾಪಡೆದು ಭದ್ರಾಚಲಕ್ಕೆ ಬಂದನು. ತರುವಾಯ, ತನ್ನ ಅಧಿಕಾರಕ್ಕೆ ಒಳಪಟ್ಟ ದ್ರವ್ಯವನ್ನು ರಾಜದ್ರವ್ಯವೆಂದು ಎಣಿಸದೆ, ಭಗವತ್ಸೇವೆಗಾಗಿ ಖರ್ಚುಮಾಡಿ, ಗುಡಿ ಗೋಪುರಗಳನ್ನು ಕಟ್ಟಿಸಿ, ಅನೇಕವಾಗಿ ವಸ್ತ್ರಾಭರಣಗಳನ್ನೊದಗಿಸಿ, ಸಕಲ ವಿಧ ಉತ್ಸವಗಳಿಗೂ ಅನುಕೂಲತೆಗಳನ್ನು ಒದಗಿಸಿಟ್ಟನು' ಎಂದು ಮುಂತಾಗಿ ಆ ಕಥೆಯು ಹೇಳುತ್ತಿದೆ.

ಗೋಪನ್ನನು, ಕೇವಲ ಆ ದೇವತಾಸೇವೆಗಾಗಿಯೇ, ತನಗೆ ಆ ಘನವಾದ ಅಧಿಕಾರಸ್ಥಾನವು ಪ್ರಾಪ್ತವಾಗಿದೆಯೆಂದು ತಿಳಿದಿದ್ದನಾದುದರಿಂದ, ಇನ್ನು ಮುಂದೆ ತಾನು, ಆ ಅಧಿಕಾರವನ್ನೂ, ಭಗವತ್ಸೇವೆಯನ್ನೂ, ಶ್ರೀರಾಮನ ದಾಸಾನುದಾಸನಾಗಿ ತನುಮನಧನಗಳನ್ನೂ ಸಮರ್ಪಿಸಿ ನಡೆಸಿ ಧ

ನ್ಯನಾಗುವೆನೆಂದು ನಿಶ್ಚಯಿಸಿದನು. ತನ್ನ ಆ ಕರ್ತವ್ಯದ ಜ್ಞಾಪಕವು, ಸರ್ವದಾ ತನ್ನ ದೃಷ್ಟಿಪಥದಿಂದ ಮರೆಯಾಗದಿರಲೆಂದು ತನ್ನ ಗೋಪನ್ನನೆಂಬ ನಾಮಧೇಯವನ್ನು ಬದಲಿಸಿ—'ರಾಮದಾಸ' ನೆಂದು ಹೆಸರಿಟ್ಟುಕೊಂಡನು. ಇದು ಮಹನೀಯಗುಣವಲ್ಲವೆ? ಭಗವತ್ಸೇವೆಗಾಗಿ ತನವುನಧನಗಳನ್ನು ಸಮರ್ಪಿಸುವ ಈ ಧಾರ್ಮಿಕ ಮನಸ್ಕತೆಯು ಸರ್ವ ಶ್ರೇಷ್ಠ ಸದ್ಗುಣವಲ್ಲವೆ? ಇಂತಹ ಅಮೌಲ್ಯ ಸದ್ಗುಣವು ಪೂಜನೀಯವಾದುದಲ್ಲವೆ? ಇಂತಹ ಪೂಜನೀಯ ಗುಣವನ್ನು ಗಳಿಸಿದ ಮಹನೀಯನನ್ನು ಗೌರವಿಸುವುದು ಕರ್ತವ್ಯವಲ್ಲವೆ? ಆದುದರಿಂದ ಇನ್ನು ಮುಂದೆ ನಮ್ಮ ಗೋಪನ್ನನನ್ನು 'ರಾಮದಾಸರು' ಎಂದು ಸಂಬೋಧಿಸುವೆವು.

ರಾಮದಾಸರು ಭದ್ರಾಚಲದ ತಹಶೀಲಿಯ ಅಧಿಕಾರವನ್ನು ಕೈಕೊಂಡ ಪ್ರಾರಂಭದ ಕೆಲವು ಸಂವತ್ಸರಗಳಲ್ಲಿ, ರೈತರಿಂದ ಬರಬೇಕಾದ ತೆರಿಗೆಗಳೂ, ಭೂಕಂದಾಯಗಳೂ ತಪ್ಪದೆ ವಸೂಲುಬಂದು ತಾನೀಷಾನ ಖಜಾನೆಗೆ ಕಳುಹಿಸಲ್ಪಟ್ಟುವು. ತಾನೀಷಾನು, ಭದ್ರಾಚಲ ತಹಶೀಲಿಯಲ್ಲಿ ಇತರ ಎಲ್ಲಾ ತಹಶೀಲ್‌ಗಳಿಗಿಂತಲೂ ಜನರು ಸಂತುಷ್ಟರಾಗಿಯೂ, ಶಾಂತರಾಗಿಯೂ ಇದ್ದಾರೆಂದೂ, ಸರ್ಕಾರದ ದ್ರವ್ಯವು ಒಂದುಕಾಸೂ ಬಾಕಿ ನಿಲ್ಲದೆ ವಸೂಲು ಬರುವುದೆಂದೂ ಕೇಳಿ, ತನ್ನ ಪ್ರೀತಿಯ ಗೋಪನ್ನನ ಸಾಮರ್ಥ್ಯವನ್ನು ಮೆಚ್ಚಿಕೊಂಡನು. ಅಕ್ಕನ್ನ ಮಾದನ್ನರೂ, ಬಹು ಸ್ವಲ್ಪ ಕಾಲದಲ್ಲೇ ಸುಲ್ತಾನನ ಪ್ರೀತಿ ಗೌರವಗಳಿಗೆ ಪಾತ್ರನಾದ ತಮ್ಮ ಚಿರಂಜೀವನನ್ನು ಕಂಡು ಬಹು ಸಂತುಷ್ಟರಾದರು. ಇತ್ತ ಭದ್ರಗಿರಿ ತಾಲ್ಲೂಕಿನಲ್ಲಾದರೋ ರಾಮದಾಸರು ಅಧಿಕಾರಕ್ಕೆ ಬಂದಾಗಿನಿಂದಲೂ ಸ್ಥಿತಿಗತಿಗಳು ಬಹುಮಟ್ಟಿಗೆ ವ್ಯತ್ಯಾಸವಾಗಿದ್ದುವು. ಗಣ್ಯರಾದ ಮನುಷ್ಯರು ಯಾವ ಮಾರ್ಗವನ್ನು ಅನುಸರಿಸಿದರೆ ಆ ಮಾರ್ಗವನ್ನೇ ಸಾಮಾನ್ಯರೂ ಅನುಸರಿಸಿ ನಡೆಯುವುದು ಸ್ವಾಭಾವಿಕವಲ್ಲವೆ? ಅವರು ಯಾವುದು ಉತ್ತಮವೆಂದು ಮೆಚ್ಚಿಕೊಂಡರೆ, ಅದನ್ನೇ ಇತರರೂ ಮೆಚ್ಚಿಕೊಳ್ಳುವುದು ಲೋಕ ಪದ್ಧತಿಯಲ್ಲವೆ? ರಾಮದಾಸರು, ತಹಶೀಲಿಗೆ ತಾವು ಶ್ರೇಷ್ಠ ಅಧಿಕಾರಿಗಳಾಗಿದ್ದರೂ, ದಂಭದರ್ಪಗಳಿಲ್ಲದೆ, ತಾವು ದೊಡ್ಡ ಅಧಿಕಾರಿಗಳೆಂಬ ಅಹಂಭಾವವನ್ನು ನಿರ್ಮೂಲಿಸಿ, ಸರ್ವಸಾಮಾನ್ಯರಂತೆ ಸರಳಭಾವದಿಂದ ಎಲ್ಲರೊಂದಿಗೂ ಬೆರೆದು ನಡೆ

ಯುತ್ತಿದ್ದುದು, ಇತರ ಸೌಕರರಿಗೂ ಮಾರ್ಗದರ್ಶಕವಾಯಿತು. ಎಲ್ಲರೂ ಕೇವಲ ವಿನೀತರೂ, ದೈವಭಕ್ತರೂ, ನಿಸ್ಪೃಹರೂ, ಶಾಂತಸ್ವಭಾವಿಗಳೂ, ಮೋಸ ಕಾಪಟ್ಯರಹಿತರೂ ಆದರು. ಅವರೊಬ್ಬರ ಸತ್ಯ ಸದಾಚರಣೆ ನಿಸ್ಪೃಹತೆಗಳ ಉದಾಹರಣೆಯಿಂದ ಆ ಒಂದು ತಹಶೀಲಿನವರೆಲ್ಲರೂ, ಉತ್ತಮಗೊಳ್ಳಲು ಅವಕಾಶವಾಯಿತು. ಅವರ ಆ ತಾಲ್ಲೂಕಿನಲ್ಲಿ ಲಂಚರುಷುವತ್ತುಗಳೂ, ಮೋಸಕಾಪಟ್ಯಗಳೂ ಕಡಿಮೆಯಾದುವು. ಜನರಲ್ಲಿ ಧರ್ಮಜಾಗೃತಿಯೂ ಪಾಪಭೀತಿಯೂ ಉದಯಿಸಿದುವು. ರಾಮದಾಸರು ತಮ್ಮ ಸ್ವಂತ ಸಂಪಾದನೆಯಲ್ಲಿ ಸಹ, ತಮ್ಮ ಕುಟುಂಬ ಪೋಷಣೆಗಾಗಿಯೇ ವಿಶೇಷ ದ್ರವ್ಯವನ್ನು ಉಪಯೋಗಿಸದೆ, ಮಿತವೆಚ್ಚದಿಂದ ಸಂಸಾರವನ್ನು ನಡೆಯಿಸಿ ಮಿಕ್ಕ ದ್ರವ್ಯವನ್ನೆಲ್ಲಾ ದಾನಧರ್ಮಗಳಿಗಾಗಿಯೇ ವಿನಿಯೋಗಿಸುತ್ತಿದ್ದುದರಿಂದ ಎಲ್ಲಿನೋಡಿದರೂ, ಅವರ ಆಚರಣೆಯೇ ಮೇಲ್ಪಂಕ್ತಿಯಾಯಿತು. ರಾಮದಾಸರ ಮನೆಯಲ್ಲಿ ಸದಾ ರಾಮಾಯಣ ಪಾರಾಯಣವೂ, ರಾಮಭಜನೆಗಳೂ, ಹರಿಕಥಾಕಾಲಕ್ಷೇಪಾದಿಗಳೂ, ಇವುಗಳ ಅಂಗವಾಗಿ ಬ್ರಾಹ್ಮಣ ಸುವಾಸಿನೀ ಸಮಾರಾಧನೆ ಮುಂತಾದುವುಗಳೂ ಅವಿಚ್ಛಿನ್ನವಾಗಿ ನಡೆಯುತ್ತಿರುವುವು. ನಿತ್ಯವೂ, ಅತಿಥಿ ಅಭ್ಯಾಗತರ ಆದರೋಪಚಾರಗಳೂ, ಪಾತ್ರಾಪಾತ್ರಗಳನ್ನರಿತು ಯಥಾಯೋಗ್ಯ ದಾನಧರ್ಮಗಳೂ ತೆರೆಪಿಲ್ಲದೆ ನಡೆಯುತ್ತಿರುವುವು. ರಾಮದಾಸರು, ಸರ್ವದಾ ತಾವು ಮಾಡುವ ಸಮಸ್ತ ಕೆಲಸಕಾರ್ಯಗಳೂ ಶ್ರೀರಾಮ ಪ್ರೇರಣೆಯಿಂದಲೇ ಪ್ರಾರಂಭವಾಗಿ ಶ್ರೀರಾಮಾನುಗ್ರಹದಿಂದಲೇ ಸಾರ್ಥಕಗಳಾಗಿ ನೆರವೇರುತ್ತಿರುವುವೆಂಬ ದೃಢನಂಬಿಕೆಯಿಂದ, ತಮ್ಮ ಜೀವಿತ ನಾಟಕಕ್ಕೆ ಶ್ರೀರಾಮನೇ ಸೂತ್ರಧಾರಕನು ಎಂದು ತಿಳಿದು, ಕೇವಲ ನಿಮಿತ್ತಮಾತ್ರರೋ ಎಂಬಂತೆ, ಸಮಸ್ತ ಕಾರ್ಯಗಳನ್ನೂ ನಿರ್ವಹಿಸುತ್ತಿದ್ದರು.



**ಅಧ್ಯಾಯ ೫ "ಕಾರಾಗಾರವಾಸ"**

ರಾಜಕೀಯ ಉದ್ಯೋಗವಾಗಲೀ, ಅಥವ ಲೌಕಿಕದ ಯಾವದೊಂದು ವೃತ್ತಿಯಾಗಲೀ, ಒಬ್ಬನಿಗೆ ಸುಖಮಯವಾದುದಾಗಬಹುದು,-ಅಥವ ಕೇವಲ ಬಂಧಕವಾಗಬಹುದು. ಪ್ರತಿಯೊಬ್ಬನೂ ತಾನು ಮಾಡುವ ಕೆಲಸಕ್ಕೆ ಕಾರಣಕರ್ತನು ತಾನಲ್ಲ ಭಗವಾನನು, ಎಂಬ ನಿಶ್ಚಯಭಾವನೆಯನ್ನು ಮನಸ್ಸಿನಲ್ಲಿಟ್ಟು, ತನಗೆ ಉಕ್ತವಾದ ಕಾರ್ಯವನ್ನು ತಕ್ಕ ವೇಳೆಯಲ್ಲಿ ನಿಸ್ಪ್ರಹತೆಯಿಂದ ಮಾಡುವನಾದರೆ, ಯಾವುದೊಂದು ಕಾರ್ಯವೂ, ಎಂದೂ ಯಾವನಿಗೂ ಬಂಧಕಾರಿಯಾಗಿ ಪರಿಣಮಿಸಲಾರದು. ಒಂದು ವೇಳೆ ಬಾಹ್ಯವಾಗಿ ಬಂಧಕಾರಿಯಾಗಿರುವಂತೆ ಕಂಡು ಬಂದರೂ, ಆ ಸಂದರ್ಭದಲ್ಲಿ 'ನನ್ನ ಕರ್ತವ್ಯವನ್ನು ನಾನು ನಿರ್ವಂಚನೆಯಿಂದ ಮಾಡಿಬಿಟ್ಟಿದ್ದೇನೆ. ಮುಂದೆ ಅದರ ಫಲವು ಏನಾದರೂ ಆಗಲಿ, ಎಂಬ ನಿರಾಳಮನೋಭಾವ, ಶಾಂತತೆಗಳಾದರೂ ಆತನಿಗೆ ತಪ್ಪದೆ ಉಂಟಾಗುವುವು. ಆದರೆ, ನಾವು ಹಾಗೆ ಮಾಡುವುದಿಲ್ಲ. ಅದೇ ನಮ್ಮ ದುಃಖಕ್ಕೆ ಕಾರಣ. ನಾವು ಎಲ್ಲವೂ,-'ಭಗವತ್ಪ್ರೇರಣೆ, ಎಲ್ಲವೂ ಅವನ ಕಾರ್ಯ, ಅವನೇ ಸೂತ್ರಧಾರಕನು' ಎನ್ನುವುದಿಲ್ಲ. ಹಾಗೆಂದಮಾತ್ರಕ್ಕೆ ಎಲ್ಲ ಎಲ್ಲವೂ ನಮ್ಮಿಂದ ತಪ್ಪಿಹೋಗುವುವೋ ಎಂಬ ಸ್ವಾರ್ಥತೆಯು ನಮ್ಮನ್ನು ಬಾಧಿಸುತ್ತದೆ. ಆದರೆ, ಮನಸ್ಸಿನಲ್ಲಿ ಎಲ್ಲವೂ ನನ್ನವೇ ಎಂದುಕೊಂಡು ಬಾಯಲ್ಲಿ ಮಾತ್ರ ಭಗವಂತನೇ ಪ್ರೇರಕನು, ಸೂತ್ರಧಾರಿ ಎಂದು ಬಿಟ್ಟರೆ, ಅಷ್ಟುಮಾತ್ರದಿಂದಲೇ ಶಾಂತಿಯುಂಟಾಗದು. ಹಾಗೆ ಭಾವಿಸುತ್ತಾ ಭಾವಿಸುತ್ತಾ, ಬಾಯಲ್ಲಿ ಹೇಳುತ್ತಾ ಹೇಳುತ್ತಾ, ಮನಸ್ಸಿನಿಂದಲೂ ನಿಶ್ಚಯವಾಗಿ ಹಾಗೆಯೇ ತಿಳಿವಂತೆ ಮನುಷ್ಯನು ಕ್ರಮವಾಗಿ ಅಭ್ಯಾಸಮಾಡಿಕೊಳ್ಳಬೇಕು. ಹಾಗೆ ನಾವು ತಿಳಿಯಲಿ, ತಿಳಿಯದಿರಲಿ, ಕೆಲಸಮಾಡುವವರು ನಾವೇ! ಹೀಗೆಂದಮಾತ್ರದಿಂದ ದೇವರ ಕರ್ತೃತ್ವ ಪ್ರೇರಣತ್ವ ಫಲದಾಯಕತ್ವ ಸಾಮರ್ಥ್ಯಗಳಿಗೆ ಲೋಪಬರಲಾರದು. ಆದರೆ ತಾವು ಹಾಗೆ ಭಾವಿಸಿಕೊಂಡು ಕಾರ್ಯಕ್ಷೇತ್ರದಲ್ಲಿ ತೊಡಗಿದರೆ, ಬುರುಡೆಯನ್ನು ಬೆನ್ನಿಗೆ ಕಟ್ಟಿಕೊಂಡು ಈಸತೊಡಗುವರಂತೆ ಇರುವೆವು. ನಮ್ಮ ವ್ಯಯವು ಸಹಜಭಾರದಿಂದ ನಮ್ಮದೇ ಆಗಿ

ಇದ್ದರೂ, ಆ ಜಲಮಯಕ್ಷೇತ್ರದಲ್ಲಿ ಅದರ ಭಾರವನ್ನು ಬುರುಡೆಯು ಹೊತ್ತಿರುವುದು. ಹಾಗೆಯೇ, ಸರ್ವಕ್ಕೂ ಕಾರಣಕರ್ತನು ಭಗವಂತನು ಎಂದು ನಾವು ನಿಶ್ಚಲಮನೋಭಾವದಿಂದ ಕಾರ್ಯಗಳಿಗೆ ತೊಡಗಿದೆವಾದರೆ, ಕಾರ್ಯವನ್ನೇನೋ ನಾವೇ ಮಾಡುತ್ತಿದ್ದರೂ, ಕಾರ್ಯದ ಭಾರವೆಲ್ಲವೂ ನಮ್ಮ ಇಷ್ಟದೈವದ ಮೇಲಿರುವುದು. ಹಾಗಲ್ಲದೆ, ಎಲ್ಲವೂ ನಮ್ಮದೇ, ನಾವೇ ಕಾರ್ಯಕರ್ತೃಗಳು, ಸರ್ವ ಸ್ವತಂತ್ರರು ಎಂದು ಭಾವಿಸುವೆವಾದರೆ ಈ ಭಾವನೆಯೆಂಬ ಸುವರ್ಣ ಶೃಂಖಲೆಯಿಂದಲೇ ಕಟ್ಟಲ್ಪಟ್ಟವರಾಗಿ, ಬೀಸುವ ಕಲ್ಲನ್ನು ಕುತ್ತಿಗೆಗೆ ಕಟ್ಟಿಕೊಂಡು ಈಸತೊಡಗುವವರಂತೆ ಸದಾ ದುಃಖಿಗಳಾಗಿಯೇ ಇರಬೇಕಾಗುವುದು.

ರಾಮದಾಸರು ಸಕಲ ವಿಧ ಧರ್ಮಕಾರ್ಯಗಳನ್ನೂ ನಿಶ್ಶಂಕೆಯಿಂದ ನೆರವೇರಿಸಿ ಧನ್ಯರಾಗಲು, ಅವರಿಗಿದ್ದುದು ಧಾರ್ಮಿಕ ಮನೋಭಾವ ಮಾತ್ರವಲ್ಲ, ಮತ್ತೊಂದು ಅನುಕೂಲ್ಯವೂ ಒದಗಿದ್ದಿತು. ಅವರ ಭಾರ್ಯೆಯು ಸಕಲಗುಣಗಣಾಲಂಕೃತಳೂ, ಶಾಂತಸ್ವಭಾವವುಳ್ಳವಳೂ ಆಗಿದ್ದಳು. ಭದ್ರಾಚಲದಲ್ಲಿ ಆಕೆಯ ಸಕಲ ಗುಣಗಳನ್ನೂ ನಿರೂಪಿಸುವಂತಹ ಒಂದು ಸಂಗತಿಯು ನಡೆದುದಾಗಿ ಅವರ ಚರಿತ್ರೆಯಲ್ಲಿ ಒಂದೆಡೆ ಹೇಳಲ್ಪಟ್ಟಿದೆ. ರಾಮದಾಸರ ಮನೆಯಲ್ಲಿ ನಿರಂತರ ನಡೆಯುತ್ತಿದ್ದ ರಾಮಾಯಣ ಪುರಾಣ, ಸಮಾರಾಧನೆಗಳಲ್ಲಿ ಒಂದು ಬಾರಿ, ಸಮಾರಾಧನಾ ಕಾಲಕ್ಕೆ ಸಹಸ್ರಾರು ಮಂದಿ ಬ್ರಾಹ್ಮಣ ಸುವಾಸಿನೀಯರು ನೆರೆದಿದ್ದರು. ರಾಮದಾಸರು ಅತಿಥಿಗಳನ್ನು ಆದರಿಸುವ ಕಾರ್ಯದಲ್ಲಿ ನಿರತರಾಗಿ ಹೊರಮನೆಯಲ್ಲಿದ್ದರು. ಬಹು ಎತ್ತರದ ಮೆಟ್ಟಲಿಂದ ಆಗ ಇತ್ತ ಒಳಮನೆಯಲ್ಲಿ, ಅವರ ಚಿಕ್ಕಮಗನು ಅಕಸ್ಮಾತ್ತಾಗಿ ಕೆಳಕ್ಕೆ ಬಿದ್ದು ಒಡನೆ ಮೃತನಾದನು. ಆ ಭಯಂಕರ ದೃಶ್ಯವನ್ನು ನೋಡಿದ ರಾಮದಾಸರ ಭಾರ್ಯೆಯು—'ಅಕ್ಕಟಾ ಶ್ರೀರಾಮನ ದಯೆಯು ನಮ್ಮ ಮೇಲೆ ಏಕೆ ಕಡಿಮೆಯಾಯಿತು ? ಈಗ ಈ ಬಾಲಕನು ಮೃತನಾದ ವರ್ತಮಾನವು ತಿಳಿದರೆ, ಬಂದು ನೆರೆದಿರುವ ಸಹಸ್ರಾರು ಮಂದಿ ಬ್ರಾಹ್ಮಣರ ಭೋಜನಕ್ಕೆ ವಿಘ್ನವುಂಟಾಗುವುದಲ್ಲ. ದೇವಾ, ನಮಗೇಕೆ ಇಂತಹ ದುರಂತ ಸಂಕಟವು ಪ್ರಾಪ್ತವಾಯಿತು ! ಇದಾವಜನ್ಮದ ಪ್ರಾರಬ್ಧಕರ್ಮವೋ ! ' ಎಂದು ಬಗೆಬಗೆಯಿಂದ ಹಂಬಲಿಸಿ

ಕೊಂಡು, ಆದರೆ ತನ್ನ ಮನಸ್ಸಿನ ದುಃಖವನ್ನು ಹಾಗೇ ಅಡಗಿಸಿಕೊಂಡು 'ಈಗ ಈ ಸಂಗತಿಯನ್ನು ಪತಿಯೊಂದಿಗೆ ತಿಳಿಸಿದೆನಾದರೆ, ನಿಶ್ಚಯವಾಗಿ ಬ್ರಾಹ್ಮಣಸುವಾಸಿನೀ ಸಮಾರಾಧನೆಗೆ ವಿಘ್ನವುಂಟಾಗುವುದು. ಆದುದರಿಂರಿಂದ ಅವರ ಭೋಜನೋತ್ತರದಲ್ಲಿ ಯಜಮಾನರಿಗೆ ಈ ಸಂಗತಿಯನ್ನು ತಿಳಿಸಬಹುದು' ಎಂದು ಸಮಾಧಾನ ಮಾಡಿಕೊಂಡು, ಎಲ್ಲರೂ ಹೊರಟು ಹೋದ ತರುವಾಯ ಪತಿಯನ್ನು ಕರೆದು ನಡೆದ ಸಂಗತಿಯನ್ನೆಲ್ಲಾ ವಿಶದವಾಗಿ ತಿಳಿಸಿದಳು. ಭಾರ್ಯೆಯ ಆ ಮಾತುಗಳನ್ನು ಕೇಳಿ, ಪುತ್ರಮರಣಕ್ಕಾಗಿ ರಾಮದಾಸರು ಅಳಲಿಲ್ಲ-ತಮ್ಮ ಭಾರ್ಯೆಯು ತಾಳ್ಮೆವಹಿಸಿ, ಆ ದಿನ ಬ್ರಾಹ್ಮಣ ಸಮಾರಾಧನೆಗೆ ವಿಘ್ನವುಂಟಾಗದಂತೆ ಮಾಡಿದಳಲ್ಲಾ ಎಂದು ಪರಮಾನಂದಗೊಂಡರು. ತರುವಾಯ ನಿಶ್ಚಲಭಕ್ತರಾದ ಅವರು, ಮಗನು ಮೃತನಾದನೆಂದು ಮನಸ್ಸಿನಲ್ಲಿ ಲೇಶಮಾತ್ರವೂ ಕಾತರಗೊಳ್ಳದೆ, ಆ ಬಾಲಕನ ಶವವನ್ನೂ ಎತ್ತಿಕೊಂಡು ನೇರವಾಗಿ ಶ್ರೀರಾಮ ಸನ್ನಿಧಿಗೆ ನಡೆದು, ಬಾಲಕನನ್ನು ದೇವರಿಗೆ ಅಭಿಮುಖವಾಗಿ ಮಲಗಿಸಿ - 'ಶ್ರೀರಾಮಪ್ರಭೋ, ಕಂಡೆಯಾ ಈ ಕಂದನು ಮೃತನಾಗಿರುವನು. ನಿನ್ನ ಭಕ್ತನಾದ ನನ್ನ ಕಣ್ಣೆದುರಿಗೆ ಇವನು ಮೃತನಾಗುವುದು ಧರ್ಮವಿರುದ್ಧವಲ್ಲವೆ ? ಹಿಂದೆ ಅಯೋಧ್ಯೆಯಲ್ಲಿ ಒಬ್ಬ ಬ್ರಾಹ್ಮಣನ ಜೀವಿತ ಕಾಲದಲ್ಲೇ ಮೃತನಾದ ಆತನ ಪುತ್ರನನ್ನು ನೀನು ಬದುಕಿಸಿಕೊಟ್ಟೆಯಲ್ಲವೆ ? ಈಗಲೂ ಹಾಗೆಯೇ ಈ ಬಾಲಕನನ್ನು ಜೀವಂತನನ್ನಾಗಿಸಿ, ನನ್ನನ್ನು ಉದ್ಧರಿಸು, ತಂದೇ' ಎಂದು ಹಲವು ಬಗೆಯಿಂದ ಪ್ರಾರ್ಥಿಸಿದನು. ಭಗವದ್ಭಕ್ತರನ್ನು ಭಕ್ತಪರಾಧೀನನಾದ ಶ್ರೀರಾಮಮೂರ್ತಿಯು ಕೈಬಿಡುವನೆ ? ಅರ್ಚಕನು ಶ್ರೀರಾಮ ಪಾದತೀರ್ಥವನ್ನು ಬಾಲಕನ ಶವದಮೇಲೆ ಒಂದುಬಾರಿ ಪ್ರೋಕ್ಷಿಸಿ, ಅತ್ತ ಸ್ವಾಮಿಗೆ ಕರ್ಪೂರದಾರುತಿಯನ್ನು ಎತ್ತಿದುದೇ ಸಾವಕಾಶವು. ಆಶ್ಚರ್ಯವಾಶ್ಚರ್ಯವು ! ರಾಮದಾಸ ಕುವರನು, ಮಲಗಿದ ಬಾಲಕನು ನಿದ್ರೆ ತಿಳಿದು ಎದ್ದಂತೆ ಎದ್ದು ಕುಳಿತನು. ಭಗವನ್ಮಹಿಮೆಗಾಗಿ ಸರ್ವರೂ ಪರಮಾಶ್ಚರ್ಯಗೊಂಡರು. ರಾಮದಾಸರ ಭಕ್ತಿ ಪಾರವಶ್ಯತೆಯನ್ನು ಕಂಡು ಸಕಲರೂ 'ಈತನು ಮಹಾನುಭಾವನು' ಎಂದು ಸಹಸ್ರ ಮುಖಗಳಿಂದ ಹೊಗಳಿದರು.

ರಾಮದಾಸರ ಮಹಿಮೆಗಾಗಿ ಇತರರಿಗೆ ಆಶ್ಚರ್ಯವುಂಟಾದುದು ಅತಿ ಶಯವಲ್ಲ. ಭದ್ರಾದ್ರೀಶನ ಅಪಾರ ಮಹಿಮೆಯು ಈ ಬಗೆಯಾಗಿ ವ್ಯಕ್ತ ವಾದುದರಿಂದ ರಾಮದಾಸರಿಗೇ, ಆ ಕ್ಷೇತ್ರಸ್ಥ ದೇವತಾ ಸಾನ್ನಿಧ್ಯದ ವಿಷ ಯದಲ್ಲಿ ಪರಮಾದ್ಭುತವೆನ್ನಿಸಿತು. ಆಗ ರಾಮದಾಸರು,-'ಆಹಾ ಶ್ರೀರಾ ಮನು ಸಾಕ್ಷಾತ್ತಾಗಿ ಇಲ್ಲಿ ನೆಲೆಸಿರುವನೆಂಬುದು ಈಗ ನಿಶ್ಚಯವಾಯಿತು. ಪೂರ್ವ ಜನ್ಮಗಳಲ್ಲಿ ಮಾಡಿದ ಸುಕೃತಗಳೆಲ್ಲಾ ಒಂದುಗೂಡಿದುದರಿಂದಲೇ ಇರಬಹುದು, ಪಾಮರನಾದ ನಾನು ಈ ಭಗವತ್ಸನ್ನಿಧಿಯಲ್ಲಿ ಬಂದು ವಾಸಿ ಸುವ ಸುಯೋಗವೊದಗಿತು. ಇಂತಹ ದಿವ್ಯ ಕ್ಷೇತ್ರದಲ್ಲಿ ಕ್ಷಣಕಾಲ ವಾಸಿ ಸುವುದಕ್ಕೂ ಶ್ರೀರಾಮನುಗ್ರಹವಿಲ್ಲದಿದ್ದರೆ ಸಾಧ್ಯವಾಗದು. ಹೀಗಿರು ವಲ್ಲಿ ಈಗ ಅನಾಯಾಸವಾಗಿ ದೊರೆತಿರುವ ಈ ಸುಸಂದರ್ಭವನ್ನು ವ್ಯರ್ಥ ಗೊಳಿಸಿಕೊಂಡರೆ, ನನಗಿಂತಲೂ ಇನ್ನು ಮೂಢನೂ ವ್ಯರ್ಥಜೀವಿಯೂ ಮತ್ತಾರು! ಜೀವಿತವು ಶಾಶ್ವತವಲ್ಲ. 'ಗಾಳಿ ಬಂದ ಕೈಯಲ್ಲೇ ತೂರಿ ಕೊಳ್ಳಬೇಕು' ಎಂಬಂತೆ ಅವಕಾಶವಿರುವಾಗಲಲ್ಲದೆ, ಮತ್ತಾವಾಗ ಧರ್ಮ ಕಾರ್ಯ ಮಾಡಲು ಸಾಧ್ಯವಿದ್ದೀತು! ಈಗ ಖಜಾನೆಯಲ್ಲಿ ಆರು ಲಕ್ಷ ದ್ರ ವ್ಯವು ಶೇಖರವಾಗಿದೆ. ಅಷ್ಟು ದ್ರವ್ಯವನ್ನು ಉಪಯೋಗಿಸಿ, ಶ್ರೀರಾಮ ಸೇವೆಯನ್ನು ನಡೆಸುವುದಾದರೆ ಅಗಾಧ ಕಾರ್ಯವಾಗುವುದು. ತಾನೀಷಾ ನಿಗೆ ಸೇರಬೇಕಾದ ದ್ರವ್ಯವನ್ನು ಈ ಬಗೆಯಾಗಿ ಉಪಯೋಗಿಸಿಕೊಂಡುದ ಕ್ಕಾಗಿ ನನಗೆ ಕಾರಾಗಾರವಾಸದ ಶಿಕ್ಷೆಯಾಗಬಹುದು. ಆದರೆ ಅದರಿಂದ ಬಾಧಕವೇನು? ಕೆಲವುಕಾಲ ಅನುಭವಿಸಿದರಾಯಿತು. ಹೇಗೂ ಶ್ರೀರಾಮ ಸೇವೆಯಂತೂ ಉತ್ತಮ ರೀತಿಯಿಂದ ನೆರವೇರಿದಂತೆ ಆಗುವುದಲ್ಲವೆ?' ಎಂದು ಮುಂತಾಗಿ ಯೋಚಿಸಿ, ಆ ಕಾರ್ಯದಿಂದ ತಮಗೆ ಏನು ಕಷ್ಟ ಪ್ರಾ ಪ್ತವಾಗುವಂತಿದ್ದರೂ, ಅದನ್ನು ಅನುಭವಿಸುವುದಕ್ಕೆ ಸಿದ್ಧರಾಗಿ ನಿಶ್ಚಲ ಮ ನೋಭಾವದಿಂದ, ಅಷ್ಟು ದ್ರವ್ಯವನ್ನು – 'ಶ್ರೀರಾಮಪ್ರಭೋ ನಿನ್ನ ಈ ದೇವಾಲಯದ ಜೀರ್ಣೋದ್ಧಾರಕ್ಕಾಗಿ ಉಪಯೋಗಿಸುತ್ತೇನೆ. ನಿನಗೆ ಪ್ರೀತಿಯಾಗಲಿ' ಎಂದು ಸಂಕಲ್ಪಮಾಡಿ, ನೂರಾರು ಮಂದಿ ಕಲ್ಲು ಕೆಲಸ ಗಾರೇ ಕೆಲಸದವರನ್ನೂ ಉತ್ತಮ ಶಿಲ್ಪಿಗಳನ್ನೂ ಕರೆಯಿಸಿ, ಅವರಿಗೆ ಆವ ಶ್ಯಕವಾದ ಸಕಲ ಸಾಮಗ್ರಿಗಳನ್ನೂ ಒದಗಿಸಿ ಕೆಲಸವು ಬಹು ಶೀಘ್ರ ಕಾಲ

ದಲ್ಲಿ ಮುಗಿಯಬೇಕೆಂದು ಆಜ್ಞಾಪಿಸಿದನು. ಕೆಲಸಗಾರರು ಸಹ, ಮಹಾ ಭಕ್ತಶಿರೋಮಣಿಯಾದ ರಾಮದಾಸರ ಆಜ್ಞಾನುಸಾರ, ರಾತ್ರಿ ಹಗಲುಗಳೆಂಬ ಲಕ್ಷ್ಯವಿಲ್ಲದೆ, ನಿದ್ರಾಹಾರಗಳನ್ನು ಗಮನಿಸದೆ ಶಕ್ತಿಮೀರಿ ಕೆಲಸ ಮಾಡತೊಡಗಿ ಬಹು ಶೀಘ್ರಕಾಲದಲ್ಲೇ ದೇವಸ್ಥಾನವನ್ನೂ, ಪ್ರಾಕಾರ ಗೋಪುರ, ಮೇಲ್ಕಟ್ಟುಗಳನ್ನೂ,-ಕೊಳ, ರಥ, ಕೈಸಾಲೆ, ಮಂಟಪಾದಿಗಳನ್ನೂ ರಚಿಸಿದರು. ಹಿಂದಿದ್ದ ದೇವಾಲಯಕ್ಕೂ ಈಗ ಸಿದ್ಧವಾದುದಕ್ಕೂ ಏನೂ ಸಂಬಂಧವೇ ಇಲ್ಲವೆಂಬಷ್ಟುಮಟ್ಟಿಗೆ ಜೀರ್ಣೋದ್ಧಾರಕಾರ್ಯವು ನೆರವೇರಿತು. ರಾಮದಾಸರಿಂದ ಶ್ರೀರಾಮಾಲಯಕ್ಕೆ ನಡೆದ ಕೈಂಕರ್ಯವನ್ನು ವರ್ಣಿಸುವ ಸಂದರ್ಭದಲ್ಲಿ ಕವಿಯ ನಾಲ್ಕು ಮಾತುಗಳನ್ನೇ ಇಲ್ಲಿ ಕೊಡಲು ಬಯಸುತ್ತೇವೆ.

"ಕೈಂಕರ್ಯಮು ಜೇಸೆನು ರಾಮದಾಸು, ಕೈಂಕರ್ಯಮು ಜೇಸೆನು ಪ.
ಕೈಂಕರ್ಯಮುಜೇಸೆ ಗಾಕತ್ಸ್ಥ ಕುಲುನಕು, ಸಂಕಟ ಹರಣ ಸರ್ವಾತ್ಮ
ಯನಿಮ್ರೊಕ್ಕಿ ಅ.
ಶ್ರೀಕರಮಗು ರಾಜಿತಮಣಿ ಶಾಲಲ, ಬ್ರಾಕಾರಂಬುಲ ಬಹುಮತ
ಪಜ್ಜ್ರಲ,
ಮಂಜುಲತರಮಗು ಮಣಿಮಂಟಪಮುಲ, ಗಂಜರಾಗಮಣಿ ಕಲಿ
ತಾಂಗಣಮುಲ,
ಜಾಕಚಕ್ಯ ಕಾಂಚನ ಕೂಟಂಬುಲ, ನಾಕಾಶಂಬುನು ನಂಟೆಡುತೇರುಲ
ಗೋಪುರ ಮೊರಸೆಡು, ಗೋಪುರ ಏತತುಲ, ದೀಪಿಂಚು ಏತರ್ದಿಕಲ
ಬೆಡಂಗುಲ,
ದಳುಕುಗುಲುಕು ಪಗಡಂಪು ಗಂಬಮುಲ, ಗಲುವಡಂಬುಲನು ಗಲಕಲು,
ವಡಮುಲ,
ರಂಗಗು ಮುತ್ಯಪು ರಂಗವಲ್ಲಿಕಲ, ಶೃಂಗಾರ ಮುಲಗು ಚಿತ್ರಪಟಿಕಲ,
ಮಕರ ತೋರಣ ಸಮಾಜಂಬುಲಮಣಿ, ಮುಕುರ ತೋರಣ ಸಮೂ
ಹಂಬುಲಗಡು
ಭುಗ ಭುಗುವಲ ಜೆಡುಪೂಜಪ್ಪರಮುಲ, ನಗರುಧೂಪಮುಲನಾಲವಟ್ಟ
ಮುಲ

ಮೆರಸೆಡಿರೀತಿನಿ ವೇಲಿಮಿಗಾಗನು, ಧಾರಾಳಮುಲಗು ದ್ವಾರಬಂಧಮುಲು
ಜಾರು ರತ್ನಕಾಂಚನ ಶಿಖರಂಬುಲ. .... .... .... ....
ರಾಮಭಜನ ಸಂರಾವೋತ್ಕರಮುಲ, ರಾಮತೀರ್ಥ ಸಾರಸಮುಲ ತಾವುಲ
ರಾಮ ಸ್ಮರಣಾರವ ಮಧುರಂಬುಲ, ರಾಮಭದ್ರ ವಿಗ್ರಹ ದರ್ಶನಮುಲ
ಹನುಮದ್ಗಜ ವಾಹನಮುಲ ಘನಮುಲ-ನನುಪಮ ಶೃಂಗಾರಾ
ನಂದಂಬುಲ
ರಮಣ ಭದ್ರಗಿರಿ ರಾಮಾಲಯಮು-ತ್ಯಮರಾನಂದಂ ಬೈಧರಲೋಪಲ
ಮೆರಸೆಡಿರೀತಿನಿ ವೇಲಿಮಿಗಾಗನು-ಕ್ಯೆಂಕರ್ಯಮು ಜೇನೆನು.

ತೋಹರಾ:—

ಗರ್ಭಗೃಹ ಪ್ರಾಕಾರ ಮಂಟಪಾಲ್-ಗಟ್ಟಿಂಚೆನು ಗಡುಬಾಗ
ನಿರ್ಭಯುಡೈ ಯಾರ್ಲಕ್ಷ್ಲ ವರಹಾಲ್-ನೆಮ್ಮದಿ ನೆಲವಟುಕಾಗ.
ವ್ಯಯಮು ಚೇಸಿಕೋವೆಲಲೋಗಾಗಲ-ವೈಭವಮಂತಯುನಿಂಚೆ
ಭಯಮುಲೇಕ ತನಗೋರ್ಕೆ ತೀರೆನಿ-ಬಾಗುಗನಾನಂದಿಂಚೆ.''

ಹೀಗೆ ದೇವಾಲಯ ಮಂಟಪ ಪ್ರಾಕಾರಾದಿಗಳು ನೂತನ ರೀತಿಯಿಂದ ಕಟ್ಟಲ್ಪಟ್ಟು, ಜೀರ್ಣೋದ್ಧಾರ ಕಾರ್ಯವು ಸಂಪೂರ್ಣವಾಗಿ ನೆರವೇರಿತು. ಸಹಸ್ರಾರುಮಂದಿ ಭಕ್ತಾದಿಗಳು ನೆರೆದರು. ರಾಮದಾಸರು ಸ್ವಾಮಿಗೆ ಬ್ರಹ್ಮೋತ್ಸವವೇ ಮುಂತಾದ ಹಲವು ಬಗೆಯ ಮಹೋತ್ಸವಗಳನ್ನು ನಡೆಸಿ, ನೆರೆದ ಭಕ್ತಸಮೂಹವನ್ನು ಸಕಲ ವಿಧಗಳಿಂದಲೂ ಆದರಿಸಿ ಸಂತೋಷಪಡಿಸಿದರು. ಎಲ್ಲರೂ ರಾಮದಾಸರನ್ನು, 'ಪರಮಧನ್ಯ, ಮಹಾನುಭಾವ, ಭಕ್ತಶಿರೋಮಣಿ, ಎಂದು ಮುಂತಾಗಿ ಮುಕ್ತಕಂಠರಾಗಿ ಹೊಗಳಿದರು.

ಹೀಗೆ ರಾಮದಾಸರು ಸರ್ಕಾರದ ದ್ರವ್ಯವನ್ನು ಹಿಂದೆ ಮುಂದೆ ನೋಡದಂತೆ ವ್ಯಯಮಾಡಿ ಶ್ರೀರಾಮಸೇವೆಯನ್ನು ನಡೆಸಿ, ಜಗದ ಹೊಗಳಿಕೆಗೆ ಪಾತ್ರರಾದರಾದರೂ, ಅವರ ಅನುಬಂಧಿಗಳೂ ಆಪ್ತರೂ, ಈ ರಾಜದ್ರೋಹ ಕಾರ್ಯದಿಂದ ಯಾವ ಬಗೆಯ ಆಪತ್ತು ಪ್ರಾಪ್ತವಾಗಲಿರುವುದೋ ಎಂದು ಭೀತಿಗೊಳ್ಳುತ್ತಿದ್ದರು. ಅನುವು ದೊರೆತಾಗ ಆ ವಿಷಯ

ದಲ್ಲಿ ರಾಮದಾಸರನ್ನು ಕುರಿತು ಪ್ರಶ್ನಿಸಿದ್ದಾದರೆ, ಅವರು-'ಇದೇನು ನೀವೇಕೆ ಈ ವಿಚಾರದಲ್ಲಿ ಇಷ್ಟು ಭಯಪಡುತ್ತಿದ್ದೀರಿ? ಶ್ರೀರಾಮನೊಬ್ಬನು ನಮ್ಮ ಪಾಲಿಗೆ ಇರುತ್ತಿರಲಾಗಿ ನೀವೇಕೆ ಭಯಪಡಬೇಕು? ಜಗತ್ತಿನಲ್ಲಿರುವ ಐಶ್ವರ್ಯವೆಲ್ಲವೂ, ಮೊದಲನೆಯದಾಗಿ ನಮ್ಮ ಪ್ರಭುವಾದ ಶ್ರೀರಾಮನದು. ತರುವಾಯ ಇತರರದು. ನಮ್ಮ ಪ್ರಭುವಿನದೇ ಆದ ಆ ದ್ರವ್ಯವನ್ನು ಆತನ ಪ್ರೇರಣಾನುಸಾರವಾಗಿ, ನಾನು ಆತನ ಸೇವೆಗಾಗಿಯೇ ಖರ್ಚುಮಾಡಿದ್ದೇನೆ. ಇದಕ್ಕಾಗಿ ಭಯಪಡುವುದೇಕೆ? ಸರ್ಕಾರದ ದ್ರವ್ಯವನ್ನು ದುರುಪಯೋಗ ಪಡಿಸಿದ್ದಕ್ಕಾಗಿ ತಾನೀಷಾನು ಶಿಕ್ಷಿಸುತ್ತಾನೆ ಎಂಬಿರಾ? ಬಂದದ್ದು ಬರಲಿ! ಶ್ರೀರಾಮನಿಗೆ ಈ ಸೇವೆಯು ಅರಿಕೆಯಿಲ್ಲವೆ? ಇಷ್ಟರಮೇಲೂ, ಶಿಕ್ಷೆಯಾಗುವುದಾದರೆ ಅದಕ್ಕಾಗಿ ಸಂಕಟಪಡಬೇಕೇಕೆ? ರಾಮನ ಆಜ್ಞೆಯಿಲ್ಲದೆ, ಏನೂ ನಡೆಯಲಾರದಷ್ಟೆ! ಹಾಗೆ ಶ್ರೀರಾಮನ ಇಚ್ಛಾನುಸಾರವಾಗಿಯೇ ಪ್ರಾಪ್ತವಾಗುವ ಕಷ್ಟವೇನಿದ್ದರೂ ಅದು ನನಗೆ ಸಮ್ಮತವೇ!' ಎಂದು ನುಡಿದುಬಿಟ್ಟರು.

ಈ ಸಂದರ್ಭದಲ್ಲಿ ಒಂದು ವಿಷಯವನ್ನು ಕುರಿತು ವಿವೇಚನೆ ಮಾಡುವುದು ಆವಶ್ಯಕವೆನ್ನಿಸುತ್ತದೆ. ಭಗವದ್ಭಕ್ತರೆಂಬ ಮೊಗವಾಡವನ್ನು ಧರಿಸಿಕೊಂಡು ಇಂತಹ ರಾಜದ್ರೋಹಕರ ಕಾರ್ಯವನ್ನು ಮಾಡಬಹುದೆ? ಅಲ್ಲದೆ ರಾಜನ ದ್ರವ್ಯವನ್ನು ಆತನ ಅನುಮತಿಯಿಲ್ಲದೆ ಉಪಯೋಗಿಸಿದರೆ ಅದೆಂತಹ ಧರ್ಮಕಾರ್ಯವೆನ್ನಿಸುವುದು?' ಎಂಬ ಮುಂತಾದ ಪ್ರಶ್ನೆಗಳು ಯಾರ ಮನಸ್ಸಿಗಾದರೂ ತೋರದಿರಲಾರವು. ಭಕ್ತಶಿರೋಮಣಿಗಳ ಅಂತರ್ಯವೆಂತಹುದು ಎಂಬುದು, ಭಗವಾನನಿಗೆ ಮಾತ್ರವೇ ಗೋಚರವಾಗತಕ್ಕುದಲ್ಲದೆ, ಅದನ್ನು ಕುರಿತು, ಪಾಮರರಾದ ನಾವು ವಿವೇಚಿಸುವುದು ಸಾಧ್ಯವಲ್ಲ. ಆದರೂ ಈ ಸಂದರ್ಭದಲ್ಲಿ ಇಷ್ಟು ಮಾತ್ರ ಹೇಳಬಹುದು. ಭಗವಾನನಲ್ಲಿ ನಿಜವಾಗಿಯೂ ತಮ್ಮ ಚಿತ್ತವೃತ್ತಿಯನ್ನು ನೆಲೆಗೊಳಿಸಿ, ಅನ್ಯವನ್ನರಿಯದಿರುವ ಭಕ್ತಶಿರೋಮಣಿಗಳು, ಜಗತ್ತಿನ ಸಾಮಾನ್ಯ ನೀತಿಯ ಸರಹದ್ದನ್ನು ಮೀರಿರುವರು. ಅವರು ವಿಶೇಷ ಧರ್ಮಗಳ ಪಾಲನೆಗಾಗಿ ಸಾಮಾನ್ಯ ಧರ್ಮಗಳನ್ನು ಮೀರಿ ನಡೆವುದು ದೋಷವೆಂದು ಎಣಿಸಲಾರರು. ಅವರ ದೃಷ್ಟಿಯಲ್ಲಿ, ಅಖಿಲ ಜಗತ್ತೂ, ಜಗತ್ತಿನಲ್ಲಿರುವ ಅಖಿಲ ಸಂಪತ್ತೂ,

ಭಗವಂತನಿಗೆ ಸೇರಿದುದೆಂಬ ಒಂದೇ ಭಾವವಿರುವುದಲ್ಲದೆ, ಇವನದು ಅವನದು, ತನ್ನದು ಪರರದು ಎಂಬ ಕ್ಷುದ್ರಭಾವನೆಗಳಿಗೆ ಅವರ ಮನೋಮಯ ಕೋಶದಲ್ಲಿ ಸ್ಥಳವೇ ಇರುವುದಿಲ್ಲ. ಹಾಗೆ ಭಾವನಾಮಯ ರಾಜ್ಯದಲ್ಲಿ ಚಕ್ರವರ್ತಿಗಳಂತೆ ಸರ್ವತಂತ್ರ ಸ್ವಾತಂತ್ರ್ಯವನ್ನು ವಹಿಸಿ ಭಗವತ್ಪ್ರೇರಣಾನುಸಾರವಾಗಿಯೋ ಎಂಬಂತೆ ಈ ಬಗೆಯ ಕಾರ್ಯವಾಡಿಬಿಡುವ ಭಕ್ತಶ್ರೇಷ್ಠರು, ರಾಜ್ಯ ಐಶ್ವರ್ಯ ಧನಕನಕಾದಿಗಳು ನನ್ನವೆಂಬ ಸಂಕುಚಿತ ಮನಸ್ಥಿತಿಯಿಂದ ಇರುವ ಪ್ರಾಪಂಚಿಕರ ಕೈಯಲ್ಲಿ ಸಿಕ್ಕು ಕೆಲಕಾಲ ವ್ಯಥೆ ಪಡಬೇಕಾದ ವಿಧಿಯೂ ಪ್ರಾಪ್ತಿಸಬಹುದು. ಆದರೇನು! ಅವರ ದೃಷ್ಟಿಯಲ್ಲಿರುವುದು ಭಗವತ್ಕಾರ್ಯ ಸಾಧನೆಯಲ್ಲದೆ, ತಮ್ಮ ದೇಹ ಸೌಖ್ಯವಲ್ಲ. ದೇಹಕ್ಕೆ ಕಷ್ಟ ಪ್ರಾಪ್ತವಾಗುವುದೆಂದು ಶಂಕಿಸಿ, ಅವರು ತಮಗೆ ಅವಶ್ಯಕವೆಂದು ತೋರಿದ ಈ ಬಗೆಯ ಕಾರ್ಯಗಳನ್ನು ಮಾಡದೆ ಎಂದಿಗೂ ಹಿಂಜರಿದು ನಿಲ್ಲರು. ಇದು ಅಂದು ಮಾತ್ರ ನಡೆಯುತ್ತಿಂದಲ್ಲ, ಭಗವದ್ಭಕ್ತಿ ಪಾರವಶ್ಯತೆಯಿಂದ, ಭಗವತ್ಸೇವೆ ಲೋಕಸೇವೆಗಳಲ್ಲಿ ನಿಶ್ಚಲಧ್ಯೇಯಗಳನ್ನುಳ್ಳ ಮಹಾ ಮಹಿಮರಿಂದ ಇಂದಿಗೂ ಆಚರಿಸಲ್ಪಡುತ್ತಿರುವ ಧರ್ಮಗಳಿವು! ಇವು ಲೋಕದೃಷ್ಟಿಯಲ್ಲಿ ವಿರುದ್ಧಕಾರ್ಯಗಳೆಂಬಂತೆ ತೋರಿದರೂ, ಪಾರಮಾರ್ಥಿಕದ ಉನ್ನತ ಭಾವನೆಯಿಂದ ಸಹಜ ಧರ್ಮಗಳೆಂದೂ, ಅವಶ್ಯಕ ಕಾರ್ಯಗಳೆಂದೂ ತೋರದಿರಲಾರವು. ದ್ರವ್ಯವು ಎಂದೂ ಎಲ್ಲೂ ನೆಲೆಯಾಗಿ ಇರತಕ್ಕ ವಸ್ತುವಲ್ಲವಷ್ಟೆ! ಅದನ್ನು ಸದ್ವಿನಿಯೋಗಗೊಳಿಸುವುದು ಪ್ರತಿಯೊಬ್ಬನ ಪರಮಧರ್ಮ. ದ್ರವ್ಯವನ್ನು ಸಾಕ್ಷಾತ್ತಾಗಿ ಭಗವತ್ಸೇವೆಗಾಗಿಯೂ, ದೇವಾಲಯಯಾದಿ ಸತ್ಸಂಸ್ಥೆಗಳ ಜೀರ್ಣೋದ್ಧಾರಕ್ಕಾಗಿಯೂ ವಿನಿಯೋಗಿಸುವುದಕ್ಕಿಂತಲೂ ಇನ್ನು ಸದ್ವಿನಿಯೋಗ ಕಾರ್ಯವು ಮತ್ತಾವುದು! ಅಂತಹ ಕಾರ್ಯವನ್ನು ಭಕ್ತಶಿರೋಮಣಿಯಾದ ರಾಮದಾಸರು ಮಾಡಿ, ಅದರಿಂದ ಉಂಟಾಗುವ ಫಲಕ್ಕೆ ಶ್ರೀರಾಮನೇ ಗತಿ ಎಂದು ತಿಳಿದು ಧನ್ಯರಾಗಿದ್ದುಬಿಟ್ಟರು. ಆದರೆ,–'ಹೀಗೆ ಕಂಡವರ ಮನೆಯನ್ನು ಕೊಲಿಸಿ ತನ್ನ ಕುಟುಂಬ ರಕ್ಷಣೆಮಾಡಿ ಅದನ್ನೂ ವಿಹಿತಕಾರ್ಯವೇ ಎಂದುಕೊಳ್ಳಬಹುದಿಲ್ಲವೆ?' ಎಂದು ಯಾವನಾದರೂ ಯತ್ನಿಸಿದರೆ, ಅದರಿಂದ ಅವನು ಪರಮ ದ್ರೋಹಿಯಾಗದಿರಲಾರನು. ಧರ್ಮಮಾರ್ಗವು ಅತಿ ಸೂ

ಕ್ಷ್ಮವಾದುದು. ಅದರಲ್ಲಿ ಸ್ವಾರ್ಥತೆಯು ಲೇಶಮಾತ್ರ ಪ್ರವೇಶವಿದ್ದರೂ ಅದು ಕರ್ತೃವನ್ನು ಅಧಃಪಾತಾಳಕ್ಕೆ ತಳ್ಳದಿರಲಾರದು. ಆದುದರಿಂದ, ಮಹರ್ಷಿಗಳ ಮಹಾಭಕ್ತರ, ಮಹನೀಯರ ಕೆಲವು ಆಚರಣೆಗಳು ನಮ್ಮ ಪರಿಮಿತ ದೃಷ್ಟಿಯಲ್ಲಿ ಲೋಕವಿರುದ್ಧ ಧರ್ಮವಿರುದ್ಧಗಳೆಂಬಂತೆ ತೋರಿದರೂ, ಅವುಗಳನ್ನು ಆಚರಿಸಲು ಸಾಮಾನ್ಯರು ಎಂದಿಗೂ ಪ್ರವರ್ತಿಸಲಾಗದು.

ಇತ್ತ ರಾಮದಾಸರು ಹೀಗೆ ಭದ್ರಾದ್ರಿಯ ರಾಮಚಂದ್ರ ಸ್ವಾಮಿಗೆ ನಿತ್ಯೋತ್ಸವ ಪಕ್ಷೋತ್ಸವ ಮಾಸೋತ್ಸವ ಸಂವತ್ಸರೋತ್ಸವ, ರಥೋತ್ಸವಾದಿಗಳನ್ನು ವಿಜೃಂಭಣೆಯಿಂದ ಜರುಗಿಸುತ್ತಾ, ಸಕಲ ವಿಧ ದೇವಬ್ರಾಹ್ಮಣಾರಾಧನೆಗಳನ್ನೂ ನಡೆಸುತ್ತಾ ಇರುತ್ತಿದ್ದರು. ಆದರೆ ಅತ್ತ, ಗೋಲ್ಕೊಂಡಕ್ಕೆ ಭದ್ರಾಚಲ ತಹಶೀಲಿನ ಹಣವು ಏಕೆ ಸಕಾಲಕ್ಕೆ ಜಮಾ ಬರಲಿಲ್ಲವೆಂಬ ವಿಚಾರ ಹುಟ್ಟಿತು. ಆ ಸಂಗತಿಯನ್ನು ತಾನೀಷಾನಿಗೆ ತಿಳಿಸುವುದಕ್ಕೆ ಮುಂಚಿತವಾಗಿಯೇ, ಪ್ರಧಾನಿ ಅಕ್ಕನ್ನನು ಒಬ್ಬ ಆಪ್ತನೊಂದಿಗೆ ರಾಮದಾಸರಿಗೆ-'ಇಷ್ಟು ದಿನಗಳಾದರೂ ನಿಮ್ಮ ತಹಶೀಲಿನ ಹಣ ಬಂದಿಲ್ಲ, ಸುಲ್ತಾನರಿಗೆ ತಿಳಿದರೆ ಆಕ್ಷೇಪಿಸುವರು, ಆದ್ದರಿಂದ ಒಡನೆ ರವಾನಿಸಬೇಕು' ಎಂದು ಹೇಳಿಕಳುಹಿಸಿದನು. ಈ ಸಂದೇಶವನ್ನು ಕೇಳಿದ ರಾಮದಾಸರು, ಆತನೊಂದಿಗೆ—'ಅಯ್ಯಾ, ನಾನು ಭದ್ರಾದ್ರಿಯಲ್ಲಿ ನೆಲೆಸಿದ ಶ್ರೀ ರಾಮಭದ್ರನ ಕೈಂಕರ್ಯಕ್ಕಾಗಿ, ಆ ದ್ರವ್ಯವನ್ನೆಲ್ಲಾ ಉಪಯೋಗಿಸಿ ಗೋಪುರ ಪ್ರಾಕಾರಾದಿಗಳನ್ನು ನಿರ್ಮಿಸಿ, ಶ್ರೀರಾಮಸೇವಾ ಕಾರ್ಯವನ್ನು ಸಾಂಗವಾಗಿ ನೆರವೇರಿಸಿರುತ್ತೇನೆ. ಈ ಸಂಗತಿಯನ್ನು ಮಂತ್ರಿವರ್ಯರಿಗೆ ತಿಳಿಸು' ಎಂದು ಹೇಳಿಕಳುಹಿಸಿದರು.

ಈ ಸಂಗತಿಯು ಅಕ್ಕನ್ನ ಮಾದನ್ನರಿಗೆ ತಿಳಿದೊಡನೆಯೇ ಅವರು ಅಧೋಮುಖಿಗಳಾಗಿ, ಬಾಯಿಂದ ಮಾತು ಹೊರಡದೆ, ಮುಂದೆ ಏನು ಪ್ರಮಾದ ಸಂಭವಿಸುವುದೋ, ಎಂದು ಚಿಂತಿಸಲಾರಂಭಿಸಿದರು. ಈ ಸಂಗತಿಯು ಒಡನೆ ತಾನೀಷಾನಿಗೂ ತಿಳಿಸಲ್ಪಟ್ಟಿತು. ಸರ್ಕಾರದ ದ್ರವ್ಯವನ್ನು ಶಂಕೆಯಿಲ್ಲದೆ ಉಪಯೋಗಿಸಿ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದರೆಂಬುದನ್ನು ಕೇಳಿದ ಆ ತುರುಷ್ಕನು, ಕೋಪಾಕ್ರಾಂತನಾಗಿ—'ಒಡನೆ

ಗೋಪನ್ನನನ್ನು ಕೈದುಮಾಡಿ ಕರೆತನ್ನಿರಿ' ಎಂದು ಆಜ್ಞಾಪಿಸಿ ಸೇವಕರನ್ನು ಕಳುಹಿಸಿದನು. ಆ ಸೇವಕರು ರಾಜಾಜ್ಞಾಪತ್ರವನ್ನು ತಂದು ರಾಮದಾಸರ ಕೈಯಲ್ಲಿತ್ತು—'ಹೊರಡಿರಿ' ಎಂದು ತೊಂದರೆಗೊಳಿಸುತ್ತಿರಲು, ರಾಮದಾಸರು-'ಶ್ರೀರಾಮಾ, ಇದು ನಿನ್ನಾಜ್ಞೆ. ಪಾಮರನಾದ ನಾನು ನಿನ್ನ ಪ್ರೇರಣಾನುಸಾರ ನಿನ್ನ ಸೇವೆಯನ್ನು ಸಲ್ಲಿಸಿದ್ದೇನೆ. ಮುಂದೆ ಪ್ರಾಪ್ತವಾಗುವ ಕಷ್ಟ ಸುಖಗಳೆಲ್ಲವೂ ನಿನ್ನ ಪಾದಕ್ಕೆ ಅರಿಕೆ ಇರಲಿ. ಇಗೋ ನಿನ್ನ ಅಜ್ಞಾನುಸಾರ, ನಿನ್ನ ಸನ್ನಿಧಿಯನ್ನು ಬಿಟ್ಟು ಹೊರಡುತ್ತಿದ್ದೇನೆ. ಪ್ರಭೋ, ಪುನಃ ನಿನ್ನ ಪಾದದರ್ಶನವನ್ನು ಎಂದಿಗೆ ಕರುಣಿಸುತ್ತೀಯೆ !' ಎಂದು ತಾಯನ್ನು ಬಿಟ್ಟು ಹೋಗುವ ಎಳೆಗಂದಿ ಕರುವಿನಂತೆ ಹಂಬಲಿಸುತ್ತಾ,-ಆ ಭಕ್ತೋತ್ತಮನಿಗೆ ಪ್ರಾಪ್ತವಾದ ಕಷ್ಟಗಳಿಗಾಗಿ, ಆ ತಹಶೀಲಿನ ಜನಗಳೇ ಕಣ್ಣೀರಿಟ್ಟು ಮರುಗುತ್ತಿರಲು, ರಾಮದಾಸರು, ಹರಿಕಾರರೊಂದಿಗೆ ಹೊರಟು, ರಾಮಭಜನೆ ಮಾಡಿಕೊಳ್ಳುತ್ತಾ, ಗೋಲ್ಕೊಂಡವನ್ನು ಸೇರಿದರು.

ತಾನೀಷಾನು ರಾಮದಾಸರನ್ನು ಸಭೆಗೆ ಕರೆಸಿಕೊಂಡು:—'ಅಯ್ಯಾ, ರಾಮದಾಸರೇ ಎಲ್ಲಿ ಸರ್ಕಾರಕ್ಕೆ ಬರಬೇಕಾದ ಹಣವನ್ನು ಕಳುಹಿಸದೆ ನಾಶಮಾಡಿದಿರೇಕೆ ? ಗೋಲ್ಕೊಂಡ ನವಾಬನು ಬಹು ಖಂಡಿತ ಪ್ರಕೃತಿಯವನೆಂಬುದು ನಿಮಗೆ ತೋರಲಿಲ್ಲವೋ ?' ಎಂದು ನಿಷ್ಠುರವಾಗಿ ಕೇಳಿದನು.

ರಾಮದಾಸರು:—'ತಾನೀಷಾ ಪ್ರಭೋ, ನನ್ನ ವಿಷಯದಲ್ಲಿ ಏಕಿಷ್ಟು ಕೋಪ ಮಾಡುವಿರಿ ? ನಾನು ಮೋಸಗಾರನಲ್ಲ, ನಿಮ್ಮ ಕೀರ್ತಿಯು ಪ್ರಪಂಚದಲ್ಲಿ ಶಾಶ್ವತವಾಗಿ ನಿಲ್ಲುವಂಥ ಉತ್ತಮ ಧರ್ಮಕಾರ್ಯವನ್ನು ಮಾಡಿದ್ದೇನೆ.'

ತಾನೀಷ:—'ಇದು ಬಹು ವಿಚಿತ್ರವಾಗಿದೆ. ಮನುಷ್ಯನು ತಾನು ಸಂಪಾದಿಸಿದ ದ್ರವ್ಯದಿಂದ ಸ್ವತಂತ್ರಿಸಿ ಧರ್ಮಕಾರ್ಯ ಮಾಡಬಹುದಲ್ಲದೆ, ಯಾರದೋ ದ್ರವ್ಯವನ್ನು ಹೀಗೆ ಖರ್ಚುಮಾಡಬಹುದೆ ?'

ರಾಮದಾಸರು:—'ಪ್ರಭೋ, ನಿಮ್ಮ ನಗರದಲ್ಲೂ ಅರಮನೆಯಲ್ಲೂ ಆಗುವ ಒಂದು ದಿನದ ಖರ್ಚು ! ಅಷ್ಟು ಹಣವನ್ನು ಉಪಯೋಗಿಸಿ, ಭದ್ರಾ

ದ್ರಿಯಲ್ಲಿ ಬಹು ಶಿಥಿಲವಾಗಿ ಹೋಗಿದ್ದ ಶ್ರೀ ರಾಮರ ಗುಡಿಯನ್ನು ಜೀರ್ಣೋದ್ಧಾರ ಮಾಡಿದ್ದೇನೆ ! ಕ್ಷಮಿಸಿರಿ.

ತಾನೀಷಾ:—'ಅಲ್ಲವಯ್ಯಾ, ರಾಜದ್ರವ್ಯವನ್ನು - ಪ್ರಭುವಿನ ಅಜ್ಞೆಯಿಲ್ಲದೆ ಖರ್ಚುಮಾಡಿದರೆ, ತಲೆ ಹೋಗುವುದೆಂದು ನೀನು ಶಂಕಿಸಲಿಲ್ಲವೆ ?'

ರಾಮದಾಸರು:—'ತಾನೀಷಾ ಪ್ರಭೋ, ಈ ದೇಹವು ಅಸ್ಥಿರವಾದುದು. ಇದರ ಕಷ್ಟ ಸುಖಗಳನ್ನೆಣಿಸದೆ, ಶ್ರೀ ರಾಮ ಸೇವೆಯೆಂದು ಈ ಕಾರ್ಯವನ್ನು ಮಾಡಿಬಿಟ್ಟಿದ್ದೇನೆ. ನಿನ್ನ ಮನಬಂದಂತೆ ಮಾಡಬಹುದು'ಎಂದು ಪ್ರತ್ಯುತ್ತರವಿತ್ತು ಸುಮ್ಮನಾದರು.

ರಾಮದಾಸರ ನಿಸ್ಪೃಹಸ್ವಭಾವವೂ, ಅವರು ಆ ದ್ರವ್ಯದಲ್ಲಿ ಒಂದು ಕಾಸನ್ನೂ ಸ್ವಂತಕ್ಕಾಗಿ ಉಪಯೋಗಿಸಿಕೊಳ್ಳಲಿಲ್ಲವೆಂಬ ಸಂಗತಿಯೂ ತಾನೀಷಾನ ಮನಸ್ಸಿಗೆ ತೋಚಿತು. ಆದರೂ, ಈ ಸಂದರ್ಭದಲ್ಲಿ ರಾಮದಾಸರನ್ನು ಕ್ಷಮಿಸಿಬಿಟ್ಟರೆ, ಮುಂದೆ ಎಲ್ಲಾ ತಹಶೀಲಿನವರೂ ಹೀಗೆಯೇ ಮಾಡಲು ಆರಂಭಿಸಬಹುದೆಂದು ಶಂಕಿಸಿ, ಕೋಪಾಕ್ರಾಂತನಾದಂತೆ, ಕಣ್ಣುಗಳನ್ನು ಕೆಂಪು ಮಾಡಿಕೊಂಡು-'ಈ ಕಾರಣ ಗೀರಣಗಳು ನಮಗೆ ಬೇಕಿಲ್ಲ. ಒಂದು ವಾರದೊಳಗಾಗಿ ನಮ್ಮ ಹಣ ಜಮಾ ಬರಬೇಕು' ಎಂದು ನುಡಿದು 'ಇವರಿಗೆಸೆರೆಮನೆಯಲ್ಲಿಟ್ಟಿರಿ' ಎಂದು ರಾಜಭಟರಿಗೆ ಆಜ್ಞಾಪಿಸಿದನು. ರಾಜದೂತರು, ರಾಮದಾಸರನ್ನು ಕರೆದೊಯ್ದು ಬಂಧಿಸಿಟ್ಟರು. ಭಕ್ತ ಶ್ರೇಷ್ಠರಾದ ರಾಮದಾಸರು ಆ ಸೆರೆಮನೆಯಲ್ಲೂ ದಾಶರಥಿಯ ಪಾದಸ್ಮರಣೆಯನ್ನು ಮರೆಯದೆ ಧ್ಯಾನಮಾಡುತ್ತ, ನಿಶ್ಚಲಚಿತ್ತದಿಂದ ಇದ್ದುಬಿಟ್ಟರು.



## ಅಧ್ಯಾಯ ೬. ಶ್ರೀ ರಾಮಾನುಗ್ರಹ.

ಭಕ್ತಿ ಸಾಮ್ರಾಜ್ಯ ಚಕ್ರವರ್ತಿಗಳಾದ ರಾಮದಾಸರನ್ನು ರಾಜದೂತರು ಸೆರೆಮನೆಯಲ್ಲಿ ವಿವಿಧ ರೀತಿಗಳಿಂದ ಹಿಂಸಿಸ ತೊಡಗಿದರು. ಅವರ ಆಹಾರಕ್ಕೆಂದು, ಒಂದುಪಾವು ಅಕ್ಕಿ, ಒಂದುಪಾವು ಉಪ್ಪು ಇವುಗಳನ್ನು

ಬೆರೆಸಿ-'ಅನ್ನ ಮಾಡಿಕೊಂಡು ತಿನ್ನು' ಎಂದು ಕೊಡುವರು. ಚೂಪಾದ ಮೊಳೆಗಳನ್ನು ನೆಟ್ಟಿದ್ದ ಕೊಠಡಿಯಲ್ಲಿ ಅವರನ್ನು ಕುಳ್ಳಿರುವಂತೆ ನಿರ್ಬಂಧಿಸುವರು. ಕೊರಡೆಗಳಿಂದ ಹೊಡೆಯುವರು. ಮುಳ್ಳುಗಳನ್ನು ಹರಡಿದ ಬಯಲಿನಲ್ಲಿ ಓಡಿಸುವರು. ಚೂಪಾದ ಬೆಣಚು ಕಲ್ಲುಗಳಿಂದ ಕೂಡಿದ ನೆಲದಲ್ಲಿ ನಡೆಯಿಸುವರು. ಮಧ್ಯಾಹ್ನದ ಬಿರುಬಿಸಿಲಿನಲ್ಲಿ ಬರಿಯತಲೆಯಲ್ಲಿ ಕಾದ ನೆಲದಮೇಲೆ ನಿಲ್ಲಹೇಳುವರು. 'ಮೇಲೆ ಮೇಲೆ, ಎಲ್ಲಿ-ನಮ್ಮ ಹಣವನ್ನು ತಂದುಕೊಡು, ತಂದುಕೊಡು.' ಎಂದು ಪೀಡಿಸುವರು.

ಸಾಧುಶಿರೋಮಣಿ ರಾಮದಾಸರು, ಈ ಚಿತ್ರಹಿಂಸೆಗಳನ್ನು ತಾಳಲಾರದೆ-'ಅಕ್ಕಟಾ ಶ್ರೀ ರಾಮಚಂದ್ರಾ, ನಿನ್ನ ದಯೆಯು ಪಾಮರನಾದ ನನ್ನ ವಿಷಯದಲ್ಲಿ ದೂರವಾಯಿತೇ ! ದಾಸನಾದ ನನ್ನನ್ನು ಮರೆತೆಯಾ ? ದೀನನಾದ ನನ್ನ ಮೇಲೆ ದಯೆಯಿಲ್ಲದಾಯಿತೆ ? ನಾನು ಈ ಕಷ್ಟಗಳಿಗಾಗಿ ಬೆದರಿ ನಿನ್ನನ್ನು ಪ್ರಾರ್ಥಿಸುವುದಿಲ್ಲ. ಚಕ್ರವರ್ತಿ ಪುತ್ರನಾದ ನೀನು ಹದಿನಾಲ್ಕು ವರ್ಷಕಾಲ ವನವಾಸದಲ್ಲಿದ್ದು ಗೆಡ್ಡೆಗೆಣಸುಗಳನ್ನು ತಿಂದು ಕಾಲಯಾಪನೆ ಮಾಡಲಿಲ್ಲವೆ ? ಕಲ್ಲುಮುಳ್ಳುಗಳ ಮೇಲೆ ನಿನ್ನ ಮೃದುವಾದ ಪಾದಗಳನ್ನಿಟ್ಟು ಸಂಚರಿಸಲಿಲ್ಲವೆ ? ಮಳೆ ಬಿಸಿಲುಗಳನ್ನು ಸಹಿಸಿ ತಿರುಗಲಿಲ್ಲವೆ ? ರಾಮ ಪ್ರಭೋ, ನಿನ್ನ ಅನುಗ್ರಹವೊಂದು ನನ್ನಮೇಲಿದ್ದರೆ ಸಾಕು' ಎಂದು ಮನಸ್ಸಮಾಧಾನಗೊಳ್ಳುವರು. ಪ್ರಾಣಾಧಾರಕ್ಕಾಗಿ ಆ ಸೆರೆಮನೆಯ ಅಧಿಕಾರಿಗಳು ತಂದೀವ ಆಹಾರವನ್ನು ತೆಗೆದುಕೊಳ್ಳುವ ಹೊತ್ತಲ್ಲದೆ, ಮಿಕ್ಕ ವೇಳೆಯಲ್ಲಿ ಭಕ್ತವತ್ಸಲನಾದ ಶ್ರೀ ರಾಮನ ಧ್ಯಾನದಲ್ಲೇ ಮಗ್ನರಾಗಿ, ಕೈಚಪ್ಪಳೆಗಳನ್ನು ತಟ್ಟಿಕೊಂಡು ಭಜನೆಮಾಡುತ್ತ, ಉಚ್ಚಸ್ವರದಿಂದ 'ರಾಮ ರಾಮ' ಎಂದು ನಾಮಸಂಕೀರ್ತನೆ ಮಾಡುತ್ತಾ, ಹಲವು ವಿಧಗಳಲ್ಲಿ ರಾಮಚಾರಿತ್ರವನ್ನು ಗೀತಗಳಿಂದ ಕೀರ್ತಿಸುತ್ತ,-'ರಾಮ ಪ್ರಭುವಿನ ದಾಸನಾದ ನನಗೆ ಭವಬಂಧನವೇ ನಿವೃತ್ತಿಯಾಗುವಲ್ಲಿ, ಈ ಸೆರೆಮನೆಯ ಬಂಧನವು ಎಷ್ಟುಮಾತ್ರದ್ದು ?' ಎಂದು ಪರಮೋತ್ಸಾಹ ಯುಕ್ತರಾಗಿ ನರ್ತನ ಮಾಡಿಕೊಂಡು ರಾಮಧ್ಯಾನಪೂರ್ವಕ ಭಜನೆ ಮಾಡುತ್ತ, ಹೀಗೆ ನಿಶ್ಚಿಂತಮನಸ್ಕರಾಗಿ ಇದ್ದುಬಿಟ್ಟರು.

ದಿನದಿನಕ್ಕೆ ರಾಜಭಟರು ಮಾಡುತ್ತಿದ್ದ ಬಾಧೆಯು ಅಧಿಕವಾಗುತ್ತ ಬರುತ್ತಿರಲು, ರಾಮದಾಸರು ಆ ಬಾಧೆಗಳನ್ನು ತಡೆದುಕೊಳ್ಳಲು ಶಕ್ಯವಾಗದಿರಲು, ತಮ್ಮನ್ನು ಅಷ್ಟುದಿನಗಳಾದರೂ ಕಾಪಾಡದಿದ್ದ ತಮ್ಮ ಇಷ್ಟದೈವವಾದ ಶ್ರೀ ರಾಮನ ನಿಷ್ಠುರತೆಯನ್ನು ಕುರಿತು ಆಕ್ಷೇಪಿಸತೊಡಗಿದರು. ಶ್ರೀ ರಾಮಾ, ನಿನ್ನನ್ನು ಕರುಣಾನಿಧಿ ದಯಾಸಮುದ್ರ, ಭಕ್ತವತ್ಸಲ ಆರ್ತರಕ್ಷಣ ಎಂದು ಮುಂತಾಗಿ ಭಕ್ತರು ಪಾಡುತ್ತಿರುವ ಹೊಗಳಿಕೆಯೆಲ್ಲವೂ ಸುಳ್ಳೆಂದು ನನಗೆ ತೋರುತ್ತದೆ. ಸರ್ಕಾರದ ದ್ರವ್ಯವೆಂದು ಶಂಕಿಸದೆ, ರಾಜದ್ರೋಹವೆಂದು ಬೆದರದೆ, ಪಾಪಸಾಧನೆಯೆಂದು ಹಿಂಜರಿಯದೆ, ತಾನೀಷಾನ ಆರುಲಕ್ಷ ದ್ರವ್ಯವನ್ನು-ನಿನ್ನ ಪ್ರೇರಣೆಯಾದುದೇ ಸಾವಕಾಶವು, ಒಡನೆ ಖರ್ಚುಮಾಡಿ, ನಿನ್ನ ಗುಡಿಗೋಪುರಗಳನ್ನು ಕಟ್ಟಿಸಿದೆನಲ್ಲವೆ ? ಮಂಟಪ ಮೇಲ್ಕಟ್ಟುಗಳಿಂದ ಸಿಂಗರಿಸಿದೆನಲ್ಲವೆ ! ನಿನ್ನ ಸೇವೆಗಾಗಿ ಪಾಲಕಿ ರಥಗಳನ್ನು ಸಿದ್ಧಗೊಳಿಸಿಟ್ಟೆನಲ್ಲವೆ ? ನಿನಗೂ, ನನ್ನ ಮಾತೆ ಸೀತಾಂಬೆಗೂ ಬಗೆಬಗೆಯ ರತ್ನಾಭರಣಗಳನ್ನೂ, ನವನವೀನ ವಸ್ತ್ರ ಭೂಷಣಗಳನ್ನೂ ಒದಗಿಸಿದೆನಲ್ಲವೆ ? ಲಕ್ಷ್ಮಣ ಭರತ ಶತ್ರುಘ್ನರಿಗೂ ಬಗೆಬಗೆಯ ವಸ್ತ್ರಾಭರಣಗಳನ್ನು ಕೊಂಡು ಇತ್ತೆನಲ್ಲಾ ? ಇವುಗಳಿಗೆಲ್ಲಾ ದ್ರವ್ಯವೆಲ್ಲಿಯದು ! ನಿನಗೆ ನಾನು ಮಾಡಿದ ಆ ಸೇವೆಗೆ, ರಾಮಾ ನನಗೆ, ದೀನ ಜನ ಶರಣ್ಯನಾದ ನೀನು, ಈ ಶಿಕ್ಷೆಯನ್ನು ಅನುಗ್ರಹಿಸಿದೆಯಾ! ದಶರಥ ಪುತ್ರಾ ಭಕ್ತಜನ ಶರಣ್ಯಾ, ಹೀಗೆ ಆಕ್ಷೇಪಿಸಿದೆನೆಂದು ಕೋಪಿಸದೆ, ದಾಸಾನುದಾಸನಾದ ನನ್ನನ್ನು ಉದ್ಧರಿಸು ' ಎಂದು, ಬಗೆಬಗೆಯಿಂದ ಪ್ರಾರ್ಥಿಸಿಕೊಂಡರು.

ಹೀಗೆ ರಾಮದಾಸರು ಸೆರೆಮನೆಯಲ್ಲಿ ಹನ್ನೆರಡು ವರ್ಷಕಾಲ, ವರ್ಣಿಸಲಶಕ್ಯವಾದ ದುಃಖಪರಂಪರೆಗಳನ್ನು ಅನುಭವಿಸಿ. ಮುಂದೆ ಸಹಿಸಲಾರದೆ ಇನ್ನು ನಿಷ್ಠುರಿಯಾದ ರಾಮನನ್ನು ಬಿಟ್ಟು, ದಯಾಭರಿತಳಾದ ಮಾತೆ ಸೀತಾದೇವಿಯನ್ನು ಪ್ರಾರ್ಥಿಸಿ, ತನ್ಮೂಲಕ ರಾಮನ ದಯೆಯುಂಟಾಗುವಂತೆ ಮಾಡಿಕೊಳ್ಳಬೇಕೆಂದು, ಸೀತಾದೇವಿಯನ್ನು, ಹಲವು ಬಗೆಗಳಿಂದ ಪ್ರಾರ್ಥಿಸಿ ದೀನನಾದ ದಾಸನನ್ನು ರಕ್ಷಿಸುವಂತೆ ಪತಿಗೆ ಬೋಧಿಸೆಂದು ಬೇಡಿಕೊಂಡರು. ಕೊನೆಗೆ, ಆ ಸ್ಥಿತಿಯೂ ಅವರಿಗೆ ಬಹುಬೇಸರವನ್ನುಂಟು

ಮಾಡಿತು. 'ಇನ್ನು ಈ ಪಾಪಿದೇಹವನ್ನು ನೀಗುವುದೇಸರಿ' ಎಂದು ನಿಶ್ಚಯಿಸಿ, -'ಈ ರಾತ್ರಿ ಶ್ರೀ ರಾಮನ ದಯೆಯುಂಟಾಗದಿದ್ದರೆ- ದಯಾಶರಧಿಯೆಂದು ಭಕ್ತಶಿರೋಮಣಿಗಳಿಂದ ಕೀರ್ತಿತನಾದ ಆ ರಾಮನು, ಈ ದಿನ ನನ್ನನ್ನು ಉದ್ಧರಿಸದಿದ್ದರೆ-ಆತ್ಮಹತ್ಯ ಮಾಡಿಕೊಂಡು, ಈ ಬಂಧನದಿಂದ ನಿವೃತ್ತಿ ಹೊಂದುವೆ' ನೆಂದು ಸಂಕಲ್ಪಿಸಿ, ವಿಷದ ಬಟ್ಟಲನ್ನು ಬಳಿಯಲ್ಲಿಟ್ಟುಕೊಂಡು, ಮನಸಾರೆ ತಮ್ಮ ಇಷ್ಟದೈವವನ್ನು ಹೊಗಳಿ, ಆ ಆಯಾಸದಿಂದ ಹಾಗೆಯೇ ಸೊಕ್ಕಿ ಮಲಗಿದರು.

ಆದಿನರಾತ್ರಿ ಒಂದು ಚಮತ್ಕಾರ ನಡೆಯಿತು. ಶ್ರೀ ರಾಮಲಕ್ಷ್ಮಣರು-'ಇನ್ನು ಪರೀಕ್ಷೆಯು ಸಾಕು, ಈ ಭಕ್ತನನ್ನು ಸಂಕಟದಿಂದ ಮುಕ್ತನನ್ನಾಗಿ ಮಾಡಬೇಕು' ಎಂದು ಯೋಚಿಸಿ, ಸೇವಕರ ವೇಷದಿಂದ - ಮಧ್ಯರಾತ್ರಿಯಲ್ಲಿ ತಾನೀಷಾನ ಶಯ್ಯಾಗೃಹದಬಳಿ ನಿಂತು-'ರಾಮದಾಸರಿಂದ ರಾಜ ಭಂಡಾರಕ್ಕೆ ಸಲ್ಲಬೇಕಾದ ದ್ರವ್ಯವನ್ನು ಸ್ವೀಕರಿಸಿ, ಆತನನ್ನು ಬಂಧಮುಕ್ತನನ್ನಾಗಿಮಾಡೆ' ಂದು ಹೇಳಿದರು. ತಾನೀಷಾನು, ಮಧ್ಯ ರಾತ್ರಿಯಲ್ಲಿ ಹಾಗೆ ತನ್ನನ್ನು ಕುರಿತು ಸಂಬೋಧಿಸುವವರು ಯಾರೆಂದು ಆಶ್ಚರ್ಯಪಟ್ಟು, ಅವರನ್ನು ನೋಡಿ, ಅವರ ಅದ್ಭುತ ರೂಪು ತೇಜೋವಿಲಾಸಗಳನ್ನು ಕಂಡು ಬೆರಗಾಗಿ-'ನೀವು ಯಾರು, ಎಲ್ಲಿಂದ ಬಂದಿರಿ' ಎಂದು ಮುಂತಾಗಿ ಪ್ರಶ್ನಿಸಲು, ಅವರು,-'ನಾವು ಭದ್ರಾಚಲ ಶ್ರೀ ರಾಮದಾಸರ ಸೇವಕರು. ಆತನಿಂದ ಬಾಕೀ ಇರುವ ಸರ್ಕಾರದ ದ್ರವ್ಯವನ್ನು ತೀರಿಸಲು ಬಂದಿದ್ದೇವೆ' ಎಂದು ನುಡಿದು, ಅಷ್ಟು ದ್ರವ್ಯವನ್ನೂ ತಾನೀಷಾನ ಎದುರಿಗೆ, ಥೈಲ ಥೈಲಿಗಳಲ್ಲಿ ರಾಸೀ ಹಾಕಿದರು. ತಾನೀಷಾನು, ಆ ದ್ರವ್ಯರಾಶಿಯನ್ನು ಕಂಡು ಮಂತ್ರಮುಗ್ಧನಾದಂತೆ, ಏನು ಹೇಳಲೂ ತೋರದಿರಲು, ಮಾತನಾಡದೆ,-'ಅಷ್ಟು ಹಣವೂ ಪೂರ್ತಿಯಾಗಿ ನನಗೆ ವಸೂಲು ಬಂದಿದೆ, ಇನ್ನು ರಾಮದಾಸರನ್ನು ಬಂಧ ಮುಕ್ತರನ್ನು ಮಾಡಬಹುದು' ಎಂದು ನುಡಿದು, ರಸೀದಿ ಬರೆದು ಅವರ ಕೈಗಿತ್ತನು. ಹಣಸಂದ ರಸೀದಿಯು ಕೈಗೆಬಂದೊಡನೆಯೇ, ಸೇವಕ ವೇಷದಲ್ಲಿದ್ದ ಆ ಮೂರ್ತಿಗಳಿಬ್ಬರೂ ಅದೃಶ್ಯರಾದರು. ಆ ರಾತ್ರಿ ಅಕಸ್ಮಾತ್ತಾಗಿ ನಡೆದುಹೋದ ಈ ವಿಚಿತ್ರ ಪ್ರಸಂಗವು ತಾನೀಷಾನ ಮನಸ್ಸಿಗೆ ಅತ್ಯಾಶ್ಚರ್ಯಕರವಾಗಿ ತೋರಲು, ಆತನು

' ಇದೇನೋ ವಿಚಿತ್ರವಾಗಿದೆ. ರಾಮದಾಸನು ದೇವರ ಭಕ್ತನೆಂಬುದರಲ್ಲಿ ಸಂಶಯವಿಲ್ಲ. ಆತನಿಗಾಗಿ ದೇವರೇ ಈ ಬಗೆಯ ಅದ್ಭುತವನ್ನು ಜರುಗಿಸಿ ಇರಬಹುದು. ಇದನ್ನು ಪರೀಕ್ಷಿಸಬೇಕು ' ಎಂದುಕೊಂಡು, ಬೆಳಗಾಗುವುದನ್ನೇ ನಿರೀಕ್ಷಿಸಿಕೊಂಡಿದ್ದನು.

ಅಷ್ಟರಲ್ಲಿ ಇತ್ತ, ಸೆರೆಸಾಲೆಯಲ್ಲಿ ನೊಕ್ಕಿ ವ್ಯಿಮರೆತು ಬಿದ್ದಿದ್ದ ರಾಮದಾಸರ ಬಳಿಗೆ, ಮೇಲ್ಕಂಡಂತೆ ತಾನೀಷಾನಿಂದ ರಸೀದಿಯನ್ನು ಪಡೆದ ರಾಮ ಲಕ್ಷ್ಮಣರು ಬಂದು, ತಾನೀಷಾವೇಷದಿಂದ ಅವರಿಗೆ ಕಾಣಿಸಿಕೊಂಡು, ಆ ಹಣಸಂದ ರಸೀದಿಯನ್ನು ತಲ್ಪಿಸಿ,—' ಇನ್ನು ನೀವು ಬಂಧಮುಕ್ತರಾದಿರಿ ' ಎಂದು ನುಡಿದು ಹೊರಟುಹೋದಂತೆ ಭಾಸವಾಯಿತು. ಅಕಸ್ಮಾತ್ತಾಗಿ ಜರುಗಿದ ಈ ವಿಚಿತ್ರಕ್ಕೆ ಕಾರಣವನ್ನು ಊಹಿಸಿ ತಿಳಿಯಲಾರದೆ, ರಾಮದಾಸರು, ಭಕ್ತವತ್ಸಲನಾದ ಶ್ರೀರಾಮನೇ ದಿಕ್ಕೆಂದು, ಎಂದಿನಂತೆ ಅವನ್ನ ಶರಣರಾಗಿ ಪ್ರಾರ್ಥಿಸುತ್ತಾ, ಧ್ಯಾನಮಗ್ನರಾಗಿ, ಶ್ರೀರಾಮನ ಮಾನಸ ಪೂಜಾನಿರತರಾಗಿ ಕುಳಿತಿದ್ದರು. ಅಷ್ಟರಲ್ಲಿ ಪ್ರಾತಃಕಾಲವಾಗಲು, ತಾನೀಷಾನಿಂದ ಆಜ್ಞಪ್ತರಾದ ದೂತರು ಬಂದು, ಬಹು ಗೌರವದಿಂದ ರಾಮದಾಸರನ್ನು ಕಂಡು, ಅವರ ಕೈಕಾಲುಗಳಿಗಿದ್ದ ಸಂಕಲೆಗಳನ್ನು ತೆಗೆದು, ಸ್ನಾನಮಾಡಿಸಿ ಶುಭ್ರ ವಸ್ತ್ರಗಳನ್ನುಡಿಸಿ, ಮರ್ಯಾದಾಪೂರ್ವಕ ರಾಜಸಭೆಗೆ ಕರೆದೊಯ್ದರು. ಶ್ರೀ ರಾಮಾನುಗ್ರಹದಿಂದ ರಾಜ ಭಂಡಾರಕ್ಕೆ ಸಲ್ಲಬೇಕಾಗಿದ್ದ ಋಣವನ್ನು ತೀರಿಸಿದ್ದ, ಅವರ ಮಹಾಮಹಿಮೆಗಾಗಿ ಆಶ್ಚರ್ಯಪಟ್ಟು ತಾನೀಷಾನು ತನ್ನ ಆಸನದಿಂದ ಎದ್ದು, ಅವರನ್ನು ವಿಶೇಷರೀತಿಯಿಂದ ಗೌರವಿಸಿ-' ಮಹಾನುಭಾವ, ನಿಮ್ಮ ಯೋಗ್ಯತೆಯು ತಿಳಿಯದಿದ್ದುದರಿಂದ ಮೂಢನಾದ ನಾನು ಸರ್ಕಾರದ ದ್ರವ್ಯವು ಬರಲಿಲ್ಲವಲ್ಲಾ ಎಂಬುದಕ್ಕಾಗಿ, ಮಹಾ ಸಾಧುಶಿರೋಮಣಿಯಾದ ನಿಮಗೆ ಬಹುಬಾಧೆಯನ್ನುಂಟು ಮಾಡಿದೆ. ಶಾಂತಸ್ವರೂಪಿಗಳಾದ ನೀವು ದಯಮಾಡಿ ನನ್ನ ಈ ಅಪರಾಧವನ್ನು ಮನ್ನಿಸಿ ಕಾಪಾಡಬೇಕು' ಎಂದು, ಅನೇಕ ಬಗೆಯಿಂದ ಪ್ರಾರ್ಥಿಸಿ, ಸರ್ಕಾರದ ದ್ರವ್ಯವೆಲ್ಲವೂ ಸಂಪೂರ್ಣವಾಗಿ ವಸೂಲು ಬಂದಿತೆಂದು, ಪುನಃ ಅವರಿಗೆ ರಸೀದಿಯನ್ನು ಕೊಟ್ಟು, ಶ್ರೀರಾಮಾನುಗ್ರಹಕ್ಕೆ ಪಾತ್ರರಾದ ಅವರಿಗೆ ಅಮೌಲ್ಯ ವಸ್ತ್ರಭೂಷಣಗಳನ್ನು ಉಡುಗೊರೆಯಾಗಿ ಕೊಟ್ಟು ಗೌರವಿಸಿದನು.

ರಾಮದಾಸರು, ಆ ವಸ್ತ್ರ ಭೂಷಣಗಳನ್ನು 'ಶ್ರೀ ರಾಮಾರ್ಪಣವಾಗಲಿ' ಎಂದು ಸ್ವೀಕರಿಸಿ-'ಅಯ್ಯಾ ತಾನೀಷಾ, ಶ್ರೀರಾಮಚಂದ್ರಮೂರ್ತಿಯನ್ನು ಕಣ್ಣಾರೆ ಕಂಡ ನಿನ್ನ ಸಮಾನ ಧನ್ಯರಾರು! ಜನ್ಮಾಂತರದಲ್ಲಿ ಎಂತಹ ಸುಕೃತ ವಿಶೇಷವನ್ನು ಸಂಪಾದಿಸಿದ್ದೆಯೋ, ಈಗ ಪ್ರಭುಸಂದರ್ಶನಕ್ಕೆ ಯೋಗ್ಯನಾದೆ. ಧನ್ಯ ಧನ್ಯ' ಎಂದು ಪ್ರಶಂಸಿಸಿ, ಮಹಾ ಅಪರಾಧಿಯಾಗಿದ್ದರೂ, ತಮ್ಮ ವಿಷಯದಲ್ಲಿ ಶ್ರೀರಾಮನು ಪರಮಾನುಗ್ರಹಮಾಡಿದುದಕ್ಕಾಗಿ ಆ ಕೃಪಾಶರಧಿಯನ್ನು ಅನನ್ಯ ಮನಸ್ಕರಾಗಿ ಪ್ರಾರ್ಥಿಸುತ್ತಿದ್ದರು.



## ಉಪಸಂಹಾರ.

ತಾನೀಷಾನು ರಾಮದಾಸರ ಮಹಿಮೆಗಾಗಿ ಆಶ್ಚರ್ಯಪಟ್ಟು ಮಹಾ ಭಕ್ತರಾದ ಅವರಿಗೆ ಅತ್ಯಂತ ಪ್ರಿಯಕರವಾದ ಕಾರ್ಯಮಾಡಬೇಕೆಂದು -'ಓ ಭಕ್ತೋತ್ತಮರಾದ ರಾಮದಾಸರೇ, ನೀವು ಶಾಶ್ವತವಾಗಿ ನಿಮ್ಮ ಇಷ್ಟದೈವವನ್ನು ಪೂಜೆಮಾಡಿಕೊಂಡು ಬರಲು ಯಾವ ನಿರ್ಬಂಧವೂ ಉಂಟಾಗದಂತೆ, ಭದ್ರಾಚಲವನ್ನು ನಿಮಗೆ ಮಾನ್ಯವಾಗಿ ಬಿಟ್ಟುಕೊಟ್ಟಿದ್ದೇನೆ. ಇನ್ನು ನೀವು ಆ ಗ್ರಾಮವನ್ನು ಸೇರಿ, ನಿಮ್ಮ ಇಷ್ಟಬಂದಂತೆ ದೇವತಾ ಸೇವೆಯನ್ನು ಮಾಡಿಕೊಂಡಿರಿ' ಎಂದು ಬಿನ್ನವಿಸಿಕೊಂಡು, ವಿಶೇಷ ಧನಕನಕಾದಿಗಳನ್ನೂ ವಸ್ತ್ರಭೂಷಣಗಳನ್ನೂ ಒಪ್ಪಿಸಿ, ಗೌರವ ಪೂರ್ವಕವಾಗಿ ಬೀಳ್ಕೊಟ್ಟನು. ರಾಮದಾಸರ ಈ ಮಹಿಮೆಯನ್ನು ಕಂಡ ಅಕ್ಕನ್ನ ಮಾದನ್ನರಿಗೂ ಇತರ ಆಪ್ತಜನರಿಗೂ ಪರಮಾನಂದವಾಯಿತೆಂದು ಹೇಳಬೇಕೇನು?

ತರುವಾಯ ರಾಮದಾಸರು ಮಿತ್ರಪರಿವಾರದೊಂದಿಗೆ ಅಂದಣವೇರಿ ಭದ್ರಾಚಲಾಭಿಮುಖವಾಗಿ ಪ್ರಯಾಣಮಾಡಿದರು. ರಾಮದಾಸರು ಶ್ರೀರಾಮಾನುಗ್ರಹದಿಂದ ಬಂಧಮುಕ್ತರಾಗಿ, ಭದ್ರಾಚಲವನ್ನು ಮಾನ್ಯವಾಗಿ ಪಡೆದು ಬರುತ್ತಿದ್ದಾರೆಂಬ ವರ್ತಮಾನವನ್ನು ಕೇಳಿದ ಪರಿಜನ ಪುರಜನರು ವಾದ್ಯ ವೈಭವದಿಂದ ಅವರನ್ನು ಎದುರುಗೊಂಡು ಗೌರವಿಸಿ, - 'ಮಹಾ ಭಕ್ತಶಿರೋಮಣಿ' ಎಂದುಹೊಗಳಿ, ಆದರನ್ನು ಗ್ರಾಮಪ್ರವೇಶಗೊಳಿಸಿದರು. ರಾಮದಾಸರು, ನಾವಕಾಶಮಾಡದೆ ದೇವಾಲಯ ಪ್ರವೇಶಮಾಡಿ, ತಮ್ಮಾ ಹೃದಯಸ್ಥ ರಾಮಸ್ವಾಮಿಯನ್ನು ಕಣ್ತುಂಬ ದರ್ಶನಮಾಡಿ, ಭಕ್ತಿಭಾವ

ವು ಮೇರೆಮೀರಿ ಪ್ರವಹಿಸುತ್ತಿರಲು, ಗದ್ಗದ ಸ್ವರದಿಂದ ಹಲವು ಬಗೆಯಲ್ಲಿ ಶ್ರೀರಾಮನ ಕಲ್ಯಾಣ ಗುಣಗಳನ್ನು ಕೀರ್ತಿಸಿ, ಆನಂದಸಾಗರದಲ್ಲಿ ಓಲಾಡುತ್ತಾ, ಹಾಡುತ್ತಾ, ನರ್ತನಮಾಡುತ್ತಾ, ತಮ್ಮನ್ನೇ ತಾವು ಮರೆತು, ರಾಮಧ್ಯಾನ ನಿರತರಾಗಿದ್ದುಬಿಟ್ಟರು.

ಸರಿ, ಮುಂದೆ ಕೇಳುವುದೇನು ? ಶ್ರೀ ರಾಮದಾಸರು, ನಿರಾತಂಕವಾಗಿ ತಮಗೆ ತಾನೀಷಾನು ಕೊಟ್ಟ ಆ ಮಾನ್ಯದಿಂದ ಉತ್ಪತ್ತಿಯಾದ ದ್ರವ್ಯವನ್ನೆಲ್ಲ ಶ್ರೀರಾಮರ ಸೇವೆಗೇ ವಿನಿಯೋಗಿಸಿ, ಸ್ವಾಮಿಗೆ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ ಸಂವತ್ಸರೋತ್ಸವ ಮುಂತಾದ ಸಕಲ ಬಗೆಯ ಮಹೋತ್ಸವಗಳೂ ಸಾಂಗವಾಗಿ ನೆರವೇರಲು ಅನುಕೂಲತೆಗಳನ್ನು ಉಂಟುಮಾಡಿದರು.

ಮುಂದೆ ಕೆಲವು ದಿನಗಳಮೇಲೆ, ವೃದ್ಧಾಪ್ಯ ಪೀಡಿತರಾದ ರಾಮದಾಸರಿಗೆ ಕಾಲುನೋವು ಉಂಟಾಗಿ, ಆ ಬಾಧೆಯೇ ಬರುತ್ತಾ ಬರುತ್ತಾ ಪ್ರಬಲವಾಗಲು, ಇನ್ನು ತಮಗೆ ಅಂತ್ಯಕಾಲವು ಪ್ರಾಪ್ತವಾಯಿತೆಂಬುದನ್ನು ಅರಿತು, ಜನ್ಮಸಾರ್ಥಕ್ಯಕ್ಕೆ ಶ್ರೀರಾಮಧ್ಯಾನವೇ ಪರಮಸಾಧನವೆಂದು ಸಂಬಿ, ಕ್ಷಣಕಾಲವನ್ನೂ ವ್ಯರ್ಥಮಾಡದೆ ರಾಮಧ್ಯಾನ ತತ್ಪರರಾಗಿ, 'ರಾಮಭಜನೆಯಲ್ಲಿ ನಿರತರಾಗಿರಿ' ಎಂದು ಸಕಲರಿಗೂ ಬೋಧಿಸಿ, ಮಹಾಭಕ್ತರಾದ ತಮಗಾಗಿ ವೈಕುಂಠದಿಂದ ಬಂದ ದಿವ್ಯ ವಿಮಾನದಲ್ಲಿ ಕುಳಿತು, ಭಜಕಮಂಡಲಿಗೆ ಅದೃಶ್ಯರಾಗಿ ಪರಮ ಪದವನ್ನು ಸೇರಿದರು.

ಭಗವದ್ಭಕ್ತ ಶಿರೋಮಣಿಗಳ ಚರಿತ್ರೆಯು ಅತಿ ವಿಚಿತ್ರವಾದುದು. ಭಗವಂತನ ಮತ್ತು ಆತನ ಅಂತರ್ಯಭಕ್ತರ ಮಹಿಮೆಯನ್ನು ನಮ್ಮ ಅಲ್ಪಭಾವನಾ ಪಾತ್ರೆಗಳಿಂದ ಅಳೆಯಲು ಎಂದಿಗೂ ಪ್ರಯತ್ನಿಸಲಾಗದು. ಶ್ರೀ ರಾಮದಾಸರು ಮಹಾಭಕ್ತರಾಗಿ, ತಮ್ಮ ಇಷ್ಟದೈವವನ್ನು ನಿಷ್ಕಲ್ಮಷ ಚಿತ್ತವೃತ್ತಿಯಿಂದ ಆರಾಧಿಸಿ, ಜಗತ್ತಿಗೆ ಭಕ್ತಿಪಂಥದ ಶ್ರೇಷ್ಠತೆಯನ್ನು ಪ್ರದರ್ಶಿಸಿದರು. ಇವರ ಈ ಉತ್ತಮ ಚರಿತ್ರವು, ಭಕ್ತವೃಂದಕ್ಕೆ ಮಾರ್ಗದರ್ಶಕವಾಗಿ, ಅವರ ಹೃದಯದಲ್ಲೂ ಶ್ರೀರಾಮಭಕ್ತಿಯ ಅಮೃತ ಬೀಜಗಳನ್ನು ಬಿತ್ತಿ,-ಅವು ರಾಮದಾಸರ ಜೀವಿತದಲ್ಲಿ, ಕಲ್ಪವೃಕ್ಷವಾಗಿ ಬೆಳೆದು ಅಮೃತಮಯ ಫಲಗಳನ್ನು ಕೊಟ್ಟಂತೆಯೇ-ದಿವ್ಯ ಫಲಗಳನ್ನು ಪ್ರಸಾದಿಸಿ ಜಗತ್ತನ್ನು ಸ್ವರ್ಗ ಸದೃಶವನ್ನಾಗಿಸಲು ಸಹಕಾರಿಗಳಾಗಲಿ! ಸಕಲ ಸದ್ಭಕ್ತರಿಗೂ ಶ್ರೀರಾಮಾನುಗ್ರಹವಾಗಲಿ!

**ತಥಾಸ್ತು.**

ಶ್ರೀರಾಮ ಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

---

**ಮುನ್ನುಡಿ:—**

ಪ್ರಕೃತ ಚರಿತ್ರೆಯು 'ಸುಕನ್ಯಾ' ಎಂಬ ಒಬ್ಬ ಸಾಧ್ವೀಶಿರೋಮಣಿಯ ಆಶ್ಚರ್ಯಕರ ಚರಿತ್ರೆಯನ್ನು ನಿರೂಪಿಸಲುಳ್ಳುದು. ಸುಕನ್ಯಾ ಎಂಬ ನಾಮವೇ ಆ ನಾರೀರತ್ನದ ಶೀಲವೆಂತಿದ್ದಿತು ಎಂಬುದನ್ನು ತಿಳಿಸಲು ಸಾಕಾಗಿದೆಯಲ್ಲವೆ? ಅನೇಕ ಸಂದರ್ಭಗಳಲ್ಲಿ ಮನುಷ್ಯನ ಅಂಕಿತನಾಮವು, ಅವನ ಲೌಕಿಕಕ್ರಿಯೆಗೆ ಅತಿಶಯ ವಿರುದ್ಧ ಸ್ವಭಾವವನ್ನುಳ್ಳುದಾಗಿರುವುದುಂಟು. ಆದರೆ ಸತ್ಕುಲ ಪ್ರಸೂತರಾದ ಮಹನೀಯರು, ಸದ್ಗುಣ ಸಂಪನ್ನತೆಗಳಿಂದ ಕೂಡಿದ ತಮ್ಮ ಕ್ರಿಯೆಗಳಿಂದ, ತಮ್ಮ ಕುಲಶೀಲಗಳ ಗೌರವಕ್ಕೆ ವಿರೋಧವುಂಟಾಗದಂತೆ ಆಚರಿಸಿ, ಲೋಕಕ್ಕೇ ಮಾರ್ಗದರ್ಶಕರಾಗುವರಲ್ಲದೆ ಅನ್ವರ್ಥ ನಾಮಧೇಯವುಳ್ಳವರೂ ಆಗುವರು. ನಮ್ಮ ಕಥಾನಾಯಿಕೆಗೆ ಆಕೆಯ ಮಾತಾಪಿತೃಗಳು ಇಟ್ಟ 'ಸುಕನ್ಯಾ' ನಾಮಧೇಯವು, ಆಕೆಯ ಚರಿತ್ರೆಯಲ್ಲಿ ಹೇಗೆ ಅನ್ವರ್ಥನಾಮವಾಗಿ ಪರಿಣಮಿಸಿತು ಎಂಬುದನ್ನು ವಾಚಕ ಮಹಾಶಯರು ಕಥಾನುಸರಣೆಯಿಂದ ತಿಳಿಯಬಹುದು.

ಪೂರ್ವಕಾಲದಲ್ಲಿ, ತಪಸ್ಸಂಪನ್ನರಾದ ಬ್ರಾಹ್ಮಣರ ತೇಜಸ್ಸು ಅತಿಶಯ ಉಜ್ವಲವಾಗಿದ್ದು, ಅವರಿಗೆ ಸಕಲರಿಂದಲೂ ಪೂಜ್ಯತೆಯನ್ನು ಉಂಟುಮಾಡಿ ಕೊಡುವ ಪ್ರಬಲ ಸಾಧನವಾಗಿದ್ದಿತು. ಜನರು ಬ್ರಾಹ್ಮಣರನ್ನು, ಭೂಸುರರು - ಭೂ ದೇವತೆಗಳು ಎಂದು ಸಂಬೋಧಿಸಿ ಗೌರವಿಸುತ್ತಿದ್ದರು. ಇಂತಹ ಅನುಪಮ ಗೌರವವು ಸುಲಭವಾಗಿ ಲಭ್ಯವಾದೀತೇ?

ಆ ಕಾಲದಲ್ಲಿ ಬ್ರಾಹ್ಮಣರು ಅಗಾಧ ತಪಸ್ಸಂಪನ್ನರೂ ಮಂತ್ರಸಿದ್ಧರೂ ಆಗಿದ್ದು-ರಾಜಾಧಿರಾಜರಿಂದಲೂ ಸಾರ್ವಭೌಮರಿಂದಲೂ ಪಾದಪೂಜೆಗೊಳ್ಳುತ್ತಿದ್ದರು. ಜನಾಂಗವಾದರೋ—

'ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂತು ದೇವತಾಃ
ತನ್ಮಂತ್ರಂ ಬ್ರಾಹ್ಮಣಾಧೀನಂ ಬ್ರಾಹ್ಮಣೋ ಮಮ ದೇವತಾ'

ಎಂದರೆ—'ಜಗತ್ತಿನ ಸಕಲ ಕಾರ್ಯಗಳೂ ದೈವಧೀನವಾಗಿರುವುವು. ದೇವತೆಗಳಾದರೋ ಮಂತ್ರಾಧೀನರಾಗಿದ್ದಾರೆ. ಅಂತಹ ಮಂತ್ರವು ಬ್ರಾಹ್ಮಣರಿಗೆ ಸ್ವಾಧೀನವಾಗಿರುವುದು. ಆದುದರಿಂದ ಬ್ರಾಹ್ಮಣರನ್ನೇ ನನ್ನ ದೇವರೆಂದು ಆರಾಧಿಸುವೆನು' ಎಂದು ಭಾವಿಸಿ ಗೌರವಿಸುತ್ತಿದ್ದಿತು. ಬ್ರಾಹ್ಮಣರು ಇಂತಹ ಅಲಭ್ಯ ಪದವಿಯನ್ನು ತಮ್ಮ ವಿದ್ಯೆ, ತಪಸ್ಸು, ವೇದಾಧ್ಯಯನ, ಬ್ರಹ್ಮಚರ್ಯ, ಶಮ ದಮಾದಿ ಸಾಧನ ಸಂಪತ್ತುಗಳು, ಸತ್ಯವಾಕ್ಯ, ಋಜುವರ್ತನೆ, ಉಜ್ವಲ ಬ್ರಹ್ಮತೇಜಸ್ಸು ಇವುಗಳಿಂದ ಗಳಿಸಿಕೊಂಡಿದ್ದರು. ಈ ಗುಣಗಳನ್ನು ಗಳಿಸಿಕೊಂಡವರು ಅಂದು ಮಾತ್ರವಲ್ಲ-ಇಂದೂ, ಎಂದೆಂದಿಗೂ ಜಗತ್ತಿನಲ್ಲಿ ಪೂಜನೀಯರಾಗಿರುವರು.

'ಗುಣಾಃ ಪೂಜಾಸ್ಥಾನಂ' ಎಂಬಂತೆ, ಗುಣಗಳೇ ಪೂಜನೀಯಗಳಾದುದರಿಂದ, ಮನುಷ್ಯನು ತನ್ನ ಗುಣ ನಡತೆ ಶೀಲ ಸ್ವಭಾವಗಳನ್ನು ಸತ್ವಮಯವನ್ನಾಗಿಸಿಕೊಂಡರೆ ತರುವಾಯ ಗೌರವವು ಅಪೇಕ್ಷಿಸದೆಯೇ ಲಭ್ಯವಾಗುವುದು. ಆದರೆ, ತನ್ನ ಗುಣ ನಡತೆಗಳನ್ನು ತಿದ್ದಿಕೊಳ್ಳದ, ಹೇಯವೃತ್ತಿಯ, ಶ್ವಪಚ ಮನುಷ್ಯನು ಕೇವಲ ತನ್ನ ಜನನ ಸ್ಥಾನದಿಂದ ಮಾತ್ರವೇ ಪ್ರತಿಷ್ಠೆಯು ಬೇಕೆಂದರೆ ಅದು ಹೇಗೆ ದೊರೆತೀತು? ಅಮೃತವೂ ಮತ್ತು ಕಾಲಕೂಟವೂ ಕ್ಷೀರ ಸಮುದ್ರದಲ್ಲಿ ಜನಿಸಿದ ವಸ್ತುಗಳೇ; ಕಮಲ-ಕಪ್ಪೆಗಳೆರಡೂ ಕೆಸರಿನಲ್ಲೇ ಇರುವುವು. ಆದರೆ ಅಮೃತ ಮತ್ತು ಕಮಲಗಳನ್ನು ಜನರು ಪ್ರೇಮದಿಂದಲೂ ಪೂಜ್ಯಭಾವದಿಂದಲೂ ಗ್ರಹಿಸುವರೇಕೆ? ಕಾಲಕೂಟ ಮತ್ತು ಕಪ್ಪೆಗಳನ್ನು ನಿರಾಕರಿಸುವರೇಕೆ? ಗುಣವೇ ಪೂಜಾಸ್ಥಾನೀಯವಾದುದು. ಆದುದರಿಂದ ಲೋಕದಲ್ಲಿ ಗೌರವ ಪ್ರತಿಷ್ಠೆ

ಗಳನ್ನು ಸಂಪಾದಿಸಿ, ತನ್ನ ಕುಲದ ಮತ್ತು ವಂಶದ ಕೀರ್ತಿಯನ್ನು ಹೆಚ್ಚಿಸ ಬೇಕೆಂದು ಅಪೇಕ್ಷಿಸುವವನು ಉತ್ತಮಗುಣಗಳನ್ನು ಅಭ್ಯಸಿಸಿ, ತನ್ನ ನಿತ್ಯದ ನಡೆವಳಿಕೆಯಲ್ಲಿ ತಂದು ಜಗತ್ತಿಗೆ ಮಾರ್ಗದರ್ಶಕನಾಗಬೇಕು. ಸತ್ವಮಯ ಸ್ವಭಾವವನ್ನುಂಟಾಗಿದ್ದು, ಉತ್ತಮ ಗುಣ ನಡತೆಗಳನ್ನುಳ್ಳವ ನನ್ನು-ಜಾತಿ ಮತ ಭೇದಗಳನ್ನೆಣಿಸದೆ ಜಗತ್ತೇ ಗೌರವಿಸಿ ಅನುಸರಿಸಿ ನಡೆ ವುದು. ಅಂತಹ ಪುರುಷಶ್ರೇಷ್ಠನು ಉನ್ನತ ಕುಲದಲ್ಲಿ ಜನಿಸಿದವನಾಗಿಯೂ ಇದ್ದರೆ ಇನ್ನು ಕೇಳಬೇಕಾದುದೇನು ?

ಸುಕನ್ಯಾದೇವಿಯೂ ಆಕೆಯ ಪತಿಯಾದ ಚ್ಯವನಮಹರ್ಷಿಯೂ ತ ಮ್ಮ ಅಗಾಧ ತಪಸ್ಸಿನಿಂದ ಉಜ್ವಲ ತೇಜಸ್ಸನ್ನು ಸಂಪಾದನೆ ಮಾಡಿದ್ದರು. ಆ ತಪೋಮಹಿಮೆಯು ವೃದ್ಧನೂ ಕುರೂಪಿಯೂ ಆದ ಆತನಿಗೆ ದೇವ ಯೋ ಗ್ಯವಾದ ಸೌಂದರ್ಯವನ್ನೂ, ನವಯೌವನ-ದೇಹ ಕಾಂತಿಗಳನ್ನೂ ಗಳಿಸಿ ಕೊಟ್ಟುದು ಮಾತ್ರವಲ್ಲ-ದೇವ ವೈದ್ಯರಾದ ಅಶ್ವಿನೀ ದೇವತೆಗಳಿಗೆ ಸಹಾ ಯಕನಾಗುವಂತಹ ಅತಿಶಯ ಪ್ರತಿಭೆಯನ್ನೂ ಸಂಪಾದಿಸಿಕೊಟ್ಟಿತು. ಅದೇ ತಪೋಮಹಿಮೆಯಿಂದಲೇ ಆ ಭೂಸುರಶ್ರೇಷ್ಠನು ವಜ್ರಹಸ್ತನಾದ ಇಂ ದ್ರನನ್ನೂ ತಡೆಗಟ್ಟಿ ನಿಲ್ಲಿಸಿ ತನ್ನ ಬ್ರಹ್ಮತೇಜದ ಸಾಮರ್ಥ್ಯವನ್ನು ಪ್ರಕಟಿಸಿ ದನು. ಲೋಕದಲ್ಲಿ ಇಂದು ಬ್ರಾಹ್ಮಣರು ಜನಾಂಗದ ಲಕ್ಷ್ಯವನ್ನು ತಮ್ಮ ಕಡೆಗೆ ಆಕರ್ಷಿಸಿಕೊಂಡು ಪೂಜ್ಯತೆಯನ್ನೂ ಪ್ರತಿಷ್ಠೆಯನ್ನೂ ಪಡೆಯಬೇ ಕೆಂದು ಅಪೇಕ್ಷಿಸುವುದಾದರೆ, ತಾವು ಕೇವಲ ಬ್ರಾಹ್ಮಣ ಮಾತಾಪಿತೃಗ ಳಿಂದ ಜನನ ಹೊಂದಿದುದರಿಂದ ಮಾತ್ರವಲ್ಲ-ತಮ್ಮ ಸತ್ಯ ಧರ್ಮನಿಷ್ಠೆಗ ಳಿಂದ, ತಮ್ಮ ಇಂದ್ರಿಯನಿಗ್ರಹ ಬ್ರಹ್ಮತೇಜಗಳ ಬಲದಿಂದ, ತಮ್ಮ ವಿದ್ಯಾ-ವೈದುಷ್ಯಾದಿಗಳಿಂದ, ತಮ್ಮ ಸದ್ಗುಣ ಸದಾಚರಣೆಗಳ ಪ್ರಭಾವ ದಿಂದ, ತಮ್ಮ ಜ್ಞಾನ-ಔದಾರ್ಯಾದಿ ಪೂಜ್ಯಗುಣಗಳ ಪ್ರಕಟಣೆಯಿಂದ ಮಾತ್ರ ಅದು ಸಾಧ್ಯವಾದೀತು ! ಈ ಗುಣಗಳನ್ನು ಗಳಿಸದೆಯೇ ನಮಗೆ ಪೂಜ್ಯತೆ ಮಾತ್ರ ಉಂಟಾಗಬೇಕೆಂದರೆ, ಅದು ಹೇಗೆ ಸಾಧ್ಯವಾದೀತು ! ' ಕೈ ಕೆಸರಾಗದಿದ್ದರೆ-ಬಾಯಿ ಮೊಸರನ್ನು ಕಾಣಲಾದೀತೆ ? '

ವಾಚಕ ಮಹಾಶಯರು, ಗ್ರಂಥಮಾಲೆಯ ವಿಷಯದಲ್ಲಿ ತೋರಿ

ಸುತ್ತಿರುವ ಸಹಜ ಪ್ರೇಮದಿಂದ, ಈ ಸಾಧ್ವೀಮಣಿಯ ಚರಿತ್ರವನ್ನೂ ಆದರಿಸಿ ಸ್ವೀಕರಿಸಿ, ನಮ್ಮ ಭಾಷಾ ಸೇವಾಕಾರ್ಯವನ್ನು ಪ್ರೋತ್ಸಾಹಿಸ ಬೇಕಾಗಿ ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ
ತಾ|| ೧೨-೮-೧೯೩೦

ಇತಿ ಸುಜನ ವಿಧೇಯ,
**ಯಂ. ರಾಮರಾವ್.**



# ಸ್ತ್ರೀ ಧರ್ಮ ರಹಸ್ಯ

ಶ್ಲೋ. ನಾಸ್ತಿ ಭಾರ್ಯಾ ಸಮೋ ಬಂಧುರ್ನಾಸ್ತಿ ಭಾರ್ಯಾ ಸಮಾಗತಿಃ
ನಾಸ್ತಿ ಭಾರ್ಯಾ ಸಮೋ ಲೋಕೇ ಸಹಾಯೋ ಧರ್ಮಸಂಗ್ರಹೇ

ತಾ. ಪುರುಷನಿಗೆ, ತನ್ನ ಪತ್ನಿಗೆ ಸಮಾನವಾದ ಬಂಧು ಬೇರೆಯಿಲ್ಲ; ಪತ್ನಿಗೆ ಸಮಾನಳಾದ ದಿಕ್ಕು ಯಾರೂ ಇಲ್ಲ; ಮತ್ತು ಈ ಲೋಕದಲ್ಲಿ ಧರ್ಮಸಂಗ್ರಹಣಕಾರ್ಯಕ್ಕೆ ಪತ್ನಿಯಂತೆ ಸಹಾಯಕರಾಗತಕ್ಕವರು ಬೇರೆ ಯಾರೂ ಇಲ್ಲ.

ಶ್ಲೋ. ಭಕ್ತಿಃ ಪ್ರೇಯಸಿ, ಸಂಶ್ರಿತೇಷುಕರುಣಾ ಶ್ವಶ್ರೂಷು ನಮ್ರಂಶಿರಃ
ಪ್ರೀತಿರ್ಯಾತೃಷು, ಗೌರವಂ ಗುರು ಜನೇ, ಕ್ಷಾಂತಿಃ ಕೃತಾಗಸ್ಯಪಿ
ಅಮ್ಲಾನಃ ಕುಲಯೋಷಿತಾಂ ವ್ರತವಿಧಿಃ ಸೋಯಂ ವಿಧೇಯಃ ಪುನ
ರ್ಮದ್ಭರ್ತುರ್ದಯಿತಾ ಇತಿ ಪ್ರಿಯಸಖೀ ಬುದ್ಧಿಃ ಸಪತ್ನೀಷ್ವಪಿ

ಪತಿಯಲ್ಲಿ ಭಕ್ತಿಯೂ, ಆಶ್ರಿತರಲ್ಲಿ ದಯೆಯೂ, ಅತ್ತೆಮಾವಂದಿರಲ್ಲಿ ವಿಧೇಯತೆಯೂ, ಭಾವಮೈದುನರಲ್ಲಿ ಪ್ರೀತಿಯೂ, ದೊಡ್ಡವರಲ್ಲಿ ಗೌರವವೂ, ಅಪರಾಧಿಗಳಲ್ಲಿ ಕ್ಷಮೆಯೂ, ಹಸನ್ಮುಖವೂ, ತನ್ನ ಸಾಪತ್ನಿ (ಸವತಿ) ಯ ವಿಷಯದಲ್ಲಿ ಸಹ-ತನ್ನ ಪತಿಗೆ ಪ್ರಿಯಳಾದ ಕಾರಣ ತನಗೂ ಪ್ರಿಯಸಖಿ ಯೆಂಬ ಭಾವನೆಯೂ ಇರುವುದು ಕುಲಸ್ತ್ರೀಯರ ಧರ್ಮವಾದ ಕಾರಣ ಸ್ತ್ರೀಯರು ಇವುಗಳನ್ನೆಲ್ಲ ಅನುಸರಿಸಬೇಕು.

---



ಸಾಧ್ವೀ ಸುಕನ್ಯಾ

ಶ್ರೀರಾಮ ಸಹಾಯಂ

ಸಾಧ್ವೀ

# ಸುಕನ್ಯಾ

---

ಅಧ್ಯಾಯ ೧ "ದಶಪುತ್ರ ಸಂತಾನ"

ನಮ್ಮ ಮಾತೃಭೂಮಿಯಾದ ಈ ಭಾರತದೇಶವು ಅತಿ ಪುರಾತನವಾದುದು! ಇದರ ಪ್ರಾಚೀನತೆಯನ್ನು-ಇಷ್ಟು ವರ್ಷಗಳು, ಇಷ್ಟು ಸಹಸ್ರ ವರ್ಷಗಳು, ಇಷ್ಟು ಲಕ್ಷ ವರ್ಷಗಳು ಎಂದು ಎಣಿಸಿ ಗೊತ್ತುಮಾಡಲು ಸಾಧ್ಯವಿಲ್ಲ. ಜಗತ್ತು ಹೇಗೆ ಅನಾದಿ ಎಂದು ಒಪ್ಪಿಕೊಳ್ಳಬೇಕೋ ಹಾಗೆಯೇ ನಮ್ಮ ಮಾತೃಭೂಮಿಯೂ ಅನಾದಿ ಎಂದೇ ಒಪ್ಪಬೇಕಾಗಿದೆ. ಹೀಗೆ ಅನಂತಕಾಲದಿಂದ ಸತ್ವಮಯ ವಾತಾವರಣದಲ್ಲೀ-ಶಾಂತತೆ ಸಮಾಧಾನಗಳಲ್ಲೇ ನಡೆದು ಬಂದಿತಾದುದರಿಂದಲೇ ಜಗದುದ್ಧಾರಕ್ಕೆ ಅವಶ್ಯಕವಾದ ವೇದ ಶಾಸ್ತ್ರ ಪುರಾಣ ಇತಿಹಾಸಗಳು, ಧರ್ಮಶಾಸ್ತ್ರಾದಿಗಳು ಮುಂತಾದ ಸಕಲ ಗ್ರಂಥಗಳ ಉತ್ಪತ್ತಿಗೂ ಈ ದೇಶವೇ ಮಾತೃಸ್ಥಾನೀಯವಾಗಲು ಅರ್ಹವಾಯಿತು. 'ತತ್ವವಿದರ ತೌರುಮನೆ' ಎಂದು ಪ್ರಖ್ಯಾತವಾದ ಈ ದೇಶದಲ್ಲಿ ಪಾರಮಾರ್ಥಿಕ ವಿಚಾರ ಬೋಧಕವಾದ ಧರ್ಮಶಾಸ್ತ್ರಾದಿಗಳೂ, ಭಕ್ತಿ ಜ್ಞಾನ ವೈರಾಗ್ಯಾದಿಗಳನ್ನು ಬೋಧಿಸುವ ತಾತ್ವಿಕಗ್ರಂಥಗಳೂ ಮಾತ್ರವೇ ರಚಿತವಾದುವೆಂದೂ, ಲೌಕಿಕ ಜ್ಞಾನಾಭಿವೃದ್ಧಿ ಸಾಧಕವಾದ ಮಿಕ್ಕ ವಿಷಯಗಳಲ್ಲಿ ಪ್ರಾಚೀನ ಭಾರತೀಯರು ಅಜ್ಞರಾಗಿದ್ದರು ಅಥವ ಅಲಕ್ಷ್ಯಭಾವದಿಂದ ಇದ್ದರು ಎಂದೂ ಭಾವಿಸಬಾರದು. ಭೂಗೋಳ-

ಖಗೋಳ ಶಾಸ್ತ್ರಗಳು, ವೈದ್ಯ ಜ್ಯೋತಿಷ ಶಾಸ್ತ್ರಗಳು, ವಿಜ್ಞಾನಶಾಸ್ತ್ರ-ರಾಜನೀತಿಶಾಸ್ತ್ರಗಳು, ಭೂಗರ್ಭಶಾಸ್ತ್ರ, ವನಸ್ಪತಿಶಾಸ್ತ್ರ, ಪ್ರಾಣಿಶಾಸ್ತ್ರ, ಖನಿಜಶಾಸ್ತ್ರ, ಶಬ್ದಶಾಸ್ತ್ರ, ಗಣಿತಶಾಸ್ತ್ರ ಮುಂತಾದ ಅನೇಕಾನೇಕ ಶಾಸ್ತ್ರಗಳಿಗೂ ಅವರೇ ಜನಕರು ಎನ್ನಲು ಏನೂ ಸಂಶಯವಿಲ್ಲ. ಚತುಷ್ಷಷ್ಠಿ ಕಲೆಗಳು ರೂಪುಗೊಂಡು ಅಭಿವೃದ್ಧಿಯಾದುದು ಈ ದೇಶದಲ್ಲೇ! ಜಗತ್ತಿನ ಹಲವು ಜನಾಂಗಗಳವರು ಬೇರೆ ಬೇರೆ ಕಾಲಗಳಲ್ಲಿ ನಮ್ಮ ಪೂರ್ವಿಕಶಾಸ್ತ್ರಕಾರರ, ತತ್ವಜ್ಞರ-ಜ್ಞಾನಿಗಳ ಬಳಿ ಶಿಷ್ಯವೃತ್ತಿಯನ್ನು ಮಾಡಿ ಕಲಿತುಕೊಂಡು ಹೋದ ಸೋಲ್ಕಂಡ ಶಾಸ್ತ್ರಗಳ ಅಲ್ಪ ಸ್ವಲ್ಪ ಭಾಗಗಳನ್ನೇ ಈಗ ಹೊರಗೆಡಹುತ್ತಿರುವರು. ಅವುಗಳು ಪ್ರಾರಂಭಕ್ಕೆ ಪ್ರಾಚೀನ ಭಾರತೀಯರ ಮನೋಮಯ ಕ್ಷೇತ್ರದಲ್ಲೇ ವಿಕಾಸಗೊಂಡವುಗಳು ಎಂಬ ಸಂಗತಿಯನ್ನು ಅರಿಯದವರು, ಅವುಗಳ ಇಂದಿನ ವೇಷ ಮತ್ತು ಭಾಷೆಗಳನ್ನು ಕಂಡು, ಅವು ಪರದೇಶದಲ್ಲೇ ಜನ್ಮವೆತ್ತಿದುವುಗಳು, ನಾವು ಇಂದು ನೂತನವಾಗಿ ಅವುಗಳನ್ನು ಕಲಿಯಬೇಕಾಗಿದೆ, ತನ್ಮೂಲಕ ಜಗತ್ತಿಗೇ ಜ್ಞಾನಪ್ರದರಾದ ಪಾಶ್ಚಾತ್ಯರಿಗೆ ಜೀವಾವಧಿ ಕೃತಜ್ಞರಾಗಿರಬೇಕಾಗಿದೆ, ಎಂದು ಮುಂತಾಗಿ ಭಾಷಿಸುವರು. ಈ ಭಾವದಾಸ್ಯವು ನಿವಾರಣೆಯಾಗಬೇಕಾದರೆ ಅವರು ವಿಮರ್ಶಕ ದೃಷ್ಟಿಯಿಂದ ಇತಿಹಾಸ ಪುರಾಣಗಳನ್ನು ಪಠಿಸಿ ಭಾರತೀಯ ಪ್ರಾಚೀನ ಚರಿತ್ರೆಯನ್ನು ತಿಳಿಯಬೇಕು. ಅಂದಿಗೆ ಅವರಿಗೆ ತಮ್ಮ ಮಾತೃಭೂಮಿಯು ಎಂತಹ ಪ್ರತಿಭಾಸಂಪನ್ನವಾದುದು ಎಂಬ ಸಂಗತಿಯು ತಿಳಿಯಬಂದೀತು!

‘ಅಷ್ಟು ಕಾರ್ಯಗಳನ್ನು ಸಾಧಿಸಲು ಪೂರ್ವಿಕರಿಗೆ ದೈವಬಲವಿತ್ತು; ಅದೃಷ್ಟ ಸಹಾಯವಿತ್ತು; ಅವರಿಗೆ ಸಕಲ ವಸ್ತುಗಳೂ ಅಪೇಕ್ಷಿಸಿದೊಡನೆಯೇ ಪ್ರತ್ಯಕ್ಷವಾಗುತ್ತಿದ್ದುವು; ಆದುದರಿಂದ ಏನು ಬೇಕೆಂದರೆ ಆ ಕೆಲಸಮಾಡಲು ಸಾಧ್ಯವಿತ್ತು; ಆದರೆ—ನಾವು ಅಶಕ್ತರು, ನಮಗೆ ದೈವಬಲವಿಲ್ಲ; ಅದೃಷ್ಟ ಸಹಾಯವಿಲ್ಲ; ನಾವೇನು ಮಾಡಲಾದೀತು?’ ಎಂದುಗೊಣಗುವುದು ನಮ್ಮಲ್ಲಿ ಸ್ವಾಭಾವಿಕವಾಗಿದೆ. ಯಾವುದಾದರೊಂದು ಕಾರ್ಯ ಪ್ರಾರಂಭಮಾಡಬೇಕೆಂದು ಮಾತೆತ್ತುವಾಗಲೇ ಹೀಗೆ ಅಳುಮೋರೆಯಿಂದ ಹೊರಡುವುದರಿಂದ ಆ ಕಾರ್ಯವು ಎಷ್ಟುಮಟ್ಟಿಗೆ ಫಲಪ್ರದವಾ

ದೀತು ? ಪೂರ್ವಿಕರಾದರೂ ನಮ್ಮಂತೆಯೇ ಸ್ವಸಾಮರ್ಥ್ಯದಿಂದ ದುಡಿದೇ ತಮ್ಮ ಅಪೇಕ್ಷಿತ ವಸ್ತುವನ್ನು ಗಳಿಸಬೇಕಾಗಿದ್ದಿತಲ್ಲದೆ ಅವರಿಗಾಗಿ ಯಾವ ವಸ್ತುವೂ ಸುಲಭ ಸಾಧ್ಯವಾಗಿ ದೊರೆತುದಿಲ್ಲ. ಇದಕ್ಕೆ ಪುರಾಣಾದಿಗಳಿಂದ ಸಹಸ್ರಾರು ಉದಾಹರಣೆಗಳನ್ನು ಒದಗಿಸಬಹುದು. ಒಬ್ಬೊಬ್ಬ ಪೌರಾಣಿಕ ಪ್ರಸಿದ್ಧವ್ಯಕ್ತಿಯೂ, ತನ್ನ ಇಷ್ಟಾರ್ಥ ಸಾಧನೆಗಾಗಿ ಎಷ್ಟು ಕಷ್ಟಪಟ್ಟಿದ್ದಾನೆ, ಎಂತೆಂತಹ ದುಃಖ ಸಂಕಟಗಳ ಪಾಲಾಗಿ ಹೆಣಗಿದ್ದಾನೆ, ಎಂದು ಸಾವಧಾನವಾಗಿ ಗಮನಿಸುವುದಾದರೆ, ಪೂರ್ವಿಕರು ಕೇವಲ ದೈವಬಲ-ಅದೃಷ್ಟ ಸಹಾಯಗಳಿಂದಲೇ ಇಚ್ಛಿತ ಫಲಗಳನ್ನು ಹೊಂದುತ್ತಿದ್ದರು ಎಂಬ ನಮ್ಮ ಆಳುವೋರೆಯ ಅಭಿಪ್ರಾಯಕ್ಕೆ ಏನೂ ಬುಡವಿಲ್ಲವೆಂಬ ಅಂಶವು ಸ್ಪಷ್ಟವಾಗುವುದು.

ಹಾಗಾದರೆ ಜಗತ್ತಿನಲ್ಲೇ ಅಸದೃಶವೆಂಬಂತಹ ಅಮೌಲ್ಯ ತತ್ವಸಿದ್ಧಾಂತಗಳನ್ನು ಸೃಷ್ಟಿಸಲೂ, ಅಮಾನುಷವೆಂಬಂತಹ ಮಹತ್ಕಾರ್ಯಗಳನ್ನು ಸಾಧನೆಮಾಡಲೂ ಪೂರ್ವಿಕರಿಗೆ ಹೇಗೆ ಸಾಧ್ಯವಾಯಿತು ? ಎಂಬ ಪ್ರಶ್ನೆಯು ಸ್ವಭಾವಿಕವಾಗಿ ಮನಸ್ಸಿನಲ್ಲಿ ಉಂಟಾಗುತ್ತದೆ. ಅದಕ್ಕೆ ಪ್ರತ್ಯುತ್ತರವನ್ನು ಹೇಳುತ್ತೇವೆ. ಅವರಲ್ಲಿ ಅಗಾಧ ಶ್ರದ್ಧೆಯಿತ್ತು. ಎಂದಿಗೂ ಕುಂದದ ಭಕ್ತಿಯಿತ್ತು. ತಾವು ಮೆಚ್ಚಿದ ವಸ್ತುವಿನಲ್ಲಿ ಸ್ಥಿರ ನಂಬಿಕೆಯಿತ್ತು. ಮನಸ್ಸಿನಲ್ಲಿ ನೆಲೆಯಿಲ್ಲದಷ್ಟು ಉತ್ಸಾಹವಿತ್ತು. ಜಿತಮನಸ್ಕತೆಯಿತ್ತು. ಅವರು ಕರ್ತವ್ಯವೆಂದು ತಿಳಿದು ಕರ್ಮ ಮಾಡುತ್ತಿದ್ದರು. ನೈಸರ್ಗಿಕ ತತ್ವಗಳಿಗೆ ವಿರೋಧವಲ್ಲದ ಮಾರ್ಗಗಳಲ್ಲಿ ತಮ್ಮ ಜೀವಮಾನವನ್ನು ಸಾಗಿಸಿಕೊಂಡು ಅಗಾಧ ದೇಹಬಲ ಧೈರ್ಯಸಾಹಸಗಳನ್ನು ಅವರು ಗಳಿಸಿದ್ದರು. ಈ ಅಮೌಲ್ಯ ಗುಣಗಳೇ ಅವರಿಗೆ ಕೈಕೊಂಡ ಕಾರ್ಯದಲ್ಲಿ ಜಯವನ್ನು ಒದಗಿಸಿಕೊಡುತ್ತಿದ್ದುವಲ್ಲದೆ, ದೈವವು ಅವರಿಗೆ ಸುಮ್ಮನೆ ಕುಳಿತಿದ್ದರೂ ಕಾರ್ಯಜಯವೆಂಬ ಪಕ್ವಫಲವನ್ನು ತಂದು ಕೈಲಿಕೊಡುತ್ತಿರಲಿಲ್ಲ. ಈ ಎಲ್ಲ ಗುಣಗಳ ಬಲದಿಂದ ಅವರು ಅವಿಚ್ಛಿನ್ನವಾಗಿ ತಪಸ್ಸು ಮಾಡಿ, ಒಂದೊಂದು ಕಾರ್ಯವನ್ನೂ ಫಲೋದಯ ಪರ್ಯಂತವಾಗಿ ಬಿಡದೆ ಸಾಧಿಸಿ ಕೃತಕೃತ್ಯರಾಗುತ್ತಿದ್ದರು. ಹೀಗೆ ಅವಿಚ್ಛಿನ್ನ ತಪಸ್ಸಾಮರ್ಥ್ಯದಿಂದಲ್ಲದೆ, ಎಂದೂ ಯಾವ ಕಾರ್ಯವೂ ಯಾರಿಗೂ ಫಲ

ಪ್ರದವಾದುದಿಲ್ಲ. ಲೋಕಸೃಷ್ಟಿ ಕಾರ್ಯಕ್ಕೆ ತೊಡಗುವುದಕ್ಕೆ ಪೂರ್ವದಲ್ಲಿ ಚತುರ್ಮುಖನೂ ಸಹ ಕಲ್ಪಾಂತರಗಳವರೆಗೆ ತಪಸ್ಸು ಮಾಡಿಯೇ, ಆ ಸಾಮರ್ಥ್ಯವನ್ನು ಗಳಿಸಿದನೆಂದು ಪುರಾಣಗಳಲ್ಲಿ ಓದುತ್ತೇನಲ್ಲವೆ ? ಅಂದಿನಂತೆಯೇ ಇಂದೂ ಸಹ, ಯಾವುದಾದರೊಂದು ಕಾರ್ಯದಲ್ಲಿ ಸಿದ್ಧಿಯನ್ನು ಹೊಂದಬೇಕೆಂದು ಯಾವನಾದರೂ ಇಚ್ಛಿಸುವನಾದರೆ, ಅವನು ತಪ್ಪದೆ ತಪಸ್ಸಿನಿಂದಲೇ ಅದನ್ನುಗಳಿಸಬೇಕಾಗಿದೆ ! ಗತ್ಯಂತರವೇ ಇಲ್ಲ.

'ತಪಸ್ಸು' ಎಂದೊಡನೆಯೇ, ನಮ್ಮ ಕಣ್ಣೆದುರಿಗೆ ಒಂದು ಭಯಂಕರ ಚಿತ್ರವು ಬಂದುನಿಲ್ಲುವುದು. ಒಂದೇಸ್ಥಳದಲ್ಲಿ ಸಾವಿರಾರು ವರ್ಷಗಳವರೆಗೆ ಕುಳಿತು ಕಣ್ಣುಮುಚ್ಚಿಕೊಂಡು ಮೇಲಕ್ಕೆ ಏಳದೆಯೇ ಇರಬೇಕು, ಮೈಮೇಲೆ ಅಗಾಧವಾದ ಹುತ್ತ ಬೆಳದು ದೇಹದಲ್ಲಿನ ರಕ್ತಮಾಂಸಾದಿಗಳನ್ನೆಲ್ಲ ಕ್ರಿಮಿಗಳು ತಿಂದು, ಕೇವಲ ಏಲ್ಲುಮಾತ್ರವಾಗಿರಬೇಕು: ನಿರಾಹಾರದಿಂದ ಏಕಪಾದದಮೇಲೆ ನಿಂತಿರಬೇಕು, ಇದು ಮಾತ್ರವೇ ತಪಸ್ಸೆನ್ನಿಸಿಕೊಳ್ಳುವುದು : ಎಂಬೊಂದು ಭಾವನೆಯು ನಮ್ಮಲ್ಲುಂಟು. ಈಮೇಲೆ ಹೇಳಿದ ಉಗ್ರವಿಧಾನಗಳಿಂದಲೆಲ್ಲ ತಪಸ್ಸುಮಾಡಿ, ತಮ್ಮ ಇಷ್ಟಾರ್ಥವನ್ನು ಗಳಿಸಿಕೊಂಡವರೂ ಹಲವರು ದೊರೆಯುವರು. ಆದರೆ 'ತಪಸ್ಸು' ಎಂದರೆ ಹೀಗೆಮಾಡುವುದು ಮಾತ್ರವಲ್ಲ. ಒಬ್ಬನು ಒಂದಾನೊಂದು ಧ್ಯೇಯವನ್ನು ಲಕ್ಷ್ಯದಲ್ಲಿಟ್ಟುಕೊಂಡು, ಅದರ ಸಾಧನೆಗಾಗಿ ಏಕನಿಷ್ಠೆಯಿಂದಲೂ ದೃಢನಿಶ್ಚಯದಿಂದಲೂ, ಸಂತತಪ್ರಯತ್ನದಿಂದಲೂ, ಮನಶ್ಚಾಂಚಲ್ಯಕ್ಕೆ ಅವಕಾಶಕೊಡದೆ ಕಾರ್ಯತತ್ಪರನಾಗಿರುವುದೂ 'ತಪಸ್ಸು' ಎನ್ನಿಸಿಕೊಳ್ಳಲ್ಪಡುವುದು. ಜಲಮಧ್ಯದಲ್ಲೂ, ಪಂಚಾಗ್ನಿಮಧ್ಯದಲ್ಲೂ, ದೇಹದಮೇಲೆ ಹುತ್ತವನ್ನು ಬೆಳೆಯಲಿತ್ತೂ, ಫಲಾಹಾರ ಪರ್ಣಾಹಾರ, ಜಲಾಹಾರ ನಿರಾಹಾರಗಳಿಂದಲೂ, ಹಲವುಕಾಲ ಒಂದೇಸ್ಥಳದಲ್ಲಿನಿಂತು ಮಾಡುವ ಧ್ಯಾನವು ಹೇಗೆ ತಪಸ್ಸೆನ್ನಿಸಿಕೊಳ್ಳುವುದೋ, ಹಾಗೆಯೇ ತನ್ನ ಧ್ಯೇಯ ಸಾಧನೆಗಾಗಿ ಸದಾಪ್ರಯತ್ನಿಸುತ್ತಾ, ಚಿಂತಿಸುತ್ತಾ, ತಪಿಸುತ್ತಾ ಇರುವಿಕೆಯನ್ನೂ ತಪಸ್ಸೆನ್ನಲು ಏನೂ ಬಾಧಕವಿಲ್ಲ. ಏಕನಿಷ್ಠೆಯಿಂದ ಚಿಂತಿಸುವುದರಿಂದ, ಮನೋಮಯ ಇಂದ್ರಿಯವು ವಿಶೇಷ ತಾಪಗೊಳ್ಳುವುದು. ಹೀಗೆ ಆ ಇಂದ್ರಿಯವನ್ನು ತಾಪಕ್ಕೆ ಈಡುಮಾಡದಿದ್ದರೆ, ಕಾ

ರ್ಯಸಾಧನೆಗೆ ಆವಶ್ಯಕವಾದ ನವನವೀನಮಾರ್ಗಗಳು ಸ್ಫುರಿಸವು. ವಿವಿಧ ಮಾರ್ಗಗಳಿಂದ ಪ್ರಯತ್ನಿಸಿ ನಿರಂತರ ಕಾರ್ಯತತ್ಪರವಾದರಲ್ಲದೆ, ಒಂದು ಕಾರ್ಯದಲ್ಲಿ ಸಿದ್ಧಿಯು ಪ್ರಾಪ್ತಿಸದು. ಸ್ವಾಭಾವಿಕವಾಗಿಯೇ ಚಂಚಲವಾದ ಮನಸ್ಸು ಸ್ಥಿರಗೊಂಡು ಏಕಮುಖವಾಗುವುದು ಸಾಮಾನ್ಯವಾದ ಕಾರ್ಯವಲ್ಲ. ಹಾಲು ಸ್ವಸ್ವರೂಪದಿಂದ ಇರುವಾಗ ಮಜ್ಜಿಗೆ ನೀರು ಮುಂತಾದ ಯಾವ ವಸ್ತುವಿನೊಂದಿಗೆಂದರೆ ಆ ವಸ್ತುವಿನೊಂದಿಗೆ ಬೆರೆಯುವುದು. ಅದೇ ಹಾಲೇ ಅವಸ್ಥಾಭೇದದಿಂದ ತುಪ್ಪವಾಯಿತೆಂದರೆ ಪುನಃ ನೀರು ಮಜ್ಜಿಗೆಗಳೊಂದಿಗೆ ಬೆರೆಯಲಾರದು, ಆದರೆ ಹಾಲು-ತನ್ನ ಸ್ವರೂಪವನ್ನು ಕಳೆದುಕೊಂಡು ತುಪ್ಪದ ಸ್ವರೂಪವನ್ನು ಹೊಂದುವುದೇನು ಸಾಮಾನ್ಯವೇ! ಆಮಧ್ಯೆ ಅದು ಎಷ್ಟು ಅವಸ್ಥಾಂತರಗಳನ್ನು ಹೊಂದಬೇಕು! ಮೊದಲು ಕಾಯಿಸಿಕೊಳ್ಳಬೇಕು. ತರುವಾಯ ಹೆಪ್ಪುಡಲ್ಪಟ್ಟು ಒಂದು ಏಕಾಂತಸ್ಥಳದಲ್ಲಿ ನಿಶ್ಚಲವಾಗಿ ಕೆಲಕಾಲ ಇರಬೇಕು. ನಂತರ ಮಂಥನದಿಂದ ಕಡೆಯಲ್ಪಡಬೇಕು. ಹಾಗಾಗಿ ಬೆಣ್ಣೆಯ ಸ್ವರೂಪವನ್ನು ಹೊಂದುವವರೆಗೇ ಅಗಾಧ ಕಷ್ಟಪಡಬೇಕು. ಆದರೆ ಅಲ್ಲಿಗೇ ಎಲ್ಲಾ ಕೆಲಸವೂ ಮುಗಿದಂತಾಗಲಿಲ್ಲ. ಆಗ ಅದು ಪುನಃ ಹಾಲು-ಮೊಸರುಗಳಂತೆ ಆಗಿರಬಹುದು ಮಾತ್ರ! ಅದರಿಂದ ತುಪ್ಪದಿಂದ ಆಗುವಂತಹ ಯಾವ ಹೆಚ್ಚು ಉಪಯೋಗವೂ ಉಂಟಾಗದು. ಅದಕ್ಕೆ ಅಂತಹ ಮಧುರಸುವಾಸನೆಯಿರದು. ಅದು ಆಗ ವಿಶೇಷತಾಪಕ್ಕೆ ಒಳಗಾದರಲ್ಲದೆ ತುಪ್ಪದ ಸ್ವರೂಪಹೊಂದಿ ಉಪಯೋಗಕ್ಕೆ ಸಿದ್ಧವಾಗಲಾರದು. ಬೆಣ್ಣೆಯು ತುಪ್ಪವಾಗುವ ಪರಿಯನ್ನು ಲಕ್ಷ್ಯವಿಟ್ಟು ಗಮನಿಸಿದರೆ, ಅದು ಎಷ್ಟು ಮಟ್ಟಿನ ತಾಪಗೊಂಡು ಮತ್ತಾವ ದ್ರವವಸ್ತುವಿನೊಂದಿಗೆ ಬೆರೆತರೂ ತನ್ನ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವಂತಹ ಉತ್ತಮೋತ್ತಮವಾದ ಘೃತಸ್ವರೂಪವನ್ನು ಹೊಂದಬೇಕಾಗಿದೆ, ಎಂಬುದನ್ನು ತಿಳಿಯಬಹುದು. ಕೇವಲ ಹಾಲಿನಂತೆ ದ್ರವಸ್ವರೂಪದಿಂದ ಸಿಕ್ಕ ಸಿಕ್ಕ ಕಡೆಗೆಲ್ಲ ಹರಿವ ಚಂಚಲ ಸ್ವಭಾವವುಳ್ಳ ಮನಸ್ಸು ಮೊಸರಾಗಿ-ಬೆಣ್ಣೆಯಾಗುವವರೆಗೆ ಎಷ್ಟೋ ಕಷ್ಟಗಳನ್ನು ಅನುಭವಿಸದಿದ್ದರೆ ಬೇರೆ ಮಾರ್ಗವೇ ಇಲ್ಲ. ನಂತರ ಬೆಣ್ಣೆಯಂತಾಗಿ ಅಲ್ಲಿಗೇ ನಿಲ್ಲಲೂ ಸಾಧ್ಯವಿಲ್ಲ. ಅದು ವಿಶೇಷ ತಾಪಕ್ಕೊಳಗಾಗಿ ತುಪ್ಪವಾಗಲೇ ಬೇಕು. ಹೀಗೆ ಬೆಣ್ಣೆಯಂತೆ ಮೃದು

ವಾದ ಭಕ್ತನ ಮನಸ್ಸು ತುಷ್ಟವಾಗಿ ಭಕ್ತವತ್ಸಲನಾದ ಭಗವಾನನಿಂದ ಸ್ವೀಕೃತವಾಗುವ ಮೊದಲು ಹಲವು ಪರಿಯ ತಾಪಕ್ಕೆ ಒಳಗಾಗುವುದು ತಪ್ಪದು. ಈ ಅವಸ್ಥಾಂತರಗಳು ಉಂಟಾಗಲೆಂದು ಯಾರು ಅಪೇಕ್ಷಿಸಲಿ, ಅಪೇಕ್ಷಿಸದಿರಲಿ, ಭಗವದಿಚ್ಛಾನುಸಾರವಾಗಿ ಜಗದ ಪ್ರಾಣಿವರ್ಗಗಳಿಗೆಲ್ಲ, ಒಂದಲ್ಲ ಒಂದು ಕಾಲಕ್ಕೆ ಈ ಅವಸ್ಥಾ ಭೇದಗಳೆಲ್ಲವೂ ಪ್ರಾಪ್ತವಾಗಲೇ ಬೇಕು; ಆಗಿಯೇ ಆಗುವುವು !

ಕಾರ್ಯಸಾಧನೆಗಂತೂ ನಿರಂತರ ಚಿಂತನೆಯೆಂಬ ಈ ತಪಸ್ಸು ಅತ್ಯಾವಶ್ಯಕವಾದುದು. ಪೂರ್ವಿಕರು ಈ ಕಾರ್ಯಸಾಧನಾ ಮಾರ್ಗವನ್ನರಿತು ಕುಂದದ ಶ್ರದ್ಧಾ ಭಕ್ತಿಗಳಿಂದಲೂ ಏಕನಿಷ್ಠೆ ದೃಢನಿಶ್ಚಯಗಳಿಂದಲೂ ಹೀಗೆ ತಪಸ್ಸುಮಾಡಿ ತಮ್ಮ ಇಷ್ಟಾರ್ಥಸಿದ್ಧಿಯನ್ನು ಹೊಂದುತ್ತಿದ್ದರಲ್ಲದೆ, ಕೇವಲ ಇಚ್ಛಾಮಾತ್ರದಿಂದಲೇ ಯಾರೂ ಎಂದೂ ಯಾವ ಮಹತ್ಫಲವನ್ನೂ ಪಡೆಯಲಿಲ್ಲ. ಭಗವದ್ದರ್ಶನ, ಆತ್ಮಸಿದ್ಧಿ ಮೊದಲಾದ ಪಾರಮಾರ್ಥಿಕ ಸಿದ್ಧಿಗಳು ಅತ್ಯಗಾಧ ಕಷ್ಟಸಾಧ್ಯಗಳಾದುದರಿಂದ ಅವುಗಳನ್ನು ಪಡೆಯಲಪೇಕ್ಷೆಯುಳ್ಳವರು, ಮೇಲ್ಕಂಡಂತಹ ಉಗ್ರರೀತಿಯ ತಪಸ್ಸನ್ನೂ, ಇತರ ಸಾಮಾನ್ಯ ಲೌಕಿಕ ಧ್ಯೇಯಸಾಧನೆಗಳಲ್ಲಿ ಇಷ್ಟವುಳ್ಳವರು, ನಿರಂತರ ಚಿಂತನೆ ಸಂತತಪ್ರಯತ್ನ ಮುಂತಾದ ಸೌಮ್ಯಮಾರ್ಗಗಳಿಂದ ಮಾಡುವ ತಪಸ್ಸನ್ನೂ ಅಂಗೀಕರಿಸಿ ಪ್ರಯತ್ನಿಸಬೇಕಾಗುವುದು. ಎಂತೂ ಕಾರ್ಯಸಿದ್ಧಿಗೆ ಕರ್ತೃವಿನ ಮನಸ್ಸು ತಪಿಸಿದಹೊರತು ಅನ್ಯಥಾ ಮಾರ್ಗವೇ ಇಲ್ಲ. ಮನಸ್ಸು ಎಷ್ಟೆಷ್ಟು ಪ್ರಮಾಣದಿಂದ ಹೀಗೆ ತಾಪಗೊಂಡು, ಇಚ್ಛಿತ ಧ್ಯೇಯಸಾಧನೆಗಾಗಿ ನೂತನ ನೂತನ ಮಾರ್ಗಗಳನ್ನು ಅನುಸರಿಸಿ ಶ್ರದ್ಧಾ ಭಕ್ತಿಗಳಿಂದ ಕಾರ್ಯತತ್ಪರವಾಗುವುದೋ, ಫಲವೂ ಅಷ್ಟಷ್ಟು ಶೀಘ್ರವಾಗಿಯೂ ನಿಶ್ಚಯವಾಗಿಯೂ ಲಭ್ಯವಾಗುವುದು.

ಹಿರಣ್ಯಕಶಿಪು ಹಿರಣ್ಯಾಕ್ಷರು, ರಾವಣ ಕುಂಭಕರ್ಣರು-ವಾಲ್ಮೀಕಿ ಧ್ರುವ ಮುಂತಾದ ಪೌರಾಣಿಕ ವ್ಯಕ್ತಿಗಳು ಮಾಡಿದ ಉಗ್ರರೀತಿಯ ತಪಸ್ಸು ಫಲಪ್ರದವಾದಂತೆಯೇ, ಸತ್ಯವಾಕ್ಯಕ್ಕೆ ತಪ್ಪಿ ನಡೆಯಬಾರದೆಂಬ ಏಕನಿಷ್ಠೆಯಿಂದ ಅಗಾಧ ಕಷ್ಟನಷ್ಟಗಳನ್ನು ಅನುಭವ ಮಾಡಿದ ಹರಿಶ್ಚಂದ್ರನಿಗೂ, ಪಿತೃವಾಕ್ಯವನ್ನು ನೆರವೇರಿಸಬೇಕೆಂಬ ಧ್ಯೇಯ ಸಾಧನೆಗಾಗಿ ದೇಶ

ಕೋಶಗಳನ್ನು ತ್ಯಜಿಸಿ ವನವಾಸಮಾಡಿದ ಶ್ರೀರಾಮನಿಗೂ, ಪತಿಭಕ್ತಿ, ಭ್ರಾತೃವಾತ್ಸಲ್ಯ, ಸ್ವಾಮಿ ಭಕ್ತಿಗಳಿಗಾಗಿ ಸೀತಾ ಲಕ್ಷ್ಮಣ ಆಂಜನೇಯರಿಗೂ, ಧರ್ಮಮಾರ್ಗವನ್ನು ತಪ್ಪಿ ನಡೆಯಬಾರದೆಂಬ ಧ್ಯೇಯ ಸಾಧನೆಗಾಗಿ ಶ್ರಮಿಸಿದ ಪಾಂಡುಪುತ್ರರಿಗೂ, ಮಾತೃಭೂಮಿಯ ದಾಸ್ಯವನ್ನು ಪರಿಹರಿಸಿ ಅದಕ್ಕೆ ಸ್ವಾತಂತ್ರ್ಯವನ್ನು ಸಾಧಿಸಿ ಕೊಡಬೇಕೆಂಬ ಧ್ಯೇಯ ಸಾಧನೆಗಾಗಿ ನಿರಂತರ ಶ್ರಮಪಟ್ಟ ಪ್ರತಾಪಸಿಂಹ, ಶಿವಾಜಿ ಮುಂತಾದ ಐತಿಹಾಸಿಕ ವ್ಯಕ್ತಿಗಳಿಗೂ, ಸ್ವಾರ್ಥತ್ಯಾಗ, ನಿರಂತರ ಕಷ್ಟಸಹಿಷ್ಣುತೆ ಮುಂತಾದ ಅಗಾಧ ತಪಸ್ಸುಗಳಿಂದಲೇ ಆ ಚಂದ್ರಾರ್ಕಸ್ಥಾಯಿಯಾದ ಕೀರ್ತಿಯೂ - ಪೂಜ್ಯತೆಯೂ ಲಭ್ಯವಾದುವಲ್ಲದೆ, ದಿವ್ಯ ವ್ಯಾಖ್ಯಾನಗಳನ್ನುಂಡು ಸುಪ್ಪತ್ತಿಗೆಯ ಮೇಲೆ ಕುಳಿತು ಅತ್ತಿತ್ತ ಅಲುಗದೆ ಮೇಲ್ಮಂಡ ಸುಪ್ರಸಿದ್ಧ ವ್ಯಕ್ತಿಗಳಲ್ಲಿ ಯಾರೂ ಅಜರಾಮರವಾದ ಕೀರ್ತಿಯನ್ನು ಗಳಿಸಿದವರಲ್ಲ. ಆದುದರಿಂದ,-ಪೂರ್ವಿಕರ ವಿಷಯದಲ್ಲಿ ದೇವರೂ ದೇವತೆಗಳೂ ಪಕ್ಷಪಾತಿಗಳಾಗಿದ್ದರು ; ಅವರಿಗೆ ಇಚ್ಛಿಸಿದೊಡನೆಯೇ ಸುಖಸಂಪತ್ತುಗಳು ಕ್ಷೀರವೃಷ್ಟಿಯಾಗಿ ಸುರಿಯುತ್ತಿದ್ದುವ-ಎಂಬ ತಪ್ಪು ತಿಳಿವಳಿಕೆಯನ್ನು ತೊರೆದು. ಪ್ರತಿಯೊಬ್ಬನೂ ತನ್ನ ಧ್ಯೇಯಸಾಧನೆಗಾಗಿ ನಿರಂತರ ತಪಸ್ಸುಮಾಡುವುದನ್ನು ಕಲಿಯಬೇಕು.-' ಅದೃಷ್ಟದಿಂದಲೇ ಫಲಪ್ರಾಪ್ತವಾಗುವುದಿದ್ದರೆ ಆಗಲಿ,-ಮನುಷ್ಯನಾದ ನನ್ನ ಕರ್ತವ್ಯವನ್ನಂತೂ ನಾನು ಮಾಡಿಬಿಡುತ್ತೇನೆ ' ಎಂಬ ಉಚ್ಚ ಭಾವನೆಯಿಂದ ಪ್ರತಿಯೊಬ್ಬನೂ ಶ್ರದ್ಧಾಭಕ್ತಿ ತತ್ಪರನಾಗಿ ಕಾರ್ಯಪ್ರಯತ್ನಮಾಡಿ ಮುಂದರಿಯುವುದನ್ನು ಕಲಿಯಬೇಕು. ಕಷ್ಟನಷ್ಟಗಳಿಗೆ ಬೆದರಿ ಹಿಂಜರಿಯದಿರುವಿಕೆಯನ್ನು ಅಭ್ಯಸಿಸಬೇಕು. ಮುಖ್ಯ ಧ್ಯೇಯಸಾಧನೆಯಲ್ಲಿ ನಿರ್ಭಯದಿಂದಿರುವಿಕೆಯನ್ನು ಪ್ರತಿಕ್ಷಣದಲ್ಲೂ ಅಭ್ಯಾಸದಲ್ಲಿ ತರಬೇಕು. ಮುಪ್ಪಿನ ಮುದುಕನನ್ನು ಕೈಹಿಡಿಯಬೇಕಾದ ವಿಧಿಯೊದಗಿ, ತನ್ನ ಸತೀತ್ವರಕ್ಷಣೆ ಮಾಡಿಕೊಳ್ಳಬೇಕಾಗಿ ಬಂದ ನಮ್ಮ ಕಥಾನಾಯಿಕೆ ಸುಕನ್ಯಾದೇವಿಯ-ಮತ್ತು ವಜ್ರಹಸ್ತನಾದ ಇಂದ್ರನನ್ನೂ ಲಕ್ಷ್ಯಮಾಡದಿದ್ದ ಆಕೆಯ ಪತಿಯಾದ ಚ್ಯವನಮಹರ್ಷಿಯ ಜೀವಿತೋದಾಹರಣೆಗಳು ಈ ಭಾಗದಲ್ಲಿ ಕೆಲಮಾತ್ರ ಬೋಧಕವಾಗಬಹುದು

ದಾದುದರಿಂದ ಅದನ್ನಿಲ್ಲಿ ಕೊಡಲಿಚ್ಛಿಸುತ್ತೇವೆ. ಪಾಠಕಮಹಾಶಯರು ಸಾವಧಾನ ಚಿತ್ತರಾಗಿ ಮುಂದರಿಸಬೇಕು.

ಯುಗಾಂತರದವಾರ್ತೆ: ಪರಮಪುರುಷನ ನಾಭೀಕಮಲದಿಂದ ಉದ್ಭವಿಸಿದ ಚತುರ್ಮುಖನಿಗೆ ಮರೀಚಿ ಪ್ರಜಾಪತಿಯು ಮಾನಸ ಪುತ್ರನಾಗಿ ಜನಿಸಿದನು. ಮರೀಚಿಗೆ ಕಶ್ಯಪ ಮಹರ್ಷಿಯು ಪುತ್ರನಾದನು. ಈತನಿಗೆ ದಕ್ಷಪ್ರಜಾಪತಿಯ ಪುತ್ರಿಯಾದ ಅದಿತೀದೇವಿಯು ಪತ್ನಿಯಾದಳು. ಅದಿತೀದೇವಿಯೊಂದಿಗೆ ವಿಧ್ಯುಕ್ತಮಾರ್ಗವನ್ನನುಸರಿಸಿ ಗೃಹಸ್ಥಧರ್ಮವನ್ನು ಪಾಲಿಸಿಕೊಂಡು-ಲೋಕಯಾತ್ರೆಯನ್ನು ಜರುಗಿಸಿಕೊಂಡಿದ್ದ ಕಶ್ಯಪ ಪ್ರಜಾಪತಿಗೆ ಯೋಗ್ಯಕಾಲದಲ್ಲಿ ಆಕೆಯಲ್ಲಿ ಅನೇಕಮಂದಿ ಪುತ್ರರು ಜನಿಸಿದರು. ಲೋಕದಲ್ಲಿ ಪ್ರಜಾಸಂಖ್ಯೆಯು ಅತ್ಯಂತ ಕಡಿಮೆಯಾಗಿದ್ದ ಆ ಕಾಲದಲ್ಲಿ, ಸೃಷ್ಟಿಕಾರನಾದ ಚತುರ್ಮುಖ ಬ್ರಹ್ಮದೇವನಿಂದ ಋಷಿಗಳಿಗೂ, ದಕ್ಷನೇ ಮುಂತಾದ ಪ್ರಜೇಶ್ವರರಿಗೂ ಪ್ರಜಾವೃದ್ಧಿ ಮಾಡಬೇಕೆಂದು ಸಂದೇಶವು ದೊರೆತಿದ್ದಿತು. ಆದುದರಿಂದ ಅವರು ತಮ್ಮ ತಪಸ್ಸಿನ ಕಾರ್ಯಗಳನ್ನು ಕೆಲಕಾಲ ಮಾನಸಿಕಮಾಡಿ ಈ ಲೋಕ ಸಂಗ್ರಹಣಕಾರ್ಯಕ್ಕೆ ಹೆಚ್ಚು ಲಕ್ಷ್ಯಕೊಟ್ಟಿದ್ದರು. ಅದಿತೀ ಕಶ್ಯಪರಿಗೆ ಜನಿಸಿದ ಮಕ್ಕಳಲ್ಲಿ ವಿವಸ್ವಂತನೆಂಬಾತನೂ ಒಬ್ಬನು. ಈತನು ಸಂಜ್ಞಾದೇವಿಯೆಂಬ ಸಾಧ್ವೀಮಣಿಯನ್ನು ವಿವಾಹಮಾಡಿಕೊಂಡು ಆಕೆಯಲ್ಲಿ ವೈವಸ್ವತನೆಂಬ ಪುತ್ರನನ್ನು ಪಡೆದನು. ವೈವಸ್ವತನು ತನ್ನ ಸತ್ಯಧರ್ಮ ಮಾರ್ಗಗಳನ್ನು ಮೀರದ ನಡೆವಳಿಕೆಯಿಂದಲೂ, ತಪಸ್ಸು, ವೇದಾಧ್ಯಯನ, ಇಂದ್ರಿಯನಿಗ್ರಹ ಮುಂತಾದ ಸತ್ಕೃತ್ಯಗಳಿಂದಲೂ ಚತುರ್ಮುಖನನ್ನು ಮೆಚ್ಚಿಸಿ ಮನುಪದವಿಯನ್ನು ಪಡೆದನು. ಮಹಾತ್ಮನಾದ ಈ ವೈವಸ್ವತ ಮನುವಿಗೆ ಶ್ರದ್ಧಾದೇವಿಯೆಂಬ ಸತೀಶಿರೋಮಣಿಯು ಭಾರ್ಯೆಯಾದಳು. ಆಕೆಯಲ್ಲಿ ಅನೇಕ ಕಾಲಗಳವರೆಗೆ ಮಕ್ಕಳಾಗದಿರಲು, ವೈವಸ್ವತನು, ತನ್ನ ಸಂತಾನೇಚ್ಛೆಯನ್ನು ಕುರಿತು ವಸಿಷ್ಠರಲ್ಲಿ ವಿಜ್ಞಾಪಿಸಿಕೊಂಡನು. ವಸಿಷ್ಠರು ಕನಿಕರಪಟ್ಟು ಆತನಿಂದ ಮಿತ್ರಾವರುಣವೆಂಬೊಂದು ಯಾಗಮಾಡಿಸಿದರು. ಆ ಯಾಗಕಾಲದಲ್ಲಿ ಶ್ರದ್ಧಾದೇವಿಯು ಬಹು ಶ್ರದ್ಧಾಭಕ್ತಿಗಳಿಂದ ನಡೆದುಕೊಳ್ಳುತ್ತಾ, ಕೇವಲ ನಿಯಮದಿಂದ ಹಾಲನ್ನು ಮಾತ್ರವೇ ಆಹಾರವಾಗಿ ಸ್ವೀಕರಿಸು

ತ್ರಾ ಸಂತಾನಾಪೇಕ್ಷೆಯಿಂದ ಯಜ್ಞಾಧಿದೇವನಾದ ಶ್ರೀಮನ್ನಾರಾಯಣನನ್ನು ಅನನ್ಯಭಕ್ತಿಯಿಂದ ಆರಾಧಿಸುತ್ತಿದ್ದಳು. ಮನುವಿಗೆ ಪುರುಷಸಂತಾನವನ್ನು ಪಡೆಯಬೇಕೆಂಬುದು ಅಂತರ್ಯಾಪೇಕ್ಷೆಯಾಗಿದ್ದಿತು. ಆದರೆ ಶ್ರದ್ಧಾದೇವಿಯು ಮನಸ್ಸಿನಲ್ಲಿ ತನಗೆ ಕನ್ಯೆಯು ಜನಿಸಬೇಕೆಂದು ಅಪೇಕ್ಷೆಯಿದ್ದಿತು. ಆ ಅಪೇಕ್ಷೆಯನ್ನನುಸರಿಸಿ, ಆಕೆಯು ಯಾಗವು ನಡೆಯುತ್ತಿದ್ದಾಗ ಹೋತೃವಿನ ಬಳಿಗೆ ಬಂದು ತನಗೆ ಹೆಣ್ಣುಮಗಳು ಹುಟ್ಟುವಂತೆ ಯಾಗಮಾಡಿಸೆಂದಳು. ಆತನು ಯಜಮಾನಿಯ ಮಾತನ್ನು ಮೀರಲಾರದೆ ಹವಿಸ್ಸನ್ನು ಕೈಯಲ್ಲಿ ಹಿಡಿದು, ಅಗ್ನಿಯಲ್ಲಿ ಹೋಮಿಸುವ ಸಂದರ್ಭದಲ್ಲಿ, ಆಕೆಯಿಂದ ಪ್ರೇರಣೆಯಾದಂತೆಯೇ, ಕನ್ಯಾಪ್ರಾಪ್ತಿಯ ಉದ್ದೇಶವನ್ನು ಮನಸ್ಸಿನಲ್ಲಿ ಭಾವಿಸಿಕೊಂಡು, ಸಮರ್ಪಿಸಿದನು. ಈ ಭಾವನೆಯು ಫಲವಾಗಿ, ವೈವಸ್ವತನು ಮನುವಿಗೆ ಪುತ್ರಸಂತಾನವಾಗುವುದಕ್ಕೆ ಪ್ರತಿಯಾಗಿ ಇಳೆಯೆಂಬ ಕನ್ಯೆಯು ಜನಿಸಿದಳು. ಈ ವಿಪರೀತ ಪರಿಣಾಮವನ್ನುಕಂಡು ಚಿಂತಾಕ್ರಾಂತನಾದ ಆತನು ಕಾರಣವನ್ನು ತಿಳಿದು, ಮುಂದೆ ಹೀಗಾಗದಂತೆ ಇರಲೆಂದು, ಯಮುನಾ ತೀರಕ್ಕೆ ಏಕಾಂಗಿಯಾಗಿ ನಡೆದು ಅಲ್ಲಿ ನೂರುವರ್ಷಕಾಲ ಅತಿಶಯ ನಿಯಮ ನಿಷ್ಠೆಗಳಿಂದ ಪುತ್ರಾರ್ಥಿಯಾಗಿ ತಪಸ್ಸು ಮಾಡಿದನು. ಆ ತಪಸ್ಸಿಗೆ ವಿಷ್ಣುವು ಸುಪ್ರೀತನಾಗಿ ಮನುವಿಗೆ ಪ್ರತ್ಯಕ್ಷನಾಗಿ, ನಿನ್ನ ಇಷ್ಟದಂತೆಯೇ, ನಿನಗೆ ಸಮಾನರಾದ ಹತ್ತುಮಂದಿ ಪುತ್ರರು ಜನಿಸುವರು ಎಂದು ವರಪ್ರದಾನಮಾಡಿದನು. ವಿಷ್ಣುದತ್ತವಾದ ಈ ವರವನ್ನು ಅನುಸರಿಸಿಯೇ ಆತನ ಪತ್ನಿಯಲ್ಲಿ ಇಕ್ಷ್ವಾಕು, ಶರ್ಯಾತಿ, ನೃಗ, ದಿಷ್ಟ, ಕರೂಶ, ನರಿಷ್ಯಂತ, ಪೃಷಧ್ರ, ನಭಗ, ಕವಿ ಎಂಬ ಹತ್ತುಮಂದಿ ಪುತ್ರರು ಜನಿಸಿದರು. ಮನುವು ಈ ದಶಪುತ್ರರ ಸಂತಾನದಿಂದ ಪರಮ ಸಂತುಷ್ಟನಾಗಿ ಭಾರ್ಯಾಸಮೇತನಾಗಿ ಲೋಕಯಾತ್ರೆ ನಡೆಸಿಕೊಂಡು ಸುಖವಾಗಿದ್ದನು.



## ಅಧ್ಯಾಯ ೨ "ಅಪೂರ್ವ ವಲ್ಮೀಕ"

ಮನುಪುತ್ರನಾದ ಶರ್ಯಾತಿಯು ಬಾಲ್ಯದಲ್ಲಿ ಬಹುಶ್ರದ್ಧಾವಂತನಾಗಿ ಗುರುಶುಶ್ರೂಷೆಮಾಡಿ ವೇದಾಧ್ಯಯನದಿಂದ, ವೇದಾರ್ಥಗಳನ್ನು ಬಹುಸ್ಪಷ್ಟವಾಗಿ ತಿಳಿದವನಾದನು. ಯಜ್ಞಯಾಗಾದಿಗಳ ಆಚರಣೆಯಲ್ಲಿ ನಡೆಯಬೇಕಾದ ಕಾರ್ಯವಿಧಾನಗಳಲ್ಲಿ ಆತನಿಗಿದ್ದ ತಿಳಿವಳಿಕೆಯು ಅಗಾಧವಾದುದು. ಆ ವಿಚಾರದಲ್ಲಿ ಮುನಿ-ಋಷಿಗಳಿಗೆ ಸಂದೇಹವಿದ್ದರೆ, ಅದರ ಪರಿಹಾರಕ್ಕಾಗಿ ಅವರು ಶರ್ಯಾತಿರಾಜನ ಬಳಿಗೆ ಬರುವಂತೆ ಆಯಿತು. ಒಂದಾನೊಂದುವೇಳೆ ಅಂಗಿರಸ ಮುನಿಯು ಕೈಕೊಂಡ ಸತ್ರಯಾಗದಲ್ಲಿ ಎರಡನೆಯ ದಿನದಲ್ಲಿ ನಡೆಯಬೇಕಾದ ಕಾರ್ಯವಿಧಾನಗಳ ವಿಷಯದಲ್ಲಿ ಮತಭೇದವುಂಟಾಗಿ ಬಹು ಇಕ್ಕಟ್ಟಿಗಿಟ್ಟಿತು. ಆ ಸಂದರ್ಭದಲ್ಲಿ ಶರ್ಯಾತಿ ರಾಜರ್ಷಿಯು ವಿಧ್ಯುಕ್ತ ಆಚರಣೆಯು ಇಂಥದೆಂದು ತೋರಿಸಿಕೊಟ್ಟು ಸಕಲರ ಕೃತಜ್ಞತೆಗೂ ಪಾತ್ರನಾದನು.

ಈ ಶರ್ಯಾತಿಗೆ ಬಹುಕಾಲ ಸಂತಾನವಿಲ್ಲದೆ, ಕೊನೆಗೆ ಒಬ್ಬ ಪುತ್ರಿಯು ಉದಿಸಿದಳು. ಮಕ್ಕಳಿಲ್ಲದೆಯಿಲ್ಲದೆ ಪಡೆದ ಆ ಏಕಮಾತ್ರ ಪುತ್ರಿಯನ್ನು ಶರ್ಯಾತಿಯು ಬಹಳ ಪ್ರೇಮದಿಂದ ಕಾಪಾಡಿಕೊಂಡಿದ್ದನು. ನೆಲದಮೇಲೆ ನಡೆಯಬಿಟ್ಟರೆ ಸವೆದು ಹೋಗುವಳೋ ಎಂಬಂತೆ ಆತನು ಆ ಮಗುವನ್ನು ಸಂರಕ್ಷಣೆ ಮಾಡಿದನು. ತೊಡೆಯಲ್ಲಿಟ್ಟು ಆಡಿಸುವನು. ಹೆಬ್ಬೆರಳು ಹಿಡಿದು ದಟ್ಟಡಿಯಿಡಿಸಿ ನಡೆಯಿಸುವನು. ಆ ಮಗುವಿನೊಂದಿಗೆ ತಾನೂ ಪ್ರೇಮಾಧಿಕ್ಯದಿಂದ ಮುದ್ದು ಮುದ್ದು ಮಾತನಾಡುವನು. ಆ ಕನ್ಯಾಶಿರೋಮಣಿಯನ್ನು ಒಂದು ಕ್ಷಣವೂ ಬಿಟ್ಟಿರಲಾರದೆ, ತನ್ನ ಮಗಳಿಗೆ ಸಮಾನವಾದ ಕನ್ಯೆಯು ಇನ್ನೆಲ್ಲೂ ಇಲ್ಲವೆಂಬ ಭಾವವು ಮನಸ್ಸಿಗೆ ತೋರಲು, ಆ ತನ್ನ ಪ್ರೇಮಪುತ್ರಿಯನ್ನು 'ಸುಕನ್ಯಾ' ಎಂಬ ಹೆಸರಿನಿಂದಲೇ ಕರೆಯತೊಡಗಿದನು. ಪ್ರೇಮಪೂರ್ವಕವಾಗಿಟ್ಟು ಕೂಗಿದ ಆ ನಾಮಧೇಯವೇ ನಮ್ಮ ಕಥಾನಾಯಕಿಗೆ ಅಂಕಿತನಾಮವೂ - ಅನ್ವರ್ಥನಾಮವೂ ಕೂಡ ಆಯಿತು.

ಸುಕನ್ಯೆಯು ಬಾಲ್ಯಪ್ರಾಯವನ್ನು ಕಳೆದು ಮುಂದರಿದಳು. ಆ ಕನ್ಯಾಮಣಿಯನ್ನು ಮಹಾ ರಾಜಾಧಿರಾಜನಿಗೆ ತಕ್ಕ ಭಾರ್ಯೆಯಾಗುವಂತೆ ಸಿದ್ಧಗೊಳಿಸಬೇಕೆಂದು ಶರ್ಯಾತಿಯು ಪ್ರಯತ್ನ ಪೂರ್ವಕ ಆಕೆಗೆ ಸಕಲ ವಿದ್ಯೆಗಳನ್ನೂ ಕಲಿಸತೊಡಗಿದನು. ಕೆಲವು ಕಾಲದ ವಿದ್ಯಾಭ್ಯಾಸದಲ್ಲಿಯೇ ವೀಣಾವಾದನ, ಚಿತ್ರಕಲೆಗಳಲ್ಲಿ ಸುಕನ್ಯೆಯು ಅದ್ಭುತ ಸಾಮರ್ಥ್ಯವನ್ನು ಸಂಪಾದಿಸಿದಳು. ವೀಣಾವಾದನವೊಂದು ಮಾತ್ರವಲ್ಲ-ಸಂಗೀತ ಶಾಸ್ತ್ರ ದಲ್ಲಿ ಆಕೆಗಿದ್ದ ಪ್ರತಿಭೆಯೂ ಅಸಾಧಾರಣವಾದುದು. ತಂದೆಯೇ ಸ್ವತಃ ತನ್ನ ಪುತ್ರಿಗೆ ಕಾವ್ಯನಾಟಕಾದಿ ಸಾಹಿತ್ಯ ಭಾಗವನ್ನೂ ಚೆನ್ನಾಗಿ ಪಾಠ ಮಾಡಿಸಿದ್ದನು. ಕೇವಲ ಸಂಭಾಷಣಾ ಮೂಲವಾಗಿಯೇ ಸಕಲ ಶಾಸ್ತ್ರ ರಹಸ್ಯಗಳಲ್ಲೂ ಆಕೆಗೆ ಪರಿಚಯವನ್ನುಂಟುಮಾಡಿಸಿದ್ದನು. ಗುರು ಹಿರಿಯ ರಲ್ಲಿ ಪೂಜ್ಯಭಾವ, ಜೊತೆಯವರಲ್ಲಿ ಸ್ನೇಹ, ದೀನಾನಾಥರಲ್ಲಿ ಕನಿಕರ, ಸತ್ಯವಾದ ಪ್ರಿಯವಾದ ಹಿತವಾದ-ಕರ್ಣ ರಸಾಯನವಾಗುವಂತೆ ಆಡುವ ಮೃದುನುಡಿಗಳು, ಪ್ರಾಣಿ ಸಾಮಾನ್ಯದಲ್ಲಿ ದಯೆ, ವಿನಯ, ಗಾಂಭೀರ್ಯ ಗಳು, ನಿರಹಂಕಾರ ನಿಸ್ವಾರ್ಥತೆಗಳು ಈ ಮುಂತಾದ ಸದ್ಗುಣಗಳು ಆ ಕನ್ಯಾಶಿರೋಮಣಿಯಲ್ಲಿ ಸ್ವಾಭಾವಿಕವಾಗಿಯೇ ಉದ್ಭವಿಸಿ ಕಳೆಗೊಂಡುವು. ಆ ಕನ್ಯೆಯನ್ನು ನೋಡಿದವನು, ಈಕೆಯು ಸ್ತ್ರೀಜಾತಿಗೇ ಶಿರೋಭೂಷಣ ಪ್ರಾಯಳೆಂದು ಮೆಚ್ಚಿಕೊಳ್ಳುವಂತಹ ಸೌಂದರ್ಯ, ಸೌಶೀಲ್ಯ, ಸೌಕು ಮಾರ್ಯಾದಿಗಳೆಲ್ಲವೂ ಆಕೆಯಲ್ಲಿ ಮನೆಮಾಡಿಕೊಂಡಿದ್ದುವು. ವಿದ್ಯಾವತಿ ಯಾದರೂ ವಿನಯ ವಿಧೇಯತೆಗಳನ್ನುಳ್ಳವಳೂ, ಸೌಂದರ್ಯವತಿಯಾ ದರೂ ಅಭಿಮಾನ ಅಹಂಕಾರ ರಹಿತಳೂ, ಸೌಭಾಗ್ಯವತಿಯಾದರೂ ದಂ ಭ ರಹಿತಳೂ, ಮಹಾ ಕುಲದಲ್ಲಿ ಜನಿಸಿದವಳಾದರೂ ದೀನಾನಾಥರಲ್ಲಿ ವಿಶೇಷ ಪ್ರೇಮವುಳ್ಳವಳೂ ಆಗಿದ್ದು ಸುಕನ್ಯೆಯು, ಸಕಲರಿಂದಲೂ ಧನ್ಯೆ ಯೆಂಬ ಹೊಗಳಿಕೆಗೆ ಪಾತ್ರಳಾಗಿದ್ದಳು. ಚಿಕ್ಕ ವಯಸ್ಸಿನಲ್ಲೇ ತನ್ನ ಮಗಳು ಇಷ್ಟುಮಟ್ಟಿನ ಕೀರ್ತಿಯನ್ನು ಗಳಿಸಿದಳಲ್ಲಾ ಎಂದು ಶರ್ಯಾ ತಿಯು ಮಹದಾನಂದದಿಂದ ಆ ಪುತ್ರಿಯಲ್ಲಿ ವಿಶೇಷ ಅಭಿಮಾನವನ್ನಿಟ್ಟು ಕಣ್ಣನ್ನು ರೆಪ್ಪೆಯೇ ಎಂಬಂತೆ ಪ್ರೀತಿಸಿ ಪೋಷಿಸಿಕೊಂಡು ಬಂದನು.

ಶರ್ಯಾತಿಯು ಹೀಗೆ ಸುಸಂಸ್ಕೃತಳೂ ಪ್ರಾಯಸಮರ್ಥಳೂ ಆದ ತನ್ನ ಪುತ್ರಿಗೆ ಯೋಗ್ಯನಾದೊಬ್ಬ ವರನನ್ನು ಸಂಪಾದಿಸಬೇಕೆಂದು ಗುಪ್ತವಾಗಿ ಎಲ್ಲೆಲ್ಲೋ ಹುಡುಕಿದನು. ಆದರೆ ದೇಹಸೌಂದರ್ಯ ಯೌವನಾದಿಗಳನ್ನುಳ್ಳವರು ವಿದ್ಯಾವಿನಯಾದಿ ಸಂಪತ್ತಿಯಿಲ್ಲದವರಾಗಿಯೂ, ವಿದ್ಯಾವಂತರಾದವರು ರೂಪ ಸಂಪತ್ತಿಯಿಲ್ಲದವರಾಗಿಯೂ, ಎರಡೂ ಇದ್ದವರು ಮುಂಗೋಪ ಸ್ವಭಾವವುಳ್ಳವರೂ, ದುರಹಂಕಾರಿಗಳೂ ಆಗಿಯೂ ಇದ್ದ ಸಂದರ್ಭಗಳೇ ಅನೇಕ ಕಡೆಗಳಲ್ಲಿ ಕಂಡು ಬಂದುದರಿಂದ ಶರ್ಯಾತಿಗೆ ಕೆಲವು ದಿನಗಳೊಳಗಾಗಿಯೇ ವಿಶೇಷ ಬೇಸರವುಂಟಾಯಿತು. ಕನ್ಯಾಪಿತೃತ್ವವು ಎಂತಹ ಕ್ಲೇಶಕರವಾದುದೆಂಬುದು ಆಗ ಆತನಿಗೆ ತಿಳಿವಳಿಕೆಗೆ ಬಂದಿತು. ಕನ್ನೆಯರಿಗೆ ಸಕಾಲದಲ್ಲಿ ಲಗ್ನ ಮಾಡದೆ ಬಿಟ್ಟರೆ, ಮುಂದೆ ಅವರು ಸ್ವೇಚ್ಛಾಪ್ರವರ್ತನೆಯುಳ್ಳವರಾಗಿ ಕುಟಿಲಾರಿ ಬೆಳೆದ ಹಲ್ಲುಗಳಾಗಿ, ತಮಗೆ ಜನ್ಮವಿತ್ತ ವಂಶವನ್ನೇ ಅಪಮಾನಕ್ಕೆ ಗುರಿಮಾಡುವರೆಂಬ ಸಂಗತಿಯು ಆತನಿಗೆ ಪರಿಚಯವಿದ್ದಿತು. ಅಷ್ಟುಮಟ್ಟಿಗೆ ಸುಸಂಸ್ಕೃತಳಾದ ತನ್ನಾ ಮಗಳು ರಾಜಾಧಿರಾಜನ ಅರಮನೆಯನ್ನು ಬೆಳಗಲು ಯೋಗ್ಯವಾದ ಮಣಿದೀಪದಂತೆ ಇರುವಳೆಂಬ ಅಪೇಕ್ಷೆಯೇ ಆತನಲ್ಲಿ ಪೂರ್ಣವಾಗಿತ್ತು. ರಾಜಾಧಿರಾಜರ ಪುತ್ರರಲ್ಲೂ ಆಕೆಗೆ ಅನುರೂಪನಾದ ವರನು ಎಲ್ಲೂ ದೊರೆಯಲಿಲ್ಲ. ಆತುರಕ್ಕೆ ಎಲ್ಲಿಂದರಲ್ಲಿ-ಯಾರಿಗೆಂದರವರಿಗೆ ತನ್ನಾಪ್ರೇಮಪುತ್ರಿಯನ್ನು ತಳ್ಳಿಕೊಟ್ಟು ಇನ್ನು ಕೃತಕೃತ್ಯನಾದೆನೆಂದು ನಿಶ್ಚಿಂತನಾಗಲು, ಶರ್ಯಾತಿಯ ಅಂತಃಕರಣವು ಒಪ್ಪದಾಯಿತು. ಕರ್ತವ್ಯವು ತೋರದಂತಾಗಿ-'ನಾನು ಮಾಡುವಷ್ಟು ಪ್ರಯತ್ನ ಮಾಡಿದುದಾಯಿತು. ತಾಯಿ ತಂದೆಗಳು ಕನ್ನೆಗೆ ಬೇಕಾದ ಯೋಗ್ಯವರವನ್ನು ಹತ್ತೆಂಟು ಕಡೆ ನೋಡಿ ಹುಡುಕಬಹುದಲ್ಲದೆ-ಸೃಷ್ಟಿಸಲು ಬೇರೆ ಸಾಧ್ಯವಿಲ್ಲವಷ್ಟೆ! ನನ್ನಿಂದ ಸಾಧ್ಯವಿರುವಷ್ಟು ಪ್ರಯತ್ನ ಮಾಡಿದ್ದೇನೆ. ಮುಂದೆ ಭಗವದಿಷ್ಟವಿದ್ದಂತಾಗಲಿ' ಎಂದು ಕೆಲಕಾಲ ನಿಶ್ಚಿಂತನಾಗಿದ್ದನು.

ಮುಂದೊಂದುದಿನ ಶರ್ಯಾತಿರಾಜರ್ಷಿಯು ವನದಲ್ಲಿ ಸಂಚಾರಮಾಡಿಬರಲಿಚ್ಛಿಸಿ ತನ್ನ ಮಗಳೊಂದಿಗೆ ಹೊರಟನು. ವನಪ್ರಯಾಣಕ್ಕಾಗಿ ಹೊರಟ ಆತನ ಸೇವೆಗೊಂದೂ ಅಂಗರಕ್ಷಣೆಗೆಂದೂ ಕೆಲವುಮಂದಿ ಸೈನಿಕರೂ

ಪರಿವಾರದವರೂ ಆತನೊಂದಿಗೇ ಪ್ರಯಾಣ ಮಾಡಿದರು. ಶರ್ಯಾತಿಯು ಬಗೆಬಗೆಯ ಫಲಪುಷ್ಪಗಳ ಸೌಂದರ್ಯವನ್ನು ತೋರಿಸುತ್ತಾ ವನಸ್ಪತಿ ವರ್ಗಕ್ಕೆ ಸಂಬಂಧಿಸಿದ ಸೃಷ್ಟಿರಹಸ್ಯಗಳನ್ನು ಕುರಿತು ತನ್ನ ಮಗಳೊಂದಿಗೆ ತರ್ಕಿಸುತ್ತಾ, ನೇತ್ರಾನಂದಕರವಾದ ಆ ದೃಶ್ಯವನ್ನು ಎಷ್ಟು ನೋಡಿದರೂ ತೃಪ್ತಿಯುಂಟಾಗದೆ, ಅಲ್ಲೇ ಇದ್ದ ಹಸುರುಹುಲ್ಲಿನ ಮೈದಾನದಲ್ಲಿ ಕುಳಿತು, ಸುತ್ತಲೂ ಬೆಳೆದಿದ್ದ ಉನ್ನತೋನ್ನತ ವೃಕ್ಷಸಮೂಹಗಳನ್ನು ನೋಡಿ ಆಶ್ಚರ್ಯಪಡುತ್ತಾ ಇದ್ದನು. ಆ ವನದ ಅದ್ಭುತ ಸೌಂದರ್ಯವೂ ಆಶ್ಚರ್ಯಕರ ನೋಟವೂ ಅವರ ಕಣ್ಮನಗಳನ್ನು ಸೆಳೆದು ಬಿಟ್ಟುದರಿಂದ, ಒಂದೆರಡು ದಿನಗಳಾದರೂ ಆ ನೈಸರ್ಗಿಕವಾತಾವರಣದಲ್ಲಿ ವಾಸಿಸಿದ್ದು ತರುವಾಯ ಮುಂದಕ್ಕೆ ಪ್ರಯಾಣಮಾಡೋಣವೆಂದು ಇಚ್ಛಿಸಿದನು. ಶರ್ಯಾತಿಯ ಅಭಿಪ್ರಾಯವನ್ನು ತಿಳಿದ ಪರಿವಾರದವರೂ ಸೈನಿಕರೂ, ಅಲ್ಲಿಯೇ ಬೀಡುಬಿಟ್ಟು ಅವರ ವಿಶ್ರಾಂತಿಗೆಂದು ಎಲೆಮನೆಗಳನ್ನು ಸಿದ್ಧಗೊಳಿಸಿದರು. ಶರ್ಯಾತಿಯಂತೆಯೇ ಸುಕನ್ಯೆಯಾದರೂ, ಆ ಶಾಂತಮಯವಾತಾವರಣದಲ್ಲಿ ನಿರಾತಂಕವಾಗಿ ವಿಹಾರಮಾಡುತ್ತ ವಿವಿಧ ವನಸ್ಪತಿಗಳನ್ನು ಪರಿಚಯಮಾಡಿಕೊಳ್ಳುತ್ತ, ವನದಲ್ಲಿ ಮಾತ್ರವೇ ದೊರೆಯುವುಳ್ಳ ಹಲವು ವಸ್ತು ವಿಶೇಷಗಳನ್ನು ಸಂಗ್ರಹಿಸುವುದರಲ್ಲಿ ಇಷ್ಟವುಳ್ಳವಳಾಗಿ, ತಮ್ಮ ಬಿಡಾರಕ್ಕೆ ಸಮೀಪವಾಗಿಯೇ ಅಲ್ಲಲ್ಲಿ ಸಂಚರಿಸುತ್ತಿದ್ದಳು.

ಆ ವನಸ್ಥಳದಿಂದ ಬಿಡಾರವನ್ನೆತ್ತಿ ಇನ್ನು ಸ್ವಗ್ರಾಮಾಭಿಮುಖವಾಗಿ ಪ್ರಯಾಣಮಾಡೋಣವೆಂದು ಹೇಳಿಕೊಳ್ಳುತ್ತಲೇ ನಾಲ್ಕಾರುದಿನಗಳು ಕಳೆದು ಹೋಗುವುವು. ವನದ ಸಮೀಪದಲ್ಲೇ ಸಳಸಳನೆಂದು ಹರಿಯುತ್ತಿದ್ದ ತಿಳಿನೀರಿನ ಪ್ರವಾಹ, ಸುತ್ತಲೂ ಸಣ್ಣ ಪುಟ್ಟ ಗುಡ್ಡಗಳು, ಸಮೀಪದಲ್ಲೇ ಬಂದು ಸಂಚರಿಸುವ ಕಾಡಿನ ಮೊಲ ಜಿಂಕೆ ಮುಂತಾದ ಹಲವು ಸಾಧುಪ್ರಾಣಿಗಳು, ಸಮೀಪದ ಮರಗಳ ರೆಂಬೆಗಳಲ್ಲಿ ಕುಳಿತು ಕರ್ಣರಸಾಯನವಾಗಿ ಗಾನಮಾಡುವ ಪಕ್ಷಿಸಮೂಹಗಳು, ಅವುಗಳ ಬಗೆಬಗೆಯ ವರ್ಣರಂಜಿತವಾದ - ನೇತ್ರಾನಂದಕರವಾದ ರೆಕ್ಕೆಪುಕ್ಕಗಳು, ಮರಗಿಡಗಳಲ್ಲೇ ಪಕ್ವವಾಗಿ ಅತಿಶಯ ರುಚಿಕರವಾದ ವಿವಿಧ ಫಲಗಳು, ಮನೋಹರವಾಗಿ ಸುಳಿದಾಡುವ ಮಂದಮಾರುತ ಇವೆಲ್ಲವೂ ಶರ್ಯಾತಿರಾಜರ್ಷಿಯ ಮ

ತ್ತು ಆತನ ಪರಿವಾರದವರ ಮನಸ್ಸನ್ನು ಆಕರ್ಷಿಸಿ ಬಿಟ್ಟಿದ್ದುವು. ಇಂದು
ಹೊರಡೋಣವೆಂದರೆ ನಾಳೆಯಾಗಲಿ-ಎಂದು ಪ್ರತಿಯೊಬ್ಬನೂ ಅಲ್ಲಿಂದ
ಹೊರಡಬೇಕೆಂದರೆ ಅಪೇಕ್ಷೆಯಿಲ್ಲದೆ ಹಾಗೂ ಒಂದೆರಡು ದಿನಗಳು ಗತಿಸಿ
ದುವು-'ಇಂದಿಗೆ ಮೂರನೆಯ ದಿನ ಬಿಡಾರವನ್ನೆತ್ತಿ ಇಲ್ಲಿಂದ ಪ್ರಯಾಣ
ಮಾಡಬೇಕು ' ಎಂದು ಶರ್ಯಾತಿಯು ಕೊನೆಗೊಂದುದಿನ ತನ್ನ ಪರಿವಾರ
ದವರಿಗೆ ಆಜ್ಞೆಮಾಡಿದನು. ಆ ಮಾತಿಗೆ ಎಲ್ಲರೂ, 'ತಥಾಸ್ತು' ವೆಂದಿದ್ದರು.

ಆದರೆ ಆ ಅವಧಿಯೊಳಗಾಗಿ ಮಹಾಪ್ರಮಾದಕರ ಕಾರ್ಯವೊಂದು
ನಡೆದುಹೋಯಿತು. ಶರ್ಯಾತಿಯು ಅಂದು ಬಿಡಾರದಲ್ಲಿರಲು, ಸುಕನ್ಯೆ
ಯು ತನ್ನ ಗೆಳತಿಯರಿಬ್ಬರೊಂದಿಗೆ ಹೊರಟು, ಅವರೆಗೆ ನೋಡದಿದ್ದ ಆ ವನ
ದ ಒಂದು ದಿಕ್ಕನ್ನು ಅನುಸರಿಸಿ ಬಹುದೂರದವರೆಗೆ ಹೋಗಿಬಿಟ್ಟಳು.
ಅಷ್ಟುದಿನಗಳವರೆಗೆ ಆ ವನದಲ್ಲಿ ವಾಸಿಸಿದ ಅವರ ದೃಷ್ಟಿಗೆ ಗೋಚರವಾಗ
ದಿದ್ದ ಹಲವು ನವೀನ ಗಿಡಬಳ್ಳಿಗಳೂ, ವಿವಿಧ ಆಕೃತಿಯ ಹುಳುಹುಪ್ಪಟೆಗ
ಳೂ ಆದಿನ ದೃಷ್ಟಿಗೋಚರವಾಗಿ ಅವರ ಆಶ್ಚರ್ಯವನ್ನು ಮೇಲೆಮೇಲೆ
ಹೆಚ್ಚಿಸುತ್ತಿದ್ದುವು. ಸಖಿಯರೂ ಸುಕನ್ಯೆಯೂ ತಮಗೆ ಕೈಗೆಸಿಕ್ಕಿದ ಪುಷ್ಪ
ಗಳನ್ನೂ ಇತರ ಆಶ್ಚರ್ಯಕರ ವಸ್ತುಗಳನ್ನೂ ಸಂಗ್ರಹಿಸುತ್ತ, ವನಪಕ್ಷಿ
ಗಳಂತೆ ನಿರಾತಂಕವಾಗಿ ಗಾನಮಾಡುತ್ತಾ ದೂರದೂರವಾದರು. ಹಾಗೇ
ಮುಂದೆಮುಂದೆ ನಡೆದುಹೋಗುತ್ತಿರುವಲ್ಲಿ ಸುಕನ್ಯೆಗೆ ಉನ್ನತವಾದ ಪ್ರಶ
ಸ್ತವಾದ ಒಂದುಸ್ಥಳವು ದೃಷ್ಟಿಗೋಚರವಾಯಿತು. ಅಲ್ಲೊಂದು ಉನ್ನತ
ವಾದ ನೇರಳೆಯ ಹಣ್ಣಿನ ಮರವೂ, ಅದರಮೇಲೆ ಅವರೆಗೆ ಆಕೆಯು ನೋ
ಡದಿದ್ದಷ್ಟುಗಾತ್ರವಾದ ನೇರಳೆಯ ಹಣ್ಣುಗಳೂ ಗುತ್ತಿಗುತ್ತಿಗಳಾಗಿ ನೇತಾ
ಡುತ್ತಿದ್ದುವು. ಅವುಗಳನ್ನು ನೋಡಿದ ಸುಕನ್ಯೆಯು ಆ ಮರದಬಳಿಗೆ ನಡೆ
ದು ಕೆಲವು ನೇರಳೆಯ ಹಣ್ಣುಗಳನ್ನು ಸಂಗ್ರಹಿಸಿಕೊಳ್ಳೋಣವೆಂದು ಇಚ್ಛಿ
ಸಿ ಮುಂದಕ್ಕೆ ನಾಲ್ಕು ಹೆಜ್ಜೆಗಳನ್ನಿಟ್ಟಳು. ಅಷ್ಟರಲ್ಲಿ ಆ ಮರದ ಕೆಳಗಡೆ
ಒಂದು ದೊಡ್ಡಹುತ್ತವು ಇದ್ದುದು ಆಕೆಯ ಕಣ್ಣಿಗೆ ಕಾಣಿಸಿತು. ಸು
ತ್ತಲೂ ಇತರ ಗಿಡಮರಗಳೊಂದೂ ಇಲ್ಲದೆ, ಮೆಳೆ-ಪೊದರುಗಳಿಲ್ಲದೆ, ಪ್ರ
ಶಸ್ತವಾಗಿದ್ದ ಆ ಸ್ಥಳದಲ್ಲಿ ಏಕಾಂಗಿಯಾಗಿ ನಿಂತಿದ್ದ ಆ ಹುತ್ತವನ್ನು ಕಂಡು
ಆಕೆಗೆ ಅತಿಶಯ ಕೌತುಕವೆನ್ನಿಸಿತು. ನಾಲ್ಕುಹೆಜ್ಜೆಗಳನ್ನು ಮುಂದಕ್ಕಿಟ್ಟು

ಆ ಮರದ ಸಮೀಪಕ್ಕೆ ಹೋದಳು. ಅಗಾಧವೆಂಬಂತೆ ನಿಂತಿದ್ದ ಆ ಹುತ್ತ
ವನ್ನು ಕಂಡು ಏಕಾಂಗಿಯಾದ ಆಕೆಗೆ ಆ ನಿರ್ಜನಸ್ಥಳದಲ್ಲಿ ಮನದಲ್ಲಿ ಭೀತಿ
ಯುಂಟಾಗದಿರಲಿಲ್ಲ. ಆದರೂ, ಮನೋಹರವಾಗಿ ಮರದಮೇಲಿದ್ದ ಆ
ನೇರಳೆಯ ಹಣ್ಣುಗಳು ಬಾಯಲ್ಲಿ ನೀರು ಬರಿಸುವಂತೆ ಆಕರ್ಷಕವಾಗಿದ್ದುದ
ರಿಂದ ಆ ಸ್ಥಳದಿಂದ ಹೊರಡಲು ಆಕೆಯ ಕಾಲುಗಳು ಅನುಮತಿಸದಿದ್ದುವು.
ಹೀಗಾಗಿ ಸ್ವಲ್ಪಹೊತ್ತು ಆ ಸ್ಥಳದಲ್ಲೇ ನಿಂತು, ಇಷ್ಟುದೊಡ್ಡದಾದ ಹು
ತ್ತವು ಇಲ್ಲಿ ಬೆಳೆದದ್ದು ಹೇಗೆ ಎಂದು ಯೋಚನಾಮಗ್ನಳಾಗಿ, ಅದನ್ನೇ ಕಣ್ಣಿ
ಟ್ಟು ನೋಡುತ್ತಿರಲು ತನ್ನ ಕಣ್ಣಿನ ಅಳತೆಗೆ ಸರಿಯಾಗಿ ಆ ಹುತ್ತದಲ್ಲಿ
ಎರಡು ರಂಧ್ರಗಳಿದ್ದುದು ಆಕೆಗೆ ಕಾಣಿಸಿತು. ಅಖಂಡವಾಗಿದ್ದಂತೆ ಕಾ
ಣುತ್ತಿದ್ದ ಆ ಹುತ್ತದಲ್ಲಿ ಏನಿರಬಹುದೋ ನೋಡಬೇಕೆಂಬ ಇಚ್ಛೆಯು
ಆಕೆಗೆ ಅಂಕುರಿಸಿತು. ಈಗ ಕಾಣಿಸುತ್ತಿದ್ದ ಆ ರಂಧ್ರಗಳ ಮೂಲಕ ಆ
ಹುತ್ತದೊಳಕ್ಕೆ ಕಣ್ಣಿಟ್ಟು ನೋಡೋಣವೆಂದುಕೊಂಡು, ನಿರ್ಭೀತಿಯಿಂದ
ಅದರ ಬಳಿಗೆ ನಡೆದುಹೋಗಿ ಆ ರಂಧ್ರಗಳಲ್ಲಿ ತನ್ನ ಕಣ್ಣಿಟ್ಟು ಒಳಗೆ
ಏನಿರುವುದೋ ಎಂದು ದಿಟ್ಟಿಸಿದಳು. ಹೊರಕ್ಕೆ ನೋಡಲು ಕೇವಲ
ಹುತ್ತವೆಂಬಂತೆ ತೋರುತ್ತಿದ್ದರೂ, ಒಳಗೆ ಥಳಥಳನೆಂದು ನಕ್ಷತ್ರಗ
ಳಂತೆ ಹೊಳೆಯುತ್ತಿದ್ದ ಜ್ಯೋತಿಗಳೆರಡು ಆಕೆಗೆ ಕಾಣಿಸಿದುವು. ಅವುಗ
ಳನ್ನು ಕಂಡ ಮೇಲಂತೂ ಆಕೆಯ ಕೌತುಕವು ಇನ್ನೂ ಹೆಚ್ಚಿತು. ಕೇವಲ
ಮೃಣ್ಮಯವಾದ ಆ ಹುತ್ತದಲ್ಲಿ ಅಂತಹ ಪ್ರಕಾಶಮಯ ಜ್ಯೋತಿಗಳು
ಹೇಗೆ ಬಂದುವೆಂದು ತೋರದೆ, ಅವು ಏನೋ ತಿಳಿಯಬೇಕೆಂದು ಇಚ್ಛೆ
ಗೊಂಡು, ಸಮೀಪದಲ್ಲೇ ಬಿದ್ದಿದ್ದ ಒಂದು ಉದ್ದವಾದ ಜಾಲಿಯ ಮು
ಳ್ಳನ್ನು ಕೈಯಿಂದೆತ್ತಿಕೊಂಡು ಅದರಿಂದ ಚುಚ್ಚಿ ನೋಡಬೇಕೆಂದು ಬಯ
ಸಿದಳು. ಆದರೆ, ಹಾಗೆ ಮಾಡಿದರೆ ಅದರಿಂದ ಏನಾದರೂ ಪ್ರಮಾದವುಂ
ಟಾದೀತೋ ಎಂಬ ಭಯವು ಆಕೆಗೆ ಉಂಟಾಗದಿರಲಿಲ್ಲ. ಆದರೂ ಹುತ್ತ
ದೊಳಗಿನ ಜ್ಯೋತಿಯೆಂತಹುದೋ ತಿಳಿಯಬೇಕೆಂಬ ಆಸೆಯು ಅಧಿಕವಾಗಿ
ದ್ದುದರಿಂದ ವಿಧಿಪ್ರೇರಿತಳಾಗಿಯೋ ಎಂಬಂತೆ ಉದ್ದವಾದ ಆ ಮುಳ್ಳು
ಗಳನ್ನು ಆ ರಂಧ್ರಗಳೊಳಗಿಟ್ಟು ಚುಚ್ಚಿಬಿಟ್ಟಳು.

ಆ ಹುತ್ತದಲ್ಲಿ ಏನು ವಿಶೇಷವಿರುವುದೋ ತಿಳಿಯಬೇಕೆಂಬ ಕುತೂಹಲದಿಂದ ಸುಕನ್ಯೆಯು ಹಾಗೆ ಮುಳ್ಳುಚುಚ್ಚಿ ಮುಂದೆ ಏನಾಗುವುದೋ ನೋಡೋಣವೆಂದು ಕ್ಷಣಕಾಲ ಅಲ್ಲೇ ನಿಂತಿದ್ದಳು. ಆ ಮುಳ್ಳು ಆ ರಂಧ್ರಗಳ ಮೂಲಕ ಹುತ್ತದ ಒಳಕ್ಕೆ ಪ್ರವೇಶಿಸಿ ಯಾವ ವಸ್ತುವಿಗೆ ಚುಚಿತೋ ಮತ್ತೆ ಏನಾಯಿತೋ! ಆದರೆ ಒಡನೆ ಆ ರಂಧ್ರಗಳಿಂದ ಸಳಸಳನೆಂದು ರಕ್ತವು ಧಾರೆಧಾರೆಯಾಗಿ ಇಳಿದು ಹರಿಯುತೊಡಗಿತು. ನಿರ್ಜನವಾದ ಆ ಸ್ಥಳ, ಅಪೂರ್ವವಾದ ಆ ವಲ್ಮೀಕ (ಹುತ್ತ) ಅದರ ವಿಚಾರವೇನೆಂದು ತಿಳಿಯದೆ ಅವಿವೇಕಿಯಾಗಿ ತಾನು ಮಾಡಿದ ಕಾರ್ಯ! ಅದರಿಂದ ಪ್ರಾಪ್ತವಾದ ಈ ಅನರ್ಥ! ಇವುಗಳನ್ನೆಲ್ಲ ಒಂದೊಂದನ್ನಾಗಿ ಯೋಚಿಸಿಕೊಂಡು, ಸುಕನ್ಯೆಯು ಪಾಪ, ನಡುಗಿಹೋದಳು. ಆ ಹುತ್ತದ ರಂಧ್ರಗಳಿಂದ ಹರಿದ ರಕ್ತವನ್ನು ನೋಡಿನೋಡಿದಂತೆ ಆಕೆಯ ಮೈ ಜುಮ್ಮೆಂದಿತು! ಕಣ್ಣು ಕತ್ತಲಾದಂತಾಯಿತು. ಮುಂದೇನು ಮಾಡಬೇಕೆಂದು ತೋರದೆ, ಮೈ ಮೇಲೆ ಸ್ಮೃತಿ ತಪ್ಪಿದಂತಾಗಿ ನೆಲದಮೇಲೆ ಬಿದ್ದುಹೋದಳು.

---

## ಅಧ್ಯಾಯ ೩ "ವಿವಾಹ ಮಂಗಳಕಾರ್ಯ"

ತಾನು ಮಾಡಿದ ಅಕಾರ್ಯದಿಂದ ಮುಂದಾವ ದುಷ್ಪರಿಣಾಮ ಉಂಟಾಗುವುದೋ ಎಂಬ ಚಿಂತೆಯು ಮನಸ್ಸಿನಲ್ಲೆಲ್ಲಾ ವ್ಯಾಪಿಸಿದ್ದುದರಿಂದ ಸುಕನ್ಯೆಯು ಆ ಕಳವಳದಿಂದಲೇ ಸ್ವಲ್ಪ ಹೊತ್ತಿನೊಳಗಾಗಿ ಪುನಃ ಎಚ್ಚರಗೊಂಡಳು. ಒಡನೆ ಅವಶಳಾಗಿ ಹುತ್ತದಕಡೆ ತಿರುಗಿ ನೋಡಿದಳು. ಮೊದಲು ಹರಿದಷ್ಟಲ್ಲದೆ ಹೆಚ್ಚು ರಕ್ತವೇನೂ ರಂಧ್ರಗಳಿಂದ ಹೊರಟು ಹರಿಯುತ್ತಿರಲಿಲ್ಲ. ಆದರೆ ಮೊದಲು ಹರಿದ ರಕ್ತವು ಕರೆಗಟ್ಟಿ, ತಾನು ಮಾಡಿದ ಪಾಪಕಾರ್ಯದ ರೂಪುಗೊಂಡ ಸಾಕ್ಷ್ಯವೋ ಎಂಬಂತೆ ಕಾಣಿಸುತ್ತಿದ್ದಿತು. ಅದನ್ನುಕಂಡು ಮನಸ್ಸಿನಲ್ಲಿ ಸ್ವಲ್ಪ ಧೈರ್ಯಸಂಚಾರವಾಯಿ

ತು. ಒಡನೆ ಮೇಲಕ್ಕೆದ್ದು, ಆ ಸ್ಥಳದಲ್ಲಿ ಇನ್ನು ಹೆಚ್ಚು ಹೊತ್ತು ನಿಲ್ಲಲು ಅಂಜಿ, ಹಿಂದೆ ಹಿಂದೆ ತಿರುಗಿ ನೋಡಿಕೊಳ್ಳುತ್ತಾ, ತಮ್ಮ ತಂದೆಯು ಇಳಿದಿದ್ದ ಬಿಡಾರವನ್ನು ಕುರಿತು ಪ್ರಯಾಣಮಾಡಿದಳು. ಆ ವೇಳೆಗೆ ಇತರ ಸಖಿಯರೂ ಆಶ್ರಮಕ್ಕೆ ಬಂದಿದ್ದರು. ಚಿಂತಾಕ್ರಾಂತಳಾಗಿದ್ದುದರಿಂದ ಸುಕನ್ಯೆಯು ಯಾರೊಂದಿಗೂ ಮಾತನಾಡಲು ಇಚ್ಛಿಸದೆ, ಯಾರೊಬ್ಬರನ್ನೂ ಕಣ್ಣೆತ್ತಿ ನೋಡಲೂ ಮನಸ್ಸಿನಲ್ಲಿ ಧೈರ್ಯವುಂಟಾಗದೆ, ಒಂದು ಏಕಾಂತಸ್ಥಳದಲ್ಲಿ ಮುಸುಗಿಟ್ಟು ಮಲಗಿಬಿಟ್ಟಳು.

ಆ ವೇಳೆಗೆ ತಮ್ಮ ರಾಜಧಾನಿಯನ್ನು ಬಿಟ್ಟು ಬಂದು ಬಹುದಿನಗಳಾಗಿದ್ದುದರಿಂದಲೂ, ಅಕಸ್ಮಾತ್ತಾಗಿ ಇನ್ನು ಹೊರಡಬೇಕೆಂದು ಪ್ರಭುವಿನ ಆಜ್ಞೆ ದೊರೆತಿದ್ದುದರಿಂದಲೂ ಸೈನಿಕರೂ ಪರಿವಾರದವರೂ ಅದರ ಸಿದ್ಧತೆಯಲ್ಲಿದ್ದರು. ಅಷ್ಟರಲ್ಲಿ ಆ ಗುಂಪಿನಲ್ಲಿ ಒಂದು ದೊಡ್ಡ ಹಾಹಾಕಾರವೆದ್ದಿತು. ಸೈನಿಕರಿಗೂ ಪರಿವಾರದ ಎಲ್ಲರಿಗೂ ಅಕಸ್ಮಾತ್ತಾಗಿ ಮಲಮೂತ್ರಗಳು ಕಟ್ಟಿ, ಉದರದಲ್ಲಿ ಅಸಾಧಾರಣ ನೋವೂ ಥಳುಕೂ ಕಾಣಿಸಿಕೊಳ್ಳಲಾರಂಭವಾದುವು. ಒಬ್ಬೊಬ್ಬನೂ ಹೊಟ್ಟೆ ನೋವಿನಿಂದಲೂ, ಕಿಬ್ಬೊಟ್ಟೆಯ ಉಬ್ಬರದಿಂದಲೂ ಅಸಾಧ್ಯ ಸಂಕಟಕ್ಕೀಡಾಗಿ, ಕಾರಣತಿಳಿಯದೆ, ನೆಲದ ಮೇಲೆ ಬಿದ್ದು ಹೊರಳುತ್ತಾ, ನರಳುತ್ತಾ,—ಅಕ್ಕಟಾ, ನಮಗಿನ್ನೇನು ದಿಕ್ಕು ? ನಾನು ಈ ಬಾಧೆಯಿಂದ ಹೇಗೆ ಪಾರಾಗಿ ಬದುಕಬಲ್ಲೆನು ? ಅಯ್ಯೋ ಏನುಮಾಡಲಿ ?' ಎಂದು ಮರಣವೇದನೆಯನ್ನು ಅನುಭವಿಸುತ್ತಾ ಉಪಾಯತೋರದೆ ಹಾಹಾಕಾರ ಮಾಡಲಾರಂಭಿಸಿದನು. ಶರ್ಯಾತಿಗೆ ತನ್ನ ಪರಿವಾರದವರಿಗೂ, ಸೈನಿಕರಿಗೂ ಏಕಾಏಕಿ ಪ್ರಾಪ್ತವಾದ ಈ ದುಸ್ಥಿತಿಗೆ ಕಾರಣವೇನೆಂದು ತೋರದಾಯಿತು. ಅದು ದೇಹದಲ್ಲಿ ಹುಟ್ಟಿದ ರೋಗವಾಗಿದ್ದರೆ, ಒಬ್ಬರಿಬ್ಬರಿಗೆ ಮಾತ್ರ ಪ್ರಾಪ್ತವಾಗಬಹುದಾಗಿತ್ತು. ಆದರೆ, ನೂರಾರು ಮಂದಿಯೂ ಏಕಕಾಲದಲ್ಲಿ ಮಲಮೂತ್ರ ಬಂಧನವೆಂಬ ಒಂದೇ ರೋಗದಿಂದ ಪೀಡಿತರಾಗಿರುವುದಕ್ಕೆ ಏನೋ ಪ್ರಬಲ ಕಾರಣವಿರಬೇಕೆಂದು ಊಹಿಸಿದನು. ಏಕಾಏಕಿ ಪ್ರಾಪ್ತವಾದ ಈ ಬಗೆಯ ಅನಾಹುತಕ್ಕೆ ಕಾರಣವೇನಿರಬಹುದೆಂದು ದೀರ್ಘವಾಗಿ ಯೋಚಿಸಲು, ಅದು ಯಾರೋ ಮಹರ್ಷಿಯರಿಗೆ ಮಾಡಿದ ಅಪಚಾರದ ಫಲವಾಗಿರಬಹುದೆಂದು

ಆತನ ಬುದ್ಧಿಗೆ ಸ್ಫುರಿಸಿತು. ಒಡನೆ ತಾವು ಬಂದು ಇಳಿದಿರುವ ಸ್ಥಳವು ಯಾವುದು ? ಇದಾವುದಾದರೂ ಋಷ್ಯಾಶ್ರಮವೋ ? ತಮ್ಮಲ್ಲಿ ಯಾರಿಂದಲಾದರೂ ಅವರಿಗೆ ಅಪಚಾರ ನಡೆಯಿತೋ ಎಂದು ಯೋಚಿಸಿ ತಿಳಿದು, ತನ್ನ ಸೈನಿಕರನ್ನು ಒಳಗೆ ಕರೆದು—'ಎಲೈ ಇದು ವ್ಯಾಸ ಮಹರ್ಷಿಗಳ ಆಶ್ರಮವು ! ದುರುಳನಾದ ನಾನು ಮೊದಲೇ ಈ ಸ್ಥಳವಾವುದೆಂಬುದನ್ನು ಕುರಿತು ಯೋಚಿಸದೆ, ಆ ಮಹರ್ಷಿಗಳನ್ನು ಕಂಡು ವಂದಿಸಿ ಗೌರವಿಸದೆ ಮಹಾ ಅಪರಾಧವಮಾಡಿದೆ. ಅದರೆ ಈಚೆಗೆ ಅಕಸ್ಮಾತ್ತಾಗಿ ಪ್ರಾಪ್ತವಾದ ಈ ಅನರ್ಥವನ್ನು ಕುರಿತು ನನ್ನ ಮನಸ್ಸಿನಲ್ಲಿ ಅತಿಶಯ ಭೀತಿಯುಂಟಾಗಿರುವುದು. ಆ ಮಹಾತ್ಮರಿಗೆ ನಮ್ಮಲ್ಲಿ ಯಾರಿಂದಲೋ ಏನಾದರೊಂದು ಮಹದಪಚಾರವು ನಡೆದಿರಬೇಕೆಂದು ತೋರುತ್ತದೆ. ಹಾಗಿಲ್ಲದಿದ್ದರೆ ಈ ಬಗೆಯ ಅನಾಹುತವು ಉಂಟಾಗಲಾರದು. ಹೇಳಿರಿ, ನಿಮ್ಮಲ್ಲಿ ಯಾರಾದರೂ ಆ ಮಹರ್ಷಿಯ ಸಾನ್ನಿಧ್ಯದಿಂದ ಪವಿತ್ರವೆನ್ನಿಸಿಕೊಂಡಿರುವ ಈ ಆಶ್ರಮಕ್ಕಾಗಲೀ ಆತನಿಗೇ ಆಗಲಿ ಯಾವ ಬಗೆಯಿಂದಲಾದರೂ ಹಾನಿಯನ್ನುಂಟುಮಾಡಿರುವಿರಾ? ಇದರ ಪಾವಿತ್ರ್ಯತೆಗೆ ಕುಂದನ್ನು ಉಂಟುಮಾಡುವ ಯಾವ ಅಪರಾಧವನ್ನು ನಿಮ್ಮಲ್ಲಿ ಯಾವನು ಮಾಡಿರುವನೋ ಅವನು ಸತ್ಯವಾಗಿ ತನ್ನ ತಪ್ಪನ್ನು ಒಪ್ಪಿಕೊಂಡು ಬಿಡಲಿ. ಇಲ್ಲದಿದ್ದರೆ ಮಹರ್ಷಿಗಳ ಕೋಪಕ್ಕೆ ನಾವುಗಳೆಲ್ಲರೂ ಗುರಿಯಾಗಿ ಇನ್ನೂ ವಿಶೇಷ ದುಃಖಗಳ ಪಾಲಾಗಬೇಕಾದೀತು ?'' ಎಂದು ನುಡಿದನು.

ಸೈನಿಕರಲ್ಲೂ ಪರಿವಾರದಲ್ಲೂ ಯಾರೂ ಯಾವ ಬಗೆಯ ಅಪಚಾರ ಕಾರ್ಯವನ್ನೂ ಮಾಡಿರಲಿಲ್ಲವಾದುದರಿಂದ, ಶರ್ಯಾತಿಯು ಆ ಮಾತುಗಳನ್ನು ಕೇಳಿ ಅವರಲ್ಲಿ ಯಾರೂ ಏನೊಂದು ಪ್ರತ್ಯುತ್ತರವನ್ನೂ ಹೇಳಲು ಸಾಮರ್ಥ್ಯರಾಗಲಿಲ್ಲ. ಎಲ್ಲರೂ ಸುಮ್ಮನಿದ್ದುದನ್ನು ನೋಡಿ, ಶರ್ಯಾತಿಯು—'ಇದು ಏನು ! ಈ ಆಶ್ರಮಕ್ಕೆ ಬಂದೊಡನೆಯೇ ಮಹರ್ಷಿಗಳನ್ನು ಕಂಡು ವಂದಿಸಿ ಪೂಜಿಸದಿದ್ದುದೇ ನನ್ನ ಮಹದಪರಾಧವಾಗಿದ್ದೀತೇ ? ದೊಡ್ಡವರನ್ನು ಅನಾದರಣೆಮಾಡಿದ ಈ ಲೋಪವನ್ನು ನನ್ನ ಗಮನಕ್ಕೆ ತರಲಿಕ್ಕಾಗಿಯೇ ಮಹರ್ಷಿಗಳು ನನಗೆ ಈ ಬಗೆಯ ಶಿಕ್ಷೆಯನ್ನು ವಿಧಿಸಿರಬಹುದೇ ?' ಎಂದು ತನ್ನಲ್ಲಿ ತಾನೇ ಮರುಗುತ್ತಿದ್ದನು. ಗಳಿಗೆಗಳಿಗೆಗೆ

ಆ ಪರಿವಾರದವರ ಉದರ ಶೂಲೆಯೂ-ಹೊಟ್ಟೆಯುಬ್ಬರವೂ ಹೆಚ್ಚು ಹೆಚ್ಚಾಗುತ್ತ ಸಹನಾತೀತವಾಗತೊಡಗಿತು. ಎಲ್ಲೆಲ್ಲೂ ಹಾಹಾಕಾರವು ಬಲವಾಯಿತು. ಅಸಹನೀಯ ಸಂಕಟದಿಂದ, ಆ ವ್ಯಾಧಿಗೆ ಪೀಡಿತನಾದ ಯಾವನೂ ಸ್ವಸ್ಥವಾಗಿ ಕುಳಿತಿರಲು ಅಸಾಧ್ಯವಾಗಿ ನೆಲದಮೇಲೆ ಬಿದ್ದು ಹೊರಳಾಡತೊಡಗಿದನು. ತನ್ನ ಪರಿವಾರದವರಿಗೂ ಸೈನಿಕರಿಗೂ ಅಕಸ್ಮಾತ್ತಾಗಿ ಪ್ರಾಪ್ತವಾದ ಈ ವ್ಯಾಧಿಗೆ ಕಾರಣವೇನೆಂಬುದು ತಿಳಿಯದೆ, ಅವರ ದುಃಖವನ್ನು ನೋಡಲಾರದೆ, ಪರಿಹಾರಕ್ಕೆ ಉಪಾಯವು ಗೋಚರವಾಗದೆ, ಶರ್ಯಾತಿ ರಾಜರ್ಷಿಯು ಮಹದ್ವ್ಯೋಚನೆಯಲ್ಲಿ ಕಗ್ಗಲಿದ ಚಿತ್ತವುಳ್ಳವನಾಗಿ ತಲೆಯಮೇಲೆ ಕೈಕೊತ್ತು ಒಂದೆಡೆಯಲ್ಲಿ ಕುಳಿತುಬಿಟ್ಟನು.

ಸಾಧ್ವೀರತ್ನವಾದ ಸುಕನ್ಯೆಯು ಹುತ್ತದಲ್ಲಿ ಹಾವಿರಬಹುದು ಅಥವ ಮತ್ತಾವದಾದರೂ ಹುಳುಹುಪ್ಪಟೆಯಿರಬಹುದು, ಎಂದು ತಿಳಿದು, ಆದರೆ ಥಳಥಳನೆಂದು ಹೊಳೆವ ಆ ಪದಾರ್ಥಗಳೇನೋ ತಿಳಿಯಬೇಕೆಂಬ ಕುತೂಹಲಾವಿಷ್ಟಳಾಗಿ ತಾನು ಮಾಡಿದ ಕಾರ್ಯವು ಇಂತಹ ಭಯಂಕರ ಪರಿಣಾಮವನ್ನುಂಟು ಮಾಡೀತೆಂದು ಕನಸು ಮನಸುಗಳಲ್ಲೂ ತಿಳಿದಿರಲಿಲ್ಲ. ಯಾರಿಗೂ ತಿಳಿಯದಂತೆ ಮಾಡಿದ ಆ ಕಾರ್ಯವು ಹಾಗೆಯೇ ಯಾರಿಗೂ ತಿಳಿಯದಂತೆಯೇ ಇದ್ದುಬಿಡಲೆಂದು ಈವರೆಗೂ ಸುಮ್ಮನಿದ್ದಳು. ಆದರೆ ತನ್ನ ಕಡೆಯ ಜನರ ರೋದನವೂ ಹಾಹಾಕಾರವೂ ನರಳುವಿಕೆಯೂ ಸಂಕಟವೂ ಕೇವಲ ಪರಿತಾಪಕರವಾಗುತ್ತ ಬಂದುದನ್ನು ಕಂಡು, ಇದು ತನ್ನ ಅಕೃತ್ಯದ ಫಲವೇ ಅಲ್ಲದೆ ಮತ್ತಾವ ಕಾರಣದಿಂದಲೂ ಪ್ರಾಪ್ತವಾದುದಲ್ಲ. ಮಹರ್ಷಿಗಳಾದ ಚ್ಯವನರು ಆ ಹುತ್ತದಲ್ಲೇ ಕುಳಿತು ತಪಸ್ಸು ಮಾಡುತ್ತಿದ್ದಿರಬಹುದು. ಥಳಥಳನೆಂದು ಹೊಳೆದುವು ಅವರ ಕಣ್ಣುಗಳಿರಬಹುದು. ನಾನು ಅಜ್ಞಾನಿಯಾಗಿ ಅವುಗಳನ್ನು ಚುಚ್ಚಿ ಮಹರ್ಷಿಗಳಿಗೆ ಮಹದಪಚಾರ ಮಾಡಿ ಬಿಟ್ಟೆನಲ್ಲಾ ! ಅಕ್ಕಟಾ ಸಜ್ಜನರನ್ನೂ, ಮಹಾತ್ಮರನ್ನೂ ನೋಯಿಸಿದ ನನಗೆ ಯಾವ ಶಿಕ್ಷೆಯಾದರೆ ಈ ಪಾಪ ಪರಿಹಾರವಾದೀತು ?' ಎಂದು ಮುಂತಾಗಿಯೇ ಯೋಚಿಸಿಕೊಂಡಳು. ಇನ್ನು ಸುಮ್ಮನೆ ಕುಳಿತುಕೊಳ್ಳುವುದು ಮಹಾ ಅಪಾಯಹೇತುವೆಂದು ತೋರಿತು ! ಒಡನೆ ಮನೆಗೆ ಬಂದು ಮಹಾ ವ್ಯಸನಾಕ್ರಾಂತನಾಗಿ ಕುಳಿತಿದ್ದ ತನ್ನ ತಂದೆಯ ಎರಡು ಪಾದಗ

ಳನ್ನೂ ಹಿಡಿದು ಅವುಗಳಮೇಲೆ ತನ್ನ ತಲೆಯನ್ನಿಟ್ಟು ಧಾರಾಳವಾಗಿ ಕಣ್ಣೀರನ್ನು ಸುರಿಸುತ್ತಾ—'ತಂದೆಯೇ ಪಾಪಿಯಾದ ನಾನು ಮಾಡಿದ ಅಪರಾಧವನ್ನು ಕ್ಷಮಿಸು. ನಾನು ಅಜ್ಞಳಾಗಿ ಒಂದು ಮಹದಪರಾಧ ಕಾರ್ಯವನ್ನು ಮಾಡಿ ಬಿಟ್ಟಿದ್ದೇನೆ. ಬಹುಶಃ ಅದರ ಫಲವಾಗಿಯೇ ಇಂತಹ ದುಸ್ಥಿತಿಯು ನಮ್ಮ ಜನರಿಗೆ ಪ್ರಾಪ್ತವಾಗಿದ್ದೀತೆಂದು ನನಗೆ ಈಗ ತೋರುತ್ತದೆ. ಸಖಿಯರೊಂದಿಗೆ ಇಲ್ಲೇ ವನದಲ್ಲಿ ಸಂಚರಿಸುತ್ತಾ ಹೋದ ಕಾಲದಲ್ಲಿ, ಏಕಾಂತವಾದೊಂದು ಎಡೆಯಲ್ಲಿ ಒಂದು ದೊಡ್ಡ ಹುತ್ತವಿದ್ದುದನ್ನು ಕಂಡು ಅದರ ಬಳಿಗೆ ಹೋದೆನು. ಅದರಲ್ಲಿ ಎರಡು ರಂಧ್ರಗಳು ಕಾಣಿಸಿದುವು. ಒಳಗೆ ಏನಿರುವುದೋ ನೋಡಬೇಕೆಂದು ಕುತೂಹಲವುಂಟಾಯಿತು. ಕಣ್ಣಿಟ್ಟು ಆ ರಂಧ್ರಗಳ ದ್ವಾರಾ ನೋಡಿದೆನು. ಒಳಗೆ ನಕ್ಷತ್ರಗಳಂತೆ ಥಳಥಳನೆಂದು ಎರಡು ಪ್ರಕಾಶಮಯ ವಸ್ತುಗಳು ಕಾಣಿಸಿದುವು. ಅವುಗಳು ಏನೋ ಎಂದು ತಿಳಿದು, ಸುಮ್ಮನೆ ಬಿಟ್ಟುಬಾರದೆ, ಒಂದು ಕುಚೇಷ್ಟೆಯನ್ನು ಮಾಡಿದೆನು. ಒಂದು ಮುಳ್ಳನ್ನು ತೆಗೆದುಕೊಂಡು ಆ ರಂಧ್ರಗಳ ಮೂಲಕ ಆ ಪ್ರಕಾಶಮಯ ವಸ್ತುಗಳನ್ನು ಚುಚ್ಚಿಬಿಟ್ಟೆನು. ಉತ್ತರಕ್ಷಣದಲ್ಲೇ ಆ ಜ್ಯೋತಿಗಳು ಮಾಯವಾದುವು. ಅಲ್ಲದೆ, ಆ ರಂಧ್ರಗಳಿಂದ ರಕ್ತವು ಹೊರಹೊರಟು ಹರಿಯಲಾರಂಭವಾಯಿತು. ಅದೇನೆಂದೂ, ಏಕೆ ಹಾಗಾಯಿತೆಂದೂ ತಿಳಿಯಲಾರದೆ ಮನಸ್ಸಿನಲ್ಲಿ ಅತಿಶಯ ಗಾಬರಿಯುಂಟಾಗಲು, ಆ ಸ್ಥಳದಲ್ಲಿ ನಿಲ್ಲಲಾರದೆ ಚೋರಳಂತೆ ಅಲ್ಲಿಂದ ಹೊರಟು ಬಂದು ಬಿಟ್ಟೆನು. ಅಕ್ಕಟಾ ಪಾಪಿಯಾದ ನಾನು ಮಹರ್ಷಿಗಳಿಗೆ ಮಹಾ ಅಪರಾಧವನ್ನುಂಟುಮಾಡಿದೆನೆಂಬುದರಲ್ಲಿ ಸಂಶಯವಿಲ್ಲ. ಇದಕ್ಕಾಗಿ ಏನು ಶಿಕ್ಷೆಯು ಪ್ರಾಪ್ತವಾಗುವಂತಿದ್ದರೂ ಅನುಭವಿಸಲು ಸಿದ್ಧಳಾಗಿದ್ದೇನೆ !'' ಎಂದು ನುಡಿದು-ಅಯ್ಯೋ ಮಹರ್ಷಿಗಳಿಗೆ ನಿಷ್ಕಾರಣವಾಗಿ ಎಂತಹ ಬಾಧೆಯನ್ನು ಉಂಟುಮಾಡಿದೆನಲ್ಲಾ ! ನನ್ನಂತಹ ಪಾಪಿ ಯಾರು ಎಂದು ಪುನಃ ಪುನಃ ಪಶ್ಚಾತ್ತಾಪಪಡುತ್ತಿದ್ದಳು.

ಶರ್ಯಾತಿಗೆ, ತನ್ನವರಿಗೆ ಪ್ರಾಪ್ತವಾದ ಆ ಮೂಕರೋಗಕ್ಕೆ ಕಾರಣವೇನಿರಬಹುದೆಂಬುದು ಈಗ ಸ್ಪಷ್ಟವಾಗಿ ಗೋಚರವಾಯಿತು. ನಿಶ್ಚಯವಾಗಿಯೂ ಮಹಾತ್ಮರ ವಿಷಯದಲ್ಲಿ ನಡೆದ ಈ ಅಪಚಾರಫಲವಾಗಿಯೇ,

ಇಂತಹ ದುರಂತ ಸಂಕಟವು ಪ್ರಾಪ್ತವಾಯಿತೆಂದು ನಿರ್ಧರಿಸಿದನು. ಒಡನೆ, ತನ್ನ ಮಗಳನ್ನೂ, ಇತರ ತನ್ನ ಪರಿವಾರದವರನ್ನೂ ಕರೆದುಕೊಂಡು ಸುಕನ್ಯೆಯು ಆ ಹುತ್ತವಿದ್ದ ಎಡೆಯನ್ನು ತೋರಿಸಲಿಕ್ಕಾಗಿ ಮಾರ್ಗದರ್ಶಕಳಾಗಿ ಮುಂದೆ ನಡೆಯುತ್ತಿರಲು ಎಲ್ಲರೊಂದಿಗೆ ಹೊರಟು, ಆ ಸ್ಥಳವನ್ನು ಸೇರಿದನು. ಪ್ರಶಸ್ತವಾದ ಆ ಸ್ಥಳದಲ್ಲಿದ್ದ ಆ ಏಕಮಾತ್ರ ವಲ್ಮೀಕವು, ಅವರಿಗೆ ದೃಷ್ಟಿಗೋಚರವಾಯಿತು. ಸಮೀಪಕ್ಕೆ ಬಂದು ನೋಡಲು ಆ ರಂಧ್ರಗಳಿಂದ ರಕ್ತವು ಹರಿದು ಒಣಗಿ ಕರೆಗಟ್ಟಿದ್ದುದು ಕಾಣಿಸಿತು.

ದೀರ್ಘಾನುಭವಿಯೂ ಸ್ವಯಂ ರಾಜರ್ಷಿಯೂ ಆದ ಶರ್ಯಾತಿಗೆ ಇನ್ನು ಸಂಶಯವು ಉಳಿಯಲಿಲ್ಲ. ಆ ವಲ್ಮೀಕದಲ್ಲೇ ತಪ್ಪದೆ ಮಹರ್ಷಿ ಚ್ಯವನನು ತಪಸ್ಸು ಮಾಡುತ್ತಿರುವನೆಂದೂ, ಆತನ ತೇಜಸ್ವಿ ನೇತ್ರದ್ವಯಗಳೇ ದಿವ್ಯಜ್ಯೋತಿಗಳಂತೆ ಥಳಥಳನೆಂದು ಹೊಳೆದ ವಸ್ತುಗಳೆಂದೂ ತಿಳಿದು ಭಯಭರಿತ ಭಕ್ತಿಭಾವದಿಂದ ಪರಿವಾರ ಸಮೇತನಾಗಿ ಸಾಷ್ಟಾಂಗ ದಂಡವತ್ ಪ್ರಣಾಮ ಮಾಡಿ, ಕೈ ಜೋಡಿಸಿ ಎದ್ದು ನಿಂತು-'ಮಹಾನುಭಾವ, ಚ್ಯವನ ಮಹರ್ಷೀಂದ್ರ, ಅಜ್ಞಾನಿಯಾದ ನಾನೂ, ಈ ನನ್ನ ಮಗಳೂ, ಮಹಾತ್ಮನಾದ ನಿನ್ನ ವಿಷಯದಲ್ಲಿ ಮಾಡಿದ ಮಹದಪರಾಧವನ್ನು ಕ್ಷಮಿಸು, ಈ ಆಶ್ರಮಕ್ಕೆ ಬಂದೊಡನೆಯೇ, ಇಲ್ಲಿ ಸನ್ನಿಧಿಗೆ ಬಂದು ದರ್ಶನಮಾಡದೆ. ನಾನು ಅಜಾಗರೂಕನಾಗಿದ್ದೆನು. ನನ್ನ ಮಗಳಂತೂ ಬಾಲ್ಯಚಾಪಲ್ಯವಶಳಾಗಿ, ಮಹಾತ್ಮನಾದ ನಿನ್ನನ್ನು ಸಾಕ್ಷಾತ್ತಾಗಿ ನೋಯಿಸಿಬಿಟ್ಟಿದ್ದಾಳೆ. ಈ ಪಾಪಕ್ಕೆ ಏನು ಪರಿಹಾರವೆಂದು ತೋರುವುದಿಲ್ಲ. ಅಕ್ಕಟಾ ಮಹಾ ಸಾಧುಶಿರೋಮಣಿಯಾದ ನಿನ್ನನ್ನು ನೋಯಿಸಿದ ಪಾಮರರಾದ ನಾವು ಏನು ಮಾಡಿ, ಈ ಪಾಪದಿಂದ ನಿವೃತ್ತಿ ಹೊಂದಬಲ್ಲೆವು ? ದಯಾಮಯ, ಅಜ್ಞಾನಿಯಾದ ನನ್ನ ಈ ಮಗಳು ಮಾಡಿದ ದುಷ್ಕಾರ್ಯದಿಂದ ನಿನಗೆ ಮಹಾ ವ್ಯಥೆಯುಂಟಾದುದು ನಿಶ್ಚಯ ! ಆದರೆ ಪ್ರಭೋ ಇಂದು ನನ್ನ ಪರಿವಾರದವರು ಅಸಹ್ಯ ರೋಗಗಳ ಪಾಲಾಗಿ ನರಳುತ್ತಿರುವರು. ಇನ್ನು ಸ್ವಲ್ಪ ಕಾಲ, ಮಹಾತ್ಮನಾದ ನೀನು ಕೃಪೆಮಾಡುವುದರಲ್ಲಿ ಸಾವಕಾಶಮಾಡಿದ್ದಾದರೂ, ಈ ನೂರಾರು ಪ್ರಾಣಿಗಳು ಪ್ರಾಣಗಳನ್ನು ನೀಗಲು ಸಿದ್ಧರಾಗಿರುವರು. ಅಕ್ಕಟಾ, ಅವರ ಈ ಬಾಧೆಯನ್ನು ನಾನು ಹೇಗೆ ನೋಡಲಿ ?

ಮಹಾತ್ಮಾ ಕರುಣಿಸು. ಪಾಪಿಗಳಾದ ನಮ್ಮ ಅಪರಾಧವನ್ನು, ಉದಾರ ಭಾವದಿಂದ ಕ್ಷಮಿಸಿ ಕಾಪಾಡು" ಎಂದು ಬಹು ಬಗೆಯಿಂದ ಅಂಗ ಲಾಚಿ ಬೇಡಿಕೊಂಡನು.

ಶರ್ಯಾತಿರಾಜನು ಕೇವಲ ನಮ್ರಭಾವದಿಂದ ಮೇಲ್ಕಂಡಂತೆ ಪ್ರಾರ್ಥಿಸಿಕೊಂಡು ಮತ್ತೊಂದಾವೃತ್ತಿ ದೀರ್ಘದಂಡ ನಮಸ್ಕಾರಮಾಡಿ, ಕೈ ಜೋಡಿಸಿ ನಿಂತಿದ್ದಾನೆ. ಸುಕನ್ಯೆಯೂ ತಮ್ಮ ಪ್ರಾರ್ಥನೆಗೆ ಏನು ಪ್ರತ್ಯುತ್ತರ ದೊರೆವುದೋ ಎಂದು ಎದುರುನೋಡುತ್ತಾ ತಂದೆಯೊಂದಿಗೆ ಕೈ ಜೋಡಿಸಿಕೊಂಡು ನಿಂತಿದ್ದಾಳೆ. ಪರಿವಾರದವರೆಲ್ಲರೂ ಅಸಹ್ಯ ಬಾಧೆಯಿಂದ ಸಂಕಟಪಡುತ್ತಿದ್ದರೂ ಆ ಮಹರ್ಷಿ ಸಾನ್ನಿಧ್ಯದಲ್ಲಿ ಲೇಶ ಮಾತ್ರವೂ ಶಬ್ದವುಂಟಾಗದಂತೆ ಮೌನವಾಗಿ, ಆ ಮಹಾನುಭಾವನ ಅಜ್ಞೆಯೇನಾಗುವುದೋ, ತಮ್ಮ ಬಾಧೆಯು ಎಂದಿಗೆ ನೀಗುವುದೋ ಎಂದು ಆತುರರಾಗಿ ಕೈ ಕಟ್ಟಿಕೊಂಡು ನಿಂತಿದ್ದಾರೆ. ಎಲ್ಲರೂ ಹಾಗೆ ನೋಡಿಕೊಂಡು ಇದ್ದಂತೆಯೇ ಕ್ಷಣಮಾತ್ರದಲ್ಲಿ ಹುತ್ತದಮೇಲಿನ ಅರ್ಧಭಾಗವು ಕಳಚಿಬಿದ್ದಿತು. ಒಳಗೆ ತಪೋನಿರತನಾದ ಚ್ಯವನ ಮಹರ್ಷಿಯು ಕುಳಿತಿದ್ದುದನ್ನು ಕಂಡು ರಾಜನೂ ಪರಿವಾರದವರೂ ಮತ್ತೊಮ್ಮೆ ದೀರ್ಘದಂಡ ನಮಸ್ಕಾರಮಾಡಿ, ಕೈ ಜೋಡಿಸಿ—'ಮಹಾನುಭಾವ, ಪಾಮರರಾದ ನಾವು ಅಜ್ಞಾನದಿಂದ ಮಾಡಿದ ಮಹಾಪರಾಧವನ್ನು ದಯವಿಟ್ಟು ಕ್ಷಮಿಸಿ ಕಾಪಾಡು. ದಯಾನಿಧಿಯಾದ ನೀನಲ್ಲದೆ, ಈಗ ನಮ್ಮನ್ನು ರಕ್ಷಿಸುವವರು ಮತ್ತಾರೂ ಇಲ್ಲ. ನಿನ್ನನ್ನೇ ಶರಣುಹೊಕ್ಕಿದ್ದೇವೆ. ಅನಾಥರಾದ ನಮ್ಮನ್ನು ಕೈಬಿಡದೆ, ಈ ಅಸಹ್ಯ ಬಾಧೆಯಿಂದ ಮುಕ್ತರನ್ನಾಗಿ ಮಾಡಿ ಉದ್ಧರಿಸು'' ಎಂದು ಪುನಃ ಪುನಃ ಪ್ರಾರ್ಥಿಸಿಕೊಂಡರು.

ಚ್ಯವನ ಮಹರ್ಷಿಯು ಹುತ್ತದ ಮಧ್ಯಭಾಗದಲ್ಲಿ ಕುಳಿತಿದ್ದಾನೆ. ತಲೆಯಿಂದ ಕೇಶರಾಶಿಯೂ, ಮುಖದಿಂದ ಗಡ್ಡಮೀಸೆಗಳೂ, ಹುಬ್ಬಿನ ಕೂದಲು ರೆಪ್ಪೆಯ ಕೂದಲುಗಳೂ ಆಲದ ಮರದ ಬಿಳಲುಗಳಂತೆ ದೀರ್ಘವಾಗಿ ಇಳಿಯುಬಿದ್ದಿವೆ. ಅನೇಕ ಕಾಲದಿಂದ ನಿರಾಹಾರದಲ್ಲಿದ್ದರೂ ಆತನ ತಪಸ್ಸಾಮರ್ಥ್ಯದಿಂದ ಮುಖವು ದಿವ್ಯತೇಜಸ್ವಿತೆಯಿಂದ ಕಂಗೊಳಿಸುತ್ತಿದೆ. ಹುತ್ತವು ಕಳಚಿ ಬಿದ್ದಮೇಲೆ ಎಲ್ಲರೂ ನೋಡುತ್ತಿದ್ದಂತೆಯೇ ಬಹು

ಹೊತ್ತು ಕಣ್ಣು ಮುಚ್ಚಿದ್ದು ತರುವಾಯ ಬಲಗಣ್ಣೊಂದನ್ನು ಮಾತ್ರ ಸ್ವಲ್ಪಮಾತ್ರ ತೆರೆದನು. ಆ ಕಣ್ಣಿನಿಂದ ದೇದೀಪ್ಯಮಾನವಾಗಿ ನಕ್ಷತ್ರದಂತೆ ಪ್ರಕಾಶಿತವಾದ ತೇಜಸ್ಸು ಎಲ್ಲರಿಗೂ ಕಾಣಿಸಿತು. ಎರಡು ಕಣ್ಣುಗಳ ರೆಪ್ಪೆಗಳು ಮೇಲ್ಭಾಗದಲ್ಲೂ ಸುಕನ್ಯೆಯು ಚುಚ್ಚಿದ ಮುಳ್ಳಿನಿಂದಾದ ಗಾಯವು ಸ್ಪಷ್ಟವಾಗಿ ಕಾಣುತ್ತಿದ್ದಿತು. ಮುಂದೆ ಸ್ವಲ್ಪ ಹೊತ್ತಿನೊಳಗಾಗಿ ಚ್ಯವನ ಮಹರ್ಷಿಯು ಒಂದಾವೃತ್ತಿ ತನ್ನ ಕೈಗಳಿಂದ ಕಣ್ಣುಗಳನ್ನು ಸವರಿಕೊಂಡು, ಎರಡು ಕಣ್ಣುಗಳನ್ನೂ ತೆರೆದು ಸುತ್ತಲಿದ್ದ ಎಲ್ಲರನ್ನೂ ನೋಡಿದನು. ಆತನು ತನ್ನ ದೃಷ್ಟಿಯನ್ನು ಸರ್ವರಮೇಲೂ ಪ್ರಸರಿಸಿದ ಆ ಸಂದರ್ಭದಲ್ಲೂ, ರಾಜನಾದಿಯಾಗಿ ಸಮಸ್ತರೂ ಮತ್ತೊಂದು ಬಾರಿ ದೀರ್ಘದಂಡ ನಮಸ್ಕಾರಮಾಡಿ—'ಮಹಾತ್ಮಾ, ನಮ್ಮ ಅಪರಾಧವನ್ನು ಕ್ಷಮಿಸಿ ಕಾಪಾಡು' ಎಂದು ಪ್ರಾರ್ಥಿಸಿಕೊಂಡರು.

ಚ್ಯವನಮಹರ್ಷಿಯು ಶರ್ಯಾತಿಗೆ ಸಮೀಪದಲ್ಲಿ ಒಂದು ಕುಳ್ಳಿರುವಂತೆ ಸಂಜ್ಞೆಮಾಡಿದನು. ಶರ್ಯಾತಿಯೂ ಒಂದಿಗೇ ಸುಕನ್ಯೆಯೂ ನಡೆದು ಹುತ್ತದ ಸಮೀಪದಲ್ಲಿ ಕುಳಿತರು. ಮಿಕ್ಕ ಪರಿವಾರವೆಲ್ಲವೂ ರಾಜಾಜ್ಞೆಯಿಂದ ದೂರದಲ್ಲೇ ಕುಳಿತಿದ್ದರು. ಮುಂದೆ ಏನಾಗುವುದೋ-ನೊಂದ ಮಹರ್ಷಿಯು ತಮ್ಮ ಕೃತಿಯನ್ನು ಏನೆಂದು ಆಕ್ಷೇಪಿಸುವನೋ, ಎಂದು ಎಲ್ಲರೂ ಆತನಲ್ಲೇ ದೃಷ್ಟಿಯಿಟ್ಟು ನೋಡುತ್ತಾ ಕುಳಿತಿದ್ದಾರೆ. ಆಗ ಚ್ಯವನನು—'ರಾಜಾ, ಯಾರಿಗೂ ಯಾವ ತೊಂದರೆಯನ್ನೂ ಉಂಟುಮಾಡದೆ, ನಮ್ಮ ಮಟ್ಟಿಗೆ ನಾವು ತಪೋನಿರತರಾಗಿ ಕುಳಿತಿದ್ದರೂ, ವಿನಾ ಕಾರಣವಾಗಿ ಇಂತಹ ಹಿಂಸೆಯು ಪ್ರಾಪ್ತವಾದರೆ ನಾವೇನು ಮಾಡಬೇಕು ? ಹೇಳು' ಎಂದರು. ಶರ್ಯಾತಿಯು ಪುನಃ ಎರಡು ಕೈಗಳನ್ನೂ ಜೋಡಿಸಿ—'ಮಹಾನುಭಾವ, ನಾನೇನು ಹೇಳಲಿ ? ನಮ್ಮಿಂದ ಮಹಾಪರಾಧವಾಗಿದೆ. ಈ ಕನ್ಯೆಯು ತಿಳಿಯದೆ, ಬಾಲ್ಯಚಾಪಲ್ಯದಿಂದ ತಮ್ಮ ಪಾದಕ್ಕೆ ಮಹಾ ದ್ರೋಹಮಾಡಿದ್ದಾಳೆ. ಆದರೂ ತರುವಾಯ ತಾನು ಮಾಡಿದುದು ಮಹಾ ಪಾತಕಕಾರ್ಯವೆಂದು ತಿಳಿದು ಅಗಾಧ ಪಶ್ಚಾತ್ತಾಪಪಟ್ಟಿದ್ದಾಳೆ. ಅಲ್ಲದೆ ಆ ತಪ್ಪಿಗೆ ಶಿಕ್ಷೆಯಾಗಿ ತಾವು ಯಾವ ಕಾರ್ಯ ಮಾಡಬೇಕೆಂದರೂ ಸಿದ್ಧಳಾಗಿದ್ದಾಳೆ. ಅವಳು ಮಾತ್ರವಲ್ಲ. ಮಹರ್ಷಿ

ಗಳಾದ ತಮ್ಮ ಮನಸ್ಸಿಗೆ ಅಸಮಾಧಾನವನ್ನುಂಟುಮಾಡಿ ನಾವೂ ಜೀವಿಸಲಾರೆವು. ಅಜ್ಞಾನದಿಂದ ಈ ಕಾರ್ಯವು ನಡೆದುಹೋಯಿತು. ಈಗ ಅದಕ್ಕೆ ಪ್ರತೀಕಾರವಾಗಿ ನಾವು ಏನುಮಾಡಿ ಸುಖಿತರಾಗಬಹುದೆಂದು ತಾವು ನಿಯಮಿಸಬೇಕು. ಆ ಕಾರ್ಯವನ್ನು ಮರುಮಾತಿಲ್ಲದೆ ನಡೆಸಿ ಕೃತಕೃತ್ಯರಾಗುತ್ತೇವೆ" ಎಂದನು.

ಶರ್ಯಾತಿಯು ಬಾಯಿಂದ ಇಷ್ಟು ಮಾತುಗಳು ಬಂದೊಡನೆ, ಚ್ಯವನನು ಎಂದಿಗಿಂತಲೂ ವಿಶಾಲವಾಗಿ ಒಂದುಬಾರಿ ಕಣ್ಣುಗಳನ್ನು ತೆರೆದು ರಾಜನ ಸಮೀಪದಲ್ಲೇ, ಅಧೋವದನಳಾಗಿ ಕಣ್ಣುಗಳಿಂದ ಜಲಧಾರೆಯನ್ನು ಸುರಿಸುತ್ತಾ ನಿಂತಿದ್ದ ಸುಕನ್ಯೆಯನ್ನು ನೋಡಿ—'ರಾಜಾ, ನಾನು ಈ ಕಾಡಿನಲ್ಲಿ ಬಹು ಕಾಲದಿಂದಲೂ ಏಕಾಂಗಿಯಾಗಿ ತಪಸ್ಸು ಮಾಡಿಕೊಂಡು ವಾಸಿಸಿದ್ದೇನೆ. ತಪೋನಿರತನಾದ ನನಗೆ ವಯಸ್ಸು ಕಳೆದುಹೋದುದು ಕೂಡ ಗಮನಕ್ಕೇ ಬಾರದೆಹೋಯಿತು. ಮನುಷ್ಯನು ಗೃಹಸ್ಥಾಶ್ರಮಿಯಾಗಿ, ಬ್ರಹ್ಮಯಜ್ಞ ಬಲಿಹರಣ ಅತಿಥಿಸತ್ಕಾರಾದಿ ಪಂಚಮಹಾ ಯಜ್ಞಗಳನ್ನು ನಡೆಯಿಸಬೇಕಾದುದೂ, ಸಂತಾನವನ್ನು ಪಡೆದು ಪಿತೃಋಣವನ್ನು ಕಳೆದುಕೊಳ್ಳಬೇಕಾದುದೂ ಕರ್ತವ್ಯವಷ್ಟೆ! ಇದೇನು ನಿನಗೆ ತಿಳಿಯದ ಸಂಗತಿಯೇ?' ಎಂದು ನುಡಿದು, ಮತ್ತೊಮ್ಮೆ ಸುಕನ್ಯೆಯನ್ನು ದಿಟ್ಟಿಸಿ ನೋಡಿ, ಕಣ್ಣುಮುಚ್ಚಿಕೊಂಡನು. ಚ್ಯವನನ ಈ ಮಾತಿನಿಂದ ಆತನ ಮನಸ್ಸಿನಲ್ಲಿದ್ದ ಅಭಿಪ್ರಾಯವೇನೆಂಬುದು ಶರ್ಯಾತಿಗೂ ಸುಕನ್ಯೆಗೂ ಸ್ಪಷ್ಟವಾಯಿತು. ರಾಜನೂ ಒಂದು ಬಾರಿ ಸುಕನ್ಯೆಯ ಮುಖವನ್ನು ನೋಡಿದನು ಪಾಪ, ಆ ಬಾಲಿಕೆಯು ಕಣ್ಣುಗಳಲ್ಲಿ ನೀರು ತುಂಬಿಕೊಂಡಿರಲು ತನ್ನ ತಂದೆಯನ್ನು ಕಣ್ತೆರೆದು ನೋಡಲಾರದೆ, ಒಂದು ಬಾರಿ ನೋಡಿ, ಪುನಃ ಅಧೋವದನಳಾದಳು. ಶರ್ಯಾತಿಗೆ ಮನಸ್ಸಿನಲ್ಲಿ ಅಸಹನೀಯ ದುಃಖವಾಯಿತು—'ಅಕ್ಕಟಾ, ಇದೇನೀದುರ್ವಿಧಿಯು! ಅನುರೂಪನೂ ಪ್ರಿಯವಯಸ್ಯನೂ ಆದ ರಾಜಾಧಿರಾಜನಿಗೆ ದಾನಮಾಡಿ, ತರುಣ ದಂಪತಿಗಳು ಪರಸ್ಪರ ಪ್ರೇಮಸೌಹಾರ್ದಭಾವಗಳಿಂದ ಕೂಡಿ ಮಾಡುವ ಸಂಸಾರವನ್ನು ಕಂಡು ಆನಂದಿಸಬೇಕೆಂದಿದ್ದ ನನಗೆ ದೇವಾ, ಇಂತಹ ದುರ್ವಿಧಿಯು ಒದಗಬಹುದೇ? ಅಕ್ಕಟಾ, ಇದಾವ ಜನ್ಮದ ದುಷ್ಕರ್ಮದ ಫಲವಿದ್ದೀತು? ಅತಿ

ಶಯುಪ್ರೇಮದಿಂದ ಗಿಣಿಯನ್ನು ಸಾಕಿ, ಕೈಯಾರೆ ಬೆಕ್ಕಿನ ಬಾಯಿಗೆ ಒಪ್ಪಿಸಿದಂತೆ ಆಯಿತಲ್ಲಾ ನನ್ನ ಬಾಳು ? ಕನ್ಯಾಶಿರೋಮಣಿಯಾದ ನನ್ನ ಈ ಪ್ರಿಯಪುತ್ರಿಯು, ಅರಸಿಕನೂ, ಅಸಹ್ಯಸ್ವರೂಪಿಯೂ, ವೃದ್ಧನೂ, ವನವಾಸಿಯೂ, ಗರ್ಭದರಿದ್ರನೂ ಆದ ಈ ಬ್ರಾಹ್ಮಣನನ್ನು ಕೈಹಿಡಿದು ಏನು ಸುಖಾನುಭವಮಾಡಿಯಾಳು ? ಈ ಕಾಡಿನಲ್ಲಿ ಸರ್ವದಾ ತಪೋನಿರತನಾಗಿ ಕುಳಿತುಬಿಡುವ ಈತನೊಂದಿಗೆ ಏಕಾಂಗಿಯಾಗಿ ಹೇಗೆ ವಾಸಿಸಿಯಾಳು. ಯಾವ ಕಷ್ಟವನ್ನೂ ಅರಿಯದೆ ರಾಜಗೃಹದಲ್ಲಿ ಬೆಳೆದ ಈ ನನ್ನ ಕುಮಾರಿಯು, ಕಾಡಿನಲ್ಲಿ ಅಸಹನೀಯ ಕಷ್ಟಗಳನ್ನೂ, ಶೀತೋಷ್ಣಾದಿಗಳನ್ನೂ ಹೇಗೆ ಸಹಿಸಿಯಾಳು ? ನೂರಾರುಮಂದಿ ದಾಸಿಯರ ಸೇವೆಯನ್ನು ಕೈಕೊಂಡು ಬೆಳೆದ ನನ್ನೀ ಮುದ್ದುಮಗಳು, ಸರ್ವದಾ ಕೈ ಕಟ್ಟಿಕೊಂಡು ನಿಂತು ಸೇವೆಮಾಡುತ್ತಾ, ಶೀಘ್ರಕೋಪಿಯೂ, ತಪಸ್ವಿಯೂ ಆದ ಈತನನ್ನು ಹೇಗೆ ಮೆಚ್ಚಿಸಿಯಾಳು ? ಅಕ್ಕಟಾ, ಏನು ವಿಧಿಯೊದಗಿತಲ್ಲಾ ' ಎಂದು ಬಗೆಬಗೆಯಿಂದ ಚಿಂತಿಸಿದನು. ಅನೇಕ ಬಾರಿ ನಿಟ್ಟುಸಿರು ಬಿಟ್ಟನು. ಆ ಸಂಕಟದಿಂದ ಪಾರಾಗುವ ಮಾರ್ಗವು ಬೇರೆಯಾವುದೂ ತೋರಲಿಲ್ಲ. ಆಗ ತನ್ನ ಮಗಳ ತಲೆಯಮೇಲೆ ಒಂದು ಬಾರಿ ಕೈಯಾಡಿಸಿ-'ಮಗೂ ಸುಕನ್ಯೆ ಅಮ್ಮಾ ನಿನ್ನ ದುರ್ವಿಧಿಗೆ ನಾನೇನು ಹೇಳಲಿ ? ಈ ಸಂದರ್ಭದಲ್ಲಿ ಏನು ಮಾಡುವುದು ಯುಕ್ತವೆಂದು ನೀನೇ ಹೇಳು. ಪ್ರಾಜ್ಞಳಾದ ನಿನಗೆ ತಿಳಿಯದುದಾವುದು ?' ಎಂದು ನುಡಿದು, ಮತ್ತೊಮ್ಮೆ ನಿಟ್ಟುಸಿರುಬಿಟ್ಟನು.

ಸುಕನ್ಯೆಯು, ಆ ಸಂದರ್ಭದಲ್ಲಿ ಏನು ಮಾಡಲಾದೀತು ? ಅತ್ತ ನೋಡಿದರೆ, ನೂರಾರು ಮಂದಿ ಮಾನವ ಪ್ರಾಣಿಗಳು ಹೊಟ್ಟೆಯುಬ್ಬರದ ಸಂಕಟದಲ್ಲಿ ಅಸಹ್ಯ ವೇದನೆಯನ್ನು ಅನುಭವಿಸುತ್ತಾ-ಪ್ರಾಣೋತ್ಕ್ರಮಣಾವಸ್ಥೆಯಲ್ಲಿ ಬಿದ್ದಿದ್ದಾರೆ. ಇತ್ತ ತನ್ನ ತಂದೆಯು-ಮಹರ್ಷಿಯ ಇಷ್ಟಕ್ಕೆ ಅನುಸಾರವಾಗಿ ನಡೆಯದಿದ್ದರೆ, ಎಲ್ಲಿ ಆತನು ಶಪಿಸುವನೋ ಎಂದು ಭಯಭ್ರಾಂತನಾಗಿ ಕುಳಿತಿದ್ದಾನೆ. ಇಷ್ಟು ಪ್ರಮಾದಗಳಿಗೆಲ್ಲ ತನ್ನ ಕುಚೇಷ್ಟೆಯೇ ಮೂಲಕಾರಣವೆಂಬುದು ಮನಸ್ಸಿಗೆ ಸ್ಪಷ್ಟವಾಗಿ ತೋರುತ್ತಿದೆ. ಇನ್ನು ಬೇರೆ ಮಾರ್ಗವಿಲ್ಲವೆಂದು ತಿಳಿದಳು. ತನ್ನ ಜನ್ಮಾಂತರಾರ್ಜಿತ ಕರ್ಮಫಲವು ಹಾಗಿರುವಾಗ ಅದನ್ನು ತಪ್ಪಿಸುವುದು ಮತ್ತಾರಿಂದಲೂ ಸಾಧ್ಯ

ವಾಗದೆಂದು ತಿಳಿದಳು. ಮನಸ್ಸನ್ನು ನಿರ್ಧರಮಾಡಿಕೊಂಡಳು. ಭಗವದಿಷ್ಟಕ್ಕೆ ಬಂದಂತೆ ಆಗಲಿ ಎಂದುಕೊಂಡಳು. ಹಾಗೆ ನಿಶ್ಚಯಮಾಡಿಕೊಂಡು -'ತಂದೆಯೇ ಯೋಚಿಸಬೇಡ. ನನ್ನನ್ನು ಮಹಾನುಭಾವನಾದ ಈತನಿಗೇ ಕೊಟ್ಟು ವಿವಾಹಮಾಡಿಬಿಡು. ಮಹರ್ಷಿಯಾದ ಈತನ ಇಷ್ಟಕ್ಕೆ ಅನುಸಾರವಾಗಿ ನಡೆಯತಕ್ಕದ್ದು ಮಾನವರಾದ ನಮ್ಮ ಕರ್ತವ್ಯವಾಗಿದೆ. ಇಷ್ಟು ಮಾತ್ರವಲ್ಲದೆ, ಆತನ ವಿಷಯದಲ್ಲಿ ಮಹಾ ದ್ರೋಹಮಾಡಿರುವ ನಾನು, ಅನನ್ಯಶರಣಳಾಗಿ ಆತನ ಪಾದಸೇವೆ ಮಾಡಿದಲ್ಲದೆ, ಈ ಪಾಪವನ್ನು ಕಳೆದುಕೊಂಡು ಪರಿಶುದ್ಧಳಾಗಲಾರೆನು. ಆದುದರಿಂದ ಮನಸ್ಸಿನಲ್ಲಿ ಯಾವ ಯೋಚನೆಯನ್ನೂ ಇಟ್ಟುಕೊಳ್ಳದೆ, ನಿಶ್ಚಿಂತನಾಗಿ ಈ ತಪಸ್ವಿ ಸಾರ್ವಭೌಮನಿಗೆ ನನ್ನನ್ನು ಒಪ್ಪಿಸಿ ವಿವಾಹಮಾಡಿಕೊಡು. ನನ್ನ ಅದೃಷ್ಟದಲ್ಲಿ ಸುಖಪಡಬೇಕೆಂಬುದಿದ್ದರೆ, ಈ ಮಹಾನುಭಾವನ ಅನುಗ್ರಹದಿಂದಲೇ, ಅಂತಹ ಸುಖವು ಏಕೆ ಲಭ್ಯವಾಗಬಾರದು ? ಹಾಗಿಲ್ಲದಿದ್ದರೆ, ಈ ಜನ್ಮವು ಈ ಪುರುಷಪುಂಗವನ ಸೇವೆಯಲ್ಲಿ ಕಳೆದು ಪಾಪಕ್ಷಯವಾದರೂ ಆಗುವುದು. ಈ ಎರಡರಲ್ಲಿ ಯಾವುದಾದರೂ ಶ್ರೇಯಸ್ಕರವೇ ಆದಂತಾಯಿತು. ಮುಖ್ಯ ತಪಸ್ವಿಯೂ, ಸಾಧುಶ್ರೇಷ್ಠನೂ ಆದ ಈತನನ್ನು ಸಂತೋಷಪಡಿಸತಕ್ಕುದು ನಮ್ಮ ಮುಖ್ಯ ಕರ್ತವ್ಯವು. ನಾವಕಾಶವಿಲ್ಲದೆ ಈ ಕಾರ್ಯ ಮಾಡಿ ಬಿಡು. ನನಗಾಗಿ ಚಿಂತಿಸಬೇಡ" ಎಂದು ನುಡಿದಳು.

ತನ್ನ ಪುತ್ರಿಯ ಬಾಯಿಂದ ಬಂದ ಆ ಮಾತುಗಳು ಕರ್ಣಶಲ್ಯಗಳಂತೆ ವೇದನೆಯನ್ನು ಉಂಟುಮಾಡುತ್ತಿದ್ದರೂ, ಹಾಗೆ ಮಾಡದಿದ್ದರೆ, ಮುಂದೆ ಮಾರ್ಗವೇ ಇಲ್ಲವೆಂಬಂತೆ ತೋರಿತು. ಆಗಲಾತನು, ನಾವಕಾಶಮಾಡಲೂ, ಪುನಃ ಯೋಚಿಸೋಣವೆಂದು ತಾತ್ಸಾರಮಾಡಲೂ ಮಾರ್ಗವೇ ಇಲ್ಲದುದರಿಂದ ಮನಸ್ಸನ್ನು ಕಲ್ಲುಮಾಡಿಕೊಂಡು, ಒಂದು ಬಾರಿ ದೀರ್ಘವಾಗಿ ನಿಟ್ಟುಸಿರುಬಿಟ್ಟು-ಎದ್ದು ನಿಂತು, ಕೈ ಮುಗಿದುಕೊಂಡು 'ಮಹರ್ಷೇ, ತಮ್ಮ ಇಷ್ಟದಂತೆಯೇ ಈ ನನ್ನ ಸುಕುಮಾರಿಯನ್ನು ತಮ್ಮ ಸೇವೆಗಾಗಿ ವಿವಾಹರೂಪದಿಂದ ಒಪ್ಪಿಸಬೇಕೆಂದು ಸಂಕಲ್ಪಿಸಿದ್ದೇನೆ. ಸ್ವೀಕರಿಸಬೇಕು. ಈ ಕ್ರಿಯೆಯಿಂದ ಮಾತ್ರವಲ್ಲ-ಮತ್ತಾವ ಬಗೆಯಿಂದ ಸೇವೆ ಮಾಡಿದರೂ, ನಾವು ತಮಗೆ ಮಾಡಿದ ಅಪಚಾರಕ್ಕೆ ತಕ್ಕ ಪರಿಹಾರವನ್ನು

ಕಾಣೆವು. ಆದರೂ, ಈ ನಮ್ಮ ಅಲ್ಪಸೇವೆಯನ್ನು ಅಂಗೀಕರಿಸಿ ಉದಾರ ಹೃದಯದಿಂದ ನಮ್ಮ ಅಪರಾಧವನ್ನು ಮನ್ನಿಸಬೇಕು' ಎಂದು ಪ್ರಾರ್ಥಿಸಿಕೊಂಡನು.

ಚ್ಯವನಮಹರ್ಷಿಯು ಕಣ್ಣುತೆಗೆದು, ಒಂದು ಬಾರಿ ಪ್ರಸನ್ನ ದೃಷ್ಟಿಯಿಂದ ಸರ್ವರನ್ನೂ ನೋಡಿದನು. ಅಷ್ಟೆ ! ಅಷ್ಟುಮಾತ್ರದಲ್ಲೇ ಆವರೆಗೆ ಬಹು ಹೊತ್ತಿನಿಂದಲೂ ಅಸಹ್ಯ ವೇದನೆಯನ್ನು ಅನುಭವಿಸುತ್ತಿದ್ದ ಪರಿವಾರದವರಿಗೆಲ್ಲರಿಗೂ, ಕ್ಷಣಮಾತ್ರದಲ್ಲಿ ಆ ಹೊಟ್ಟೆನೋವೂ, ಮೂತ್ರಬಂಧನ ವ್ಯಾಧಿಯೂ ನಿರ್ನಾಮವಾಗಿ, ಎಲ್ಲರೂ ಎಂದಿನಂತೆಯೇ ಸುಖವಾಗಿದ್ದರು. ಎಲ್ಲರ ಮುಖದಲ್ಲೂ ಮಂದಹಾಸವು ಕಂಗೊಳಿಸಿತು. ರಾಜನೂ ಈ ಆಶ್ಚರ್ಯವನ್ನು ಕಂಡು, ಇಂತಹ ಮಹಾ ಮಹಿಮೆಯುಳ್ಳತನ ಸಾನ್ನಿಧ್ಯ ವಿಶೇಷದಿಂದ ತನ್ನ ಮಗಳು ಯಾವ ಬಗೆಯ ದುಃಖ ತಾಪತ್ರಯಗಳಿಗೂ ಒಳಗಾಗಲಾರಳೆಂದು ಮನಸ್ಸಮಾಧಾನಗೊಂಡು, ಒಡನೆ ವಿವಾಹಕ್ಕೆ ಬೇಕಾದ ಸಕಲವಿಧ ಸೋಬಸ್ಕರಗಳನ್ನೂ ಸಿದ್ಧಗೊಳಿಸಿದನು. ವಿವಾಹ ಮಂಗಳಕಾರ್ಯವು ವಿಧ್ಯುಕ್ತಮಾರ್ಗದಿಂದ ಸಾಂಗವಾಗಿ ನೆರವೇರಿತು.-ನವವಧು ಸುಕನ್ಯಾದೇವಿಯು, ಚ್ಯವನಮಹರ್ಷಿಯ ಕೊರಳಲ್ಲಿ ದಿವ್ಯ ಸುಗಂಧ ಪುಷ್ಪಹಾರವನ್ನು ಸಮರ್ಪಿಸಿದಳು. ರಾಜಕನ್ಯೆಯಾಗಿ ರಾಜಭಾರ್ಯೆಯಾಗಲು ಸಿದ್ಧಳಾಗಿದ್ದ ಆ ಕನ್ಯಾಶಿರೋಮಣಿಯು ಇಂತು ವನವಾಸಿಯಾದ ವೃದ್ಧ-ಕುರೂಪಿ ಮುನಿಯೊಬ್ಬನನ್ನು ಪಾಣಿಗ್ರಹಣಮಾಡಬೇಕಾಯಿತು. ದೈವವು ವಿಚಿತ್ರಗತಿಯುಳ್ಳುದಲ್ಲವೆ ?



## ಅಧ್ಯಾಯ ೪. "ತಪಸ್ಸಾಮರ್ಥ್ಯ"

ಲೋಕದಲ್ಲಿ ಋಣಾನುಬಂಧದ ಸಾಮರ್ಥ್ಯವು ಬಹು ಬಲವತ್ತರವಾದುದು. ಒಬ್ಬನಿಗೆ ಒಬ್ಬಳು ಪತ್ನಿಯಾಗಿರುವುದಕ್ಕೂ, ಕೆಲವರು ಮಕ್ಕಳಾಗಿಯೂ, ಬೇರೊಬ್ಬನು ತಂದೆಯೂ, ಮತ್ತೊಬ್ಬನು ಅಣ್ಣ-ತಮ್ಮನೂ,

ಇನ್ನೊಬ್ಬಳು ಅಕ್ಕ-ತಂಗಿ-ತಾಯಿಯೂ ಆಗಿರುವುದಕ್ಕೂ, ಈ ಋಣಸಂಬಂಧವೇ ಕಾರಣವು. ಹಾಗೆ ಒಂದೆಡೆ ಒಂದು ಕುಟುಂಬದಲ್ಲಿ ಹಲವರು ಬೆರತು ಕೆಲಕಾಲವಿದ್ದ ತರುವಾಯ ಅವರೆಲ್ಲರೂ, ಅವರವರ ಸಂಬಂಧವನ್ನು ಕಳೆದುಕೊಂಡು ಬೇರೆಬೇರೆ ಹೊರಟು ಹೋಗುವುದಕ್ಕೂ, ಮೃತರಾಗುವುದರ ಮೂಲಕ ಪೂರ್ಣವಾಗಿ ಅವರವರ ಸಂಬಂಧವು ವಿಚ್ಛೇದವಾಗಿ ಹೋಗುವುದಕ್ಕೂ ಈ ಋಣಸಂಬಂಧವು ತಪ್ಪುವುದೇ, ಕಾರಣವಾಗಿರುವುದು. ಅನೇಕ ಸಂದರ್ಭಗಳಲ್ಲಿ ಅಕಸ್ಮಾತ್ತಾಗಿ ಒಂದು ಕುಟುಂಬದಲ್ಲಿ ಜರುಗಿಹೋದ ಒಂದು ಕಾರ್ಯಕ್ಕಾಗಿ ದೃಶ್ಯಕಾರಣವು ಏನೂ ಇಲ್ಲವೆಂಬಂತೆ ತೋರಿದರೂ, ಜನ್ಮಾಂತರಾರ್ಜಿತವಾದ ಈ ಋಣಸಂಬಂಧವೇ ಆ ಕಾರ್ಯಕ್ಕೆ ಕಾರಣವಾಗಿ ಏರ್ಪಟ್ಟಿರುವುದೆಂಬುದು ಸ್ವತಃ ಸಿದ್ಧವು. ಕೇವಲ ಪ್ರತ್ಯಕ್ಷ ಪ್ರಮಾಣವನ್ನು ಮಾತ್ರವೇ ನಂಬುತ್ತಿರುವ ಈ ಕಾಲದಲ್ಲಿ, ಇಂತಹ ವಿಚಾರಗಳಲ್ಲಿ ಸಾಮಾನ್ಯವಾಗಿ ನಂಬಿಕೆ ಹುಟ್ಟುವುದು ಸಾಧ್ಯವಲ್ಲ. ಆದರೂ, ಯಾರು ನಂಬಲಿ-ಮತ್ತಾರು ನಂಬದಿರಲಿ, ಈ ಋಣಾನುಬಂಧದ ಬಲವತ್ತರವಾದ ಪಾಶದಿಂದ ಕಟ್ಟಲ್ಪಟ್ಟಿರದಿದ್ದರೆ, ಈವರೆಗೆ ಪ್ರಪಂಚದಲ್ಲಿ ಕುಟುಂಬ ಜೀವನವೂ ಲೋಕಯಾತ್ರೆಯೂ ವಿಶೇಷ ಕಷ್ಟಪ್ರದವಾಗಿ ಪರಿಣಮಿಸುತ್ತಿದ್ದುವೆಂಬುದಕ್ಕೆ ಸಂಶಯವಿಲ್ಲ.

ಈ ವಿಚಾರವನ್ನು ಸ್ಪಷ್ಟಗೊಳಿಸಲು-ಋಣವೆಂದರೇನು, ಅದು ಪ್ರಾಣಿಗಳನ್ನು ಹೇಗೆ ಬಂಧನಗೊಳಿಸಿ, ಒಬ್ಬರಿಗೊಬ್ಬರನ್ನು ಅಧೀನಗೊಳಿಸುವುದು, ಎಂಬುದನ್ನು ವಿಮರ್ಶಿಸಬೇಕಾಗುತ್ತದೆ. ಋಣವೆಂಬ ಪದಕ್ಕೆ ಸಾಲ ಎಂಬ ಸಾಮಾನ್ಯಾರ್ಥವುಂಟಲ್ಲವೆ! ಈ ಋಣ ಅಥವ ಸಾಲವು, ಕೇವಲ ದ್ರವ್ಯ ಸಂಬಂಧವಾಗಿ ಮಾತ್ರವಲ್ಲ-ಭೂಮಿ ಪದಾರ್ಥ ವಸ್ತ್ರ ಒಡವೆ ದವಸಧಾನ್ಯಗಳು ದೇಹಕಷ್ಟದಿಂದ ಮಾಡುವ ಸಹಾಯ, ಬಾಯಿಂದಾಡುವ ಮಾತು, ಕೊನೆಯದಾಗಿ ಮನಸ್ಸಿನಿಂದ ಮಾಡುವ ಯೋಚನೆ ಇವುಗಳನ್ನೂ ಅನುಸರಿಸಿಕೊಂಡು ಬರುವುದು. ಒಬ್ಬನು ಬೇರೊಬ್ಬನಲ್ಲಿ ಗೊತ್ತಾದ ಒಂದು ಮೌಲ್ಯವನ್ನು ಸಾಲವಾಗಿ ತಂದು-ಅದಕ್ಕೆ ಒಂದು ಲೆಕ್ಕದ ಬಡ್ಡಿಯೊಂದಿಗೆ ಅದನ್ನೊಂದು ಗೊತ್ತಾದ ಕಾಲದಲ್ಲಿ ತೀರಿಸುವೆನೆಂದು ಮನಃಪೂರ್ವಕವಾಗಿ ಒಪ್ಪಿರುವನೆಂದು ಭಾವಿಸೋಣ! ಪ್ರತಿ

ಯೊಂದು ಪ್ರಾಣಿಯ ಹೃದಯಸ್ಥನಾಗಿರುವ ಅಂತರಾತ್ಮನು, ಈ ನಿಬಂಧನೆಗೆ ಸಾಕ್ಷಿಯಾಗಿದ್ದು ಆ ಗೊತ್ತಾದ ಕಾಲವನ್ನು ಜ್ಞಾಪಿಸುವನು. ಆ ವೇಳೆಯಲ್ಲಿ ಮನುಷ್ಯನು ತನ್ನ ಕಾಮಕ್ರೋಧಾದಿಗಳ ಪ್ರಾಬಲ್ಯಕ್ಕೆ ವಶನಾಗಿ ಆ ಅಂತರಾತ್ಮನ ಸೂಚನೆಯನ್ನು ನಿರಾಕರಿಸಿ ಆ ಸಾಲವನ್ನು ಕೊಡದೆ ತಪ್ಪಿಸಿಕೊಳ್ಳುವನು. ಅದ ಮಾತ್ರಕ್ಕೆ, ಅವನು ಆಡಿದ ಮಾತೂ, ಆ ಸಂಬಂಧವಾಗಿ ಅವನು ಕೊಡಬೇಕಾದ ಹಣದ ಉತ್ತರವಾದಿತ್ವವೂ ತಪ್ಪಿದಂತಾಗಲಿಲ್ಲ. ಏಕೆಂದರೆ ಅಂತರಾತ್ಮ ಸಾಕ್ಷಿಯಾಗಿ, ಮನಃಪೂರ್ವಕವಾಗಿ ಅವನು ಒಪ್ಪಿಕೊಂಡ ಮಾತು ಎಂದಿಗೂ ವ್ಯರ್ಥವಾಗದು. ಹೀಗೆ ಆಗ್ಗೆ ತಪ್ಪಿದಂತಾದ ಋಣವು, ಅವನು ನಿಬಂಧನೆ ಮಾಡಿಕೊಂಡು ಬಂದ ಬಡ್ಡಿಯ ಲೆಕ್ಕದೊಂದಿಗೆ ನಡೆದು ಬರುವುದು. ಹೀಗೆ ನಡೆದು ಬಂದುದು ಅವನು ಜೀವಿಸಿರುವಷ್ಟು ಕಾಲವೂ, ತರುವಾಯ ಮರುಜನ್ಮವನ್ನೆತ್ತುವಾಗ್ಗೆ, ಅವರೆಗೂ ಇವನು ಒಪ್ಪಿ ತೆಗೆದುಕೊಂಡ ಬಡ್ಡಿಯ ಲೆಕ್ಕದೊಂದಿಗೆ ಬೆಳೆದು ಬಂದು, ಮರುಜನ್ಮದಲ್ಲಿ ತೀರಿಸಲ್ಪಡಲು ಸಿದ್ಧವಾಗಿ ಕುಳಿತಿರುವುದು. ಆಗ ಇವನಿಂದ, ಯಾವುದೋ ಒಂದು ಮಾರ್ಗದಿಂದ ಅವನ ಪಾಲಿಗೆ ಅಪಾರ ದ್ರವ್ಯವು ಹೊರಟುಹೋಗುವುದು. ಹಾಗೆ ಹೋದಾಗ್ಗೆ ಕಳೆದುಕೊಂಡವನು, ಅನ್ಯಾಯವಾಗಿ ತನ್ನಿಂದ ಹೋಯಿತೆಂದು ತಿಳಿದುಕೊಳ್ಳುವನು. ಪಡೆದವನು ಉಪಾಯಕುಶಲವಾದ ತನ್ನ ಸಾಮರ್ಥ್ಯದಿಂದ ತಾನು ಸಂಪಾದಿಸಿದೆನೆಂದುಕೊಳ್ಳುವನು. ಎರಡೂ ನಿಜವಲ್ಲ-ಮೊದಲನೆಯವನು, ತಾನು ಜನ್ಮಾಂತರದಲ್ಲಿ ಪಡೆದಿದ್ದ ಸಾಲವನ್ನು ಬಡ್ಡಿಯೊಂದಿಗೆ-ಬಡ್ಡಿಗೆ ಬಡ್ಡಿಯೊಂದಿಗೆ, ಈಗ ತೀರಿಸಿರುವನು. ಪಡೆದವನು. ತಾನು ಎಂದೋ ಕೊಟ್ಟ ಸಾಲವನ್ನು ಇಂದು. ಈ ರೂಪದಲ್ಲಿ ಪಡೆದಿರುವನು. ಧಾನ್ಯದವಸಗಳ ವಿಚಾರವೂ ಹಾಗೆಯೇ! ಅವು ಸ್ವಾಭಾವಿಕವಾಗಿ ಭೂಮಿಯಲ್ಲಿ ಬೆಳೆವ ಪ್ರಮಾಣದಿಂದ ಅವುಗಳ ಸಂಬಂಧದ ಋಣವು ಗುಣಿಸಲ್ಪಟ್ಟು ವೃದ್ಧಿಯಾಗಿ ಎಂತೂ ಜನ್ಮಾಂತರದಲ್ಲಿ ಇವನಿಂದ ಅವನಿಗೆ ತೀರಿಸಲ್ಪಡಲು ಸಿದ್ಧವಾಗಿ ನಿಲ್ಲುವುದು. ಒಬ್ಬನು ಈ ಜನ್ಮದಲ್ಲಿ ಮೋಸದಿಂದಲೋ ಕಳುವಿನಿಂದಲೋ ಮತ್ತಾವ ಬಗೆಯಿಂದಲೋ ಒಬ್ಬನ ವಸ್ತ್ರ ಒಡವೆ ಭೂಮಿ ಮನೆ ಮುಂತಾದುವುಗಳನ್ನು ದೋಚಿಕೊಂಡು ಅನುಭವಿಸುವನು. ಆದರ ಸಾಲವು ಇವನ

ತಲೆಯಮೇಲೆ, ಸ್ವಾಭಾವಿಕವಾದ ಬಡ್ಡಿಯ ಬೆಳವಣಿಗೆಯೊಂದಿಗೆ ಕಾದಿದ್ದು ಮರುಜನ್ಮದಲ್ಲಿ ಆಯಾ ಮಾರ್ಗಗಳಿಂದಲೇ ತೀರಿಸಲ್ಪಡಬೇಕಾಗುವುದು. ಅಗ್ಗಿ ಹಾಗೆ ಹೋದುದಕ್ಕೆ ದೃಶ್ಯಕಾರಣವಿರದು.—ಆದರೆ ಕಾರಣವಿಲ್ಲದೆ ಕಾರ್ಯವಾಗದಲ್ಲವೆ! ಅದಕ್ಕೆ ಕಾರಣವೇರ್ಪಟ್ಟುದು ಬಹು ಕಾಲಗಳ ಹಿಂದೆ, ಜನ್ಮಾಂತರದಲ್ಲಿ! ಒಬ್ಬನು ಬೇರೊಬ್ಬನಿಂದ ವಿಶೇಷವಾಗಿ ದುಡಿಸಿಕೊಂಡು ತರುವಾಯ ಯೋಗ್ಯಮೌಲ್ಯವನ್ನು ಕೊಡದೆ ವಂಚಿಸುವನು. ಆದರೆ ಆ ಋಣವು ಇವನ ಮೇಲೆ ಹೊತ್ತು ಬೆಳೆಯುತ್ತಿರುವುದು ಮಾತ್ರ ತಪ್ಪಲಾರದು. ಒಬ್ಬನು ಸದ್ವಾಕ್ಯಗಳಿಂದಲೂ, ಸಮಾಚೀನವಾದ 'ಸರ್ವೇಜನಾಃ ಸುಖಿನೋ ಭವಂತು' ಎಂಬ ಮುಂತಾದ ಯೋಚನೆಯಿಂದಲೂ, ಲೋಕಕ್ಷೇಮವನ್ನು ಕೋರಿರುವನು! ಅವನ ಋಣವು ಲೋಕದಮೇಲೆ ಹೊತ್ತು ಬೆಳೆಯುತ್ತಿರುವುದು ಅದನ್ನು ಮರುಜನ್ಮದಲ್ಲಿ ಲೋಕವು, ಆತನಿಗೆ ಫಲಪುಷ್ಪಗಳನ್ನು ಅರ್ಪಿಸಿ, ಆತನ ಉಪಕಾರವನ್ನು ಸ್ಮರಿಸಿ, ಆತನ ಕೀರ್ತಿಯನ್ನು ಹೊಗಳಿ, ಆತನ ವಿಷಯವಾಗಿ ಮಹೋತ್ಸವಗಳನ್ನು ನಡೆಸಿ. ತೀರಿಸಿಕೊಳ್ಳುವುದು. ಜಗತ್ತಿನಲ್ಲಿ ಜೀವಿಸುವ ಲಕ್ಷಾಂತರ ಕೋಟ್ಯಾಂತರ ಮಂದಿಯಲ್ಲಿ ಕೇವಲ ಒಬ್ಬಿಬ್ಬರಿಗೆ ಮಾತ್ರವೇ ಆ ಬಗೆಯ ಉಪಚಾರ, ಪೂಜಾ, ಉತ್ಸವಾದಿಗಳು ನಡೆಯಲು ಅವರು ಜನ್ಮಾಂತರದಲ್ಲಿ ತಮ್ಮ ಸತ್ಕ್ರಿಯೆಗಳಿಂದ ಜನಾಂಗದಮೇಲೆ ಹೊರಿಸಿದ ಋಣಭಾರವೇ ಮುಖ್ಯ ಕಾರಣವು. ಭಕ್ತಾದಿಗಳು, ಮತಾಚಾರ್ಯರುಗಳು, ಸಾಧುಸಂತರು, ಪರೋಪಕಾರಿಗಳು, ರಾಜಕೀಯ ಧುರೀಣರು ಮುಂತಾದವರು ತೀರಿಹೋದ ಅನೇಕ ಕಾಲದ ಮೇಲೂ ಅವರಿಗೆ ಪೂಜಾಪುರಸ್ಕಾರಾದಿ ಬಹುಮಾನಗಳು ನಡೆಯುತ್ತಿರುವುದಕ್ಕೆ ಅವರು ಲೋಕದಮೇಲೆ ಹೊರಿಸಿರುವ ಈ ಋಣಭಾರವೇ ಕಾರಣವು. ಈ ಋಣದ ಪ್ರಮಾಣವು ತೀರಿದೊಡನೆಯೇ, ಎಲ್ಲವೂ ನಿಂತುಹೋಗುವುವು. ಧನಧಾನ್ಯ ಮುಂತಾದ ಪೃಥ್ವೀಸಂಬಂಧವಾದ ಈ ಬಗೆಯ ಋಣದ ಸಂಬಂಧವು ಯಾವಯಾವ ಚೇತನರಲ್ಲಿ ವಿಶೇಷವಾಗಿರುವುದೋ, ಅವರೇ ಪತಿ ಪತ್ನಿ ಪುತ್ರ ಅಣ್ಣ ತಮ್ಮಂದಿರು ಅಕ್ಕ ತಂಗಿಯರು ಇತರ ಬಾಂಧವರು ಮುಂತಾದ ಸ್ವರೂಪದಿಂದ ಬಂದು ಕುಟುಂಬದಲ್ಲಿ ಕಲೆತಿದ್ದು ಅವರವರ ಸಂಬಂಧದ ಋಣವನ್ನು ಪಡೆದಮೇಲೆ ಅಥವ ತೀರಿ

ನಿದ ಮೇಲೆ ಕ್ಷಣಮಾತ್ರವೂ ಅಲ್ಲಿ ನಿಲ್ಲದೆ ಹೊರಟು ಹೋಗುವರು. ದೇಹ
ತಃ ಒಂದೇ ಕುಟುಂಬದಲ್ಲೇ ಇದ್ದಾಗಲೂ ಸಹ ಅವರು ಸ್ನೇಹ-ಪ್ರೇಮ
ಗಳಿಂದಲೋ ಅಥವ ದ್ವೇಷಾಸೂಯೆಗಳಿಂದಲೋ ನಡೆದುಕೊಳ್ಳುತ್ತಿರುವು
ದಕ್ಕೆ ಅವರು ಹಿಂದಿದ್ದ ಸ್ಥಿತಿಗತಿಗಳೇ ಕಾರಣವಾಗಿರುವುವು. ಆದುದರಿಂದ
ಲೇ ಜ್ಞಾನಿಗಳು, ಮನುಷ್ಯನು ಪ್ರತಿಯೊಂದು ದಿನದ ತನ್ನ ಬಾಳ್ವೆಯಲ್ಲೂ
ಮುಂದೆ ಕನಿಷ್ಟಪಕ್ಷ ಹತ್ತುಜನ್ಮಗಳನ್ನು ಎತ್ತುವುದಕ್ಕೆ ಸಾಕಾಗು
ವಷ್ಟು ಕರ್ಮಫಲವನ್ನು ಸಂಗ್ರಹಿಸುತ್ತಿರುವನೆಂದು ಹೇಳಿದ್ದಾರೆ. ಆದರೆ
ಯಾವನು, ತನ್ನ ಕಾರ್ಯಗಳಿಂದ ಸಾಕ್ಷಿರೂಪನಾದ ಅಂತರಾತ್ಮನ ಸೂಚ
ನೆಗೆ ದ್ರೋಹವನ್ನುಂಟುಮಾಡದೆ, ತಾನು ಮಾಡುವ ಸರ್ವ ಕರ್ಮಗ
ಳನ್ನೂ ಭಗವದಧೀನಗೊಳಿಸಿ ನಿರ್ಮಮನಾಗಿ ನಡೆದುಕೊಳ್ಳುವನೋ, ಅವ
ನಿಗೆ ಈ ಋಣಬಾಧೆಯು ಯಾವ ರೂಪದಿಂದಲೂ ಬಾಧಿಸದೆ ಲೋಕಯಾ
ತ್ರೆಯು ಸುಗಮವಾಗಿ ಸಾಗಲು ಅನುಕೂಲಗಳೇ ಒದಗುತ್ತಾ ಹೋಗು
ವುವು. ಆಗ್ಗೆ ಭಗವನ್ನಿರ್ಭರನಾದ ಅವನಮೇಲೆ ಹೊತ್ತಿದ್ದ ಜನ್ಮಾಂತರಾ
ರ್ಜಿತ ಋಣಭಾರಗಳೆಲ್ಲವನ್ನೂ, ಭಗವಂತನೇ ವಹಿಸಿ ತೀರಿಸಲು ಸಿದ್ಧನಾಗಿ
ನಿಲ್ಲುವನು, ಎಂಬುದರಲ್ಲಿ ಸಂದೇಹವಿಲ್ಲ.

ಈ ಋಣಾನುಬಂಧದ ಪ್ರಬಲ ಬಂಧನವಿಲ್ಲದಿದ್ದರೆ, ಲೋಕದಲ್ಲಿ
ನಡೆವ ಹಲವ ವಿಚಿತ್ರಗಳಿಗೆ ಅರ್ಥವೇನು ಎಂದು ಯೋಚಿಸಲೂ ಕಾರಣ
ವಿರುವುದಿಲ್ಲ. ಅತಿಶಯ ಕುರೂಪಿಯೂ ಶ್ವಪಚನೂ ನತದೃಷ್ಟನೂ ಆದ
ಮನುಷ್ಯನಿಗೆ ಸ್ಫುರದ್ರೂಪಿಯಾದ ದೃಢಾಂಗಳಾದ ಸ್ತ್ರೀಯು ಪತ್ನಿಯಾಗು
ವಳು. ಮಹಾ ಸದ್ಗುಣಿಯೂ ರೂಪವಂತನೂ ಭಕ್ತನೂ-ಸಾಧುವೂ ಆದ
ಮನುಷ್ಯನಿಗೆ ಕರ್ಕಶಿಯೂ ಕುರೂಪಿಯೂ ಚಂಡಿಯೂ ಆದ ಸ್ತ್ರೀಯು
ಭಾರ್ಯೆಯಾಗುವಳು. ಮಹಾ ಧಾರ್ಮಿಕನೂ ಪಾಪಭೀರುವೂ ಆದ ಮನು
ಷ್ಯನ ಉದರದಲ್ಲಿ ಅತಿಶಯ ಪಾಪಿಷ್ಠರೂ, ನಿರ್ಭಾಗ್ಯರೂ ಆದ ಮಕ್ಕಳು
ಹುಟ್ಟುವರು. ಗರ್ಭದರಿದ್ರರಿಗೆ ಹಲವು ಮಂದಿ ಮಕ್ಕಳಾಗಿ ಕಿತ್ತು ತಿನ್ನು
ವರು. ಆಗರ್ಭಶ್ರೀಮಂತರು ಒಂದು ಮಗುವಿನ ಮುಖವನ್ನು ಕಾಣಲಾರ
ಯದೆ ಊರೂರು ಸುತ್ತಿ ಕಂಡ ದೇವರುಗೆಲ್ಲ ಕೈ ಮುಗಿದು ನರಳುವರು.
ಲೋಕದಲ್ಲಿರುವ ಹಲವು ಲಕ್ಷಮಂದಿಯಲ್ಲಿ ಗೊತ್ತಾದ ಕೆಲವರಲ್ಲಿ ಮಾತ್ರ

ನಮಗೆ ಸಂಬಂಧ-ಪರಿಚಯಗಳೂ, ವ್ಯವಹಾರ ಸಂಬಂಧಗಳೂ ಏರ್ಪಡುವವು. ಈ ಕಾರ್ಯಗಳಿಗೆಲ್ಲ ಕಾರಣಗಳು ಇರಬೇಕಲ್ಲವೆ! ಆಕಸ್ಮಿಕವಾಗಿ ದೇಶಾಂತರದ-ಖಂಡಾಂತರದ ಇಬ್ಬರು ವ್ಯಕ್ತಿಗಳು ಪರಮ ಪ್ರೀತ್ಯಾಸ್ಪದರಾದ ಮಿತ್ರರಾಗಿಬಿಡುವರು. ಒಬ್ಬರ ಪ್ರಾಣಕ್ಕೆ ಮತ್ತೊಬ್ಬರು ಹೊಣೆಯಾಗುವಷ್ಟು ಪುಟ್ಟಿನ ಪ್ರೇಮಬಾಂಧವ್ಯವು ಅವರಲ್ಲಿ ಬೆಳೆದುಹೋಗುವದು. ಮನೆಯಲ್ಲಿನ ಅಣ್ಣತಮ್ಮ-ತಂದೆ ತಾಯಿಗಳೇ ಹಲವು ಸಂದರ್ಭಗಳಲ್ಲಿ ಶತ್ರುಸ್ಥಾನೀಯರಾಗಿ ನಿಂತು ಪೀಡಿಸುವರು. ಇವುಗಳಿಗೆಲ್ಲ ಕಾರಣಗಳೇನು ? ಇವು ಕೆಲಸಕ್ಕೆ ಬಾರದ ವಿಚಾರಗಳೆಂದು ಒಂದೇ ಮಾತಿನಿಂದ ತಳ್ಳಿಹಾಕುವವರು ಉಂಟೆಂಬುದನ್ನು ಬಲ್ಲೆವು. ಹಾಗಲ್ಲ-ಪ್ರತ್ಯಕ್ಷ ಪ್ರಮಾಣವನ್ನು ಮಾತ್ರವೇ ಒಪ್ಪುವ ನಮ್ಮ ಮಿತ್ರರು ಕಾರಣವಿಲ್ಲದೆ ಯಾವ ಕಾರ್ಯವೂ ನಡೆಯಲಾರದೆಂಬ ಸಿದ್ಧಾಂತವನ್ನು ಒಪ್ಪುವರಾದರೆ, ಅಸಮಂಜಸವೆಂಬಂತೆ ನಡೆದು ಹೋಗುವ ಈ ಕಾರ್ಯಗಳಿಗೆ ದೃಶ್ಯಕಾರಣಗಳೇನೆಂಬುದನ್ನು ತೋರಿಸಲಿ! ಈ ಅಸಮಂಜಸ ಸ್ಥಿತಿಗಳಿಗೆಲ್ಲ ಪ್ರತ್ಯುತ್ತರವಾಗಿ ನಾವು ಹೇಳುವ ಕಾರಣವಂತೂ ಒಂದುಂಟು. ಜೀವಾತ್ಮನ ಲೋಕಯಾತ್ರೆಯು, ಈಗ ಕಾಣುತ್ತಿರುವ ಲೌಕಿಕ ಜೀವನದಿಂದ ಮಾತ್ರವೇ ಕೊನೆಗಾಣತಕ್ಕುದಲ್ಲ-ಇದಕ್ಕೆ ಹಿಂದೆ ಮುಂದುಗಳುಂಟು. ಈಗಿನ ಸ್ಥಿತಿಯು ಹಿಂದಿನ ಜನ್ಮದಲ್ಲಿ ಮನಸಾವಾಚಾಕರ್ಮಣಾ ಅವನು ಮಾಡಿದ ಕಾರ್ಯಗಳನ್ನು ಅನುಸರಿಸಿಕೊಂಡು ಬಂದಂತೆಯೇ ಮುಂದಿನ ಸ್ಥಿತಿಯಾದರೂ, ಈಗಿನ ನಡೆವಳಿಕೆಯನ್ನು ಅನುಸರಿಸಿ ಏರ್ಪಡತಕ್ಕದಾಗಿದೆ. ಈ ವಿಚಾರದಲ್ಲಿ ದೀರ್ಘವಾಗಿ ವಿಮರ್ಶಿಸದಿದ್ದರೆ ಪ್ರಾಜ್ಞರಾದ ನಮ್ಮ ಪೂರ್ವಿಕರು ಮನುಷ್ಯನು ಸರ್ವ ವಿಧದಿಂದಲೂ ದೇವ ಋಣ, ಪಿತೃ ಋಣ, ಋಷಿ ಋಣಗಳನ್ನು ತೀರಿಸಿಕೊಳ್ಳಲು ಪ್ರಯತ್ನಿಸಲೇಬೇಕೆಂದು ವಿಧಸುತ್ತಿರಲಿಲ್ಲ ಎಂಬುದನ್ನು ನಾವು ಗಮನಿಸಬೇಕು.

ಹೀಗೆ ಜನ್ಮಾಂತರಾರ್ಜಿತ ಋಣಾನುಬಂಧದ ಬಲವತ್ತರ ಸಾಮರ್ಥ್ಯದಿಂದಲೋ ಎಂಬಂತೆ, ಸಾಧ್ವೀರತ್ನಳಾದ ಸುಕನ್ಯೆಗೆ ಅಕಸ್ಮಾತ್ತಾಗಿ ಅಂತಹ ಕುಹಕ ಕಾರ್ಯಮಾಡುವಂತಹ ಪ್ರೇರಣೆಯುಂಟಾಗಿ, ದೃಶ್ಯವಾದ ಆ ಕಾರಣದ ಮೂಲಕ ಸಾರ್ವಭೌಮನ ಪತ್ನಿಯಾಗಲು ಅರ್ಹಳೆಂದು ಸಕಲ

ರೂ ನಂಬಿ ಹಾರೈಸಿಕೊಂಡಿದ್ದ ಆಕೆಯು ವನವಾಸಿಯೂ, ಕುರೂಪಿಯೂ ಜಡವೃದ್ಧನೂ, ಅರಸಿಕನೂ ಆದ ಚ್ಯವನಮುಹರ್ಷಿಗೆ ಭಾರ್ಯೆಯಾಗಿ ಏರ್ಪಡುವಂತಾಯಿತು. ತನ್ನ ಪ್ರೇಮಪುತ್ರಿಗೆ ಪ್ರಾಪ್ತವಾದ ಈ ದುರ್ವಿಧಿಗಾಗಿ ಶರ್ಯಾತಿರಾಜರ್ಷಿಯು, ಅತಿಶಯ ಮರುಗಿದನು. ತನ್ನ ದುರ್ವಿಧಿಯುನ್ನು ಹಲವು ಬಗೆಯಿಂದ ನಿಂದಿಸಿಕೊಂಡನು. ಆದರೆ ಏನು ಮಾಡಿದರೇನು ? ವಿಧಿಗತಿಯುನ್ನು ಅನುಸರಿಸಿ ನಡೆಯುಬೇಕಾದ ಕಾರ್ಯವಂತೂ ನಡೆದುಹೋಯಿತು. ತರುವಾಯ ತನ್ನ ಮಗಳಿಗೆ ಸಮಯೋಚಿತವಾಗಿ ಹೇಳಬೇಕಾದ ಬುದ್ಧಿವಾದಗಳನ್ನು ಹೇಳಿ, ಅತಿಶಯ ದುಗುಡದಿಂದ ಆಕೆಯುನ್ನು ಆ ವೃದ್ಧಮುಹರ್ಷಿ ಸಾನ್ನಿಧ್ಯದಲ್ಲಿ ಏಕಾಕಿನಿಯುನ್ನಾಗಿ ಬಿಟ್ಟು, ತಾನು ಪರಿವಾರದೊಂದಿಗೆ ಸ್ವಗ್ರಾಮವನ್ನು ಕುರಿತು ಪ್ರಯಾಣಮಾಡಿದನು.

ತಂದೆಯಾದ ಶರ್ಯಾತಿರಾಜನು ಹೊರಟು ನಡೆದ ತರುವಾಯ, ಸುಕನ್ಯೆಯು ಏಕಾಏಕಿ ಜನ ಸಂಘುದಿಂದಲೇ ಪ್ರತ್ಯೇಕಿಸಲ್ಪಟ್ಟವಳಂತೆ ನಿರ್ಜನವಾದ ಆ ಕಾಡಿನಲ್ಲಿ ಆ ವೃದ್ಧ ಮುಹರ್ಷಿಯೊಂದಿಗೆ ಒಬ್ಬಳೇ ನಿಂತುದಕ್ಕಾಗಿ ಮಂಕಳಂತಾಗಿ ಏನೂ ತೋರದಂತೆ ಸ್ವಲ್ಪ ಹೊತ್ತು ಕುಳಿತಿದ್ದಳು. ತರುವಾಯ ಪ್ರಾಜ್ಞಳಾದ್ದರಿಂದ ತನ್ನ ಜನ್ಮಾಂತರೀಯ ಕರ್ಮ ಫಲಾನುಸಾರವಾಗಿ ದೊರೆತಿರುವ ಆ ಪರಿಸ್ಥಿತಿಗೆ ಮರುಗಿ ಪ್ರಯೋಜನವಿಲ್ಲವೆಂದೂ, ಅದನ್ನೇ ಅನುಸರಿಸಿ ನಡೆದು ಸುಕಾಲವನ್ನು ಎದುರು ನೋಡಬೇಕೆಂದೂ ಚಿಂತಿಸಿದವಳಾಗಿ ಎದ್ದು, ಉತ್ಸಾಹಗೊಂಡು ಕಾರ್ಯ ತತ್ಪರಳಾದಳು. ಹುತ್ತದ ಮೇಲ್ಭಾಗವು ಕಳಚಿ ಬಿದ್ದು, ಚ್ಯವನಮುಹರ್ಷಿಗೆ ಮಳೆಬಿಸಿಲುಗಳಿಂದ ರಕ್ಷಣೆಯು ತಪ್ಪಿತಾದುದರಿಂದ ತಮ್ಮಿಬ್ಬರ ವಾಸಕ್ಕೆಂದು ಕಷ್ಟಪಟ್ಟು ಒಂದು ಎಲೆಮನೆಯುನ್ನು ನಿರ್ಮಿಸಿದಳು. ಗೆಡ್ಡೆ ಗೆಣಸುಗಳನ್ನೂ ಕಾಡಿನಲ್ಲಿ ದೊರೆವ ಹಲವು ಬಗೆಯ ಹಣ್ಣು ಹಂಪಲುಗಳನ್ನೂ, ಸಂಗ್ರಹಿಸಿ ತಂದು ತನ್ನಾಭರ್ತನಿಗೆ ರುಚಿ ರುಚಿಯಾದ ಆಹಾರವನ್ನು ಒದಗಿಸುವಳು. ನಿತ್ಯವೂ ಪ್ರಾತಃಕಾಲ ಎದ್ದೊಡನೆಯೇ ಮುಖ ಮಾರ್ಜನಾದಿಗಳನ್ನು ಮಾಡಿಕೊಂಡು ತನ್ನ ಪತಿಯ ಪಾದಗಳನ್ನು ತೊಳೆದು, ಮುಖಪ್ರಕ್ಷಾಳನಾ ತರುವಾಯ ಆತನಿಗೂ ಸ್ನಾನಮಾಡಿಸಿ, ಒಗೆದು ಒಣಗಿಸಿದ ನಾರುಮಡಿಗಳನ್ನು ಉಡಿಸಿ, ಹಲವು ಬಗೆಗಳಿಂದ ಉಪಚರಿಸುವಳು. ಈ ಕೆಲಸಗಳನ್ನು ಮಾಡು

ವಾಗಲೆಕ್ಕ- ಮಹಾನುಭಾವನಾದ ಆತನು ತನ್ನ ವಿಷಯದಲ್ಲಿ ಸುಪ್ರೀತನಾಗಲಿ ಎಂಬೊಂದು ಭಾವನೆಯೇ ಆಕೆಯ ಮನಸ್ಸಿನಲ್ಲಿ ಇದ್ದಿತಾದುದರಿಂದ, ಆ ನಾರೀರತ್ನವು ಅತ್ಯುತ್ಸಾಹದಿಂದಲೂ, ಆತನ ಮನೋವೃತ್ತಿಯನ್ನು ಅನುಸರಿಸಿ ಅತಿಶಯ ಜಾಗರೂಕತೆಯಿಂದಲೂ. ನಡೆದು ಆತನೇ ತನ್ನ ಸರ್ವಸ್ವವೂ ಎಂದೂ, ತನ್ನ ಪತಿಯಾದ ಆತನೇ ಪ್ರತ್ಯಕ್ಷ ಭಗವತ್ಸ್ವರೂಪವೆಂದೂ ತಿಳಿದು ಮನಸಾ ವಾಚಾ ಕರ್ಮಣಾ ವಂಚನೆಯಿಲ್ಲದೆ ತನ್ನಿಂದ ಸಾಧ್ಯವಿದ್ದ ಸಕಲ ಮಾರ್ಗಗಳಿಂದಲೂ ಸೇವೆಮಾಡಿ, ಆತನಿಗೆ ಆ ವನವಾಸವನ್ನೂ ಸುಖಮಯ ಸ್ವರ್ಗವಾಸವೆನ್ನಿಸಿದಳು. ಮುಂಗೋಪ ಸ್ವಭಾವದ ಚ್ಯವನನು ಪ್ರಾರಂಭದಲ್ಲಿ ಕೆಲವು ದಿನಗಳು, ರಾಜಪುತ್ರಿಯಾದ ಆಕೆಯನ್ನು ಪರೀಕ್ಷಿಸುವ ಉದ್ದೇಶದಿಂದ, ಆಕೆಯ ಸೇವೆಯನ್ನು ಸಮಾಧಾನದಿಂದ ಕೈಕೊಳ್ಳದೆ. ಎದ್ದರೆ ಕುಳಿತರೆ ಆಕ್ಷೇಪಿಸುತ್ತಾ, ಮಾಡಿದ ಕಾರ್ಯಗಳನ್ನು ಮೆಚ್ಚದೆ ಗೊಣಗಿಕೊಳ್ಳುತ್ತಾ, ಆಕೆಯು ತನ್ನ ಸ್ವಭಾವಕ್ಕೆ ರೋಸಿ ಪ್ರತಿಭಟಿಸುವಳೇನೋ ಎಂದು ಗಮನಿಸಿಕೊಂಡಿದ್ದನು. ಆದರೆ ಶ್ರೇಷ್ಠವಾದ ಮನುವಂಶ ಸಂಭೂತಳೂ ಕುಲಸ್ತ್ರೀಯೂ ಆದ ಆಕೆಯು ತಾನು ಜಗದ ನಾರಿಯರಂತೆ ವಿಷಯ ಸುಖಾಭಿಲಾಷಿಣಿಯಲ್ಲ, ಅಶ್ರದ್ಧಾವಂತಳಲ್ಲ, ಮೂರ್ಖಳಲ್ಲ, ದ್ರೋಹಿಯಲ್ಲವೆಂಬುದನ್ನು ಬಾಯಲ್ಲಿ ಹೇಳದೆ, ತನ್ನ ಕೃತಿಯಿಂದಲೇ ಪ್ರದರ್ಶಿಸಿದಳು. ಅಂತಹ ಸ್ಥಿತಿಯಲ್ಲೂ, ಸದಾ ಹಸನ್ಮುಖದಿಂದಲೂ, ಸಂಪೂರ್ಣ ಸಂತುಷ್ಟಾಂತರಂಗದಿಂದಲೂ ಕೂಡಿ, ಬೇಸರಗೊಳ್ಳದೆ ಸಕಲ ವಿಧದಿಂದಲೂ ಸೇವೆಮಾಡಿ, ಆ ತನ್ನ ವೃದ್ಧ ಪತಿಯನ್ನು ಸಂತೋಷಪಡಿಸಿದಳು. ಹೀಗೆಯೇ ಒಂದಲ್ಲ-ಎರಡಲ್ಲ, ಹನ್ನೆರಡು ವರ್ಷಕಾಲ ನಡೆಯಿತು.

ವೃದ್ಧನೂ, ಕುರೂಪಿಯೂ, ವನವಾಸಿಯೂ, ಗರ್ಭದರಿದ್ರನೂ ಆದ ತನ್ನನ್ನು ನಿಷ್ಕಲಂಕ ಮನಸ್ಕತೆಯಿಂದ ಹನ್ನೆರಡು ವರ್ಷಕಾಲ ಸೇವಿಸಿದ ಆ ನಾರೀಮಣಿಯ ಸದ್ಗುಣ ಸದಾಚರಣೆಗಳನ್ನೂ, ಆಕೆಯ ಸಮಾಧಾನ, ಸಂತುಷ್ಟತೆಗಳನ್ನೂ ಕಂಡು ಚ್ಯವನಮಹರ್ಷಿಗೆ ಅದ್ಭುತವೆನ್ನಿಸಿತು. 'ವನವಾಸಿಯಾದ ನಾನು ನೂರಾರು ವರ್ಷಗಳು-ದೇಹದಮೇಲೆ ಹುತ್ತವನ್ನು ಬೆಳೆಯಲಿತ್ತು, ಪಂಚೇಂದ್ರಿಯಗಳ ಉಪಟಳವನ್ನು ಜಯಿಸಿ, ಮಾಡಿದುದು ತಪಸ್ಸಲ್ಲ, ರಾಜಗೃಹದಲ್ಲಿ ಸಕಲವಿಧ ಸೌಭಾಗ್ಯಗಳಲ್ಲಿ ಹುಟ್ಟಿ-ರಾಜ ಭೋಗ

ಗಳನ್ನನುಭವಿಸಿ ಬೆಳೆದ, ನವಯೌವನೆಯಾದ ಈಕೆಯು, ಏಕಾಕಿನಿಯಾಗಿ ಅರಣ್ಯವಾಸಮಾಡುತ್ತಾ, ವಿಷಯಾಭಿಲಾಷೆಯನ್ನು ತೊರೆದು ಮನಸ್ಸಿನಲ್ಲಿ ಕೋಪತಾಪಗಳಿಗೂ ಅಸಂತುಷ್ಟಿ ಅಸಹನೆಗಳಿಗೂ ಮನಸ್ಸಿನಲ್ಲಿ ಲೇಶಮಾತ್ರವೂ ಎಡೆಗೊಡದೆ ವೃದ್ಧಪತಿಯಾದ-ನನ್ನಿಂದ ನವಯುವತಿಯಾದ ತನಗೆ ಲೇಶಮಾತ್ರ ಸುಖಪ್ರಾಪ್ತಿಯಾಗುವುದೆಂಬ ಆಶೋತ್ತರವೂ ಇಲ್ಲದಿದ್ದರೂ, ಹನ್ನೆರಡು ವರ್ಷಕಾಲ ಮಾಡಿದ ಈ ಸೇವೆಯು ಅಗಾಧ ತಪಸ್ಸು, ಇನ್ನದಕ್ಕೆ ಸಾಟಿಯಿಲ್ಲ-ಧನ್ಯೆ ಧನ್ಯೆ !' ಎಂದು ಮೆಚ್ಚಿಕೊಂಡನು. ಹಾಗೆ ಮೆಚ್ಚಿಕೊಂಡ-ಗುಣಗ್ರಾಹಿಯಾದ ಆತನು, ಸ್ತ್ರೀಯಾದ ಆಕೆಯನ್ನು ಲೌಕಿಕ ರೀತಿಯಿಂದ ಸಂತೋಷಪಡಿಸಲು ಪ್ರಯತ್ನಿಸುವುದು ಪತಿಯಾದ ತನ್ನ ಕರ್ತವ್ಯವು ಎಂದು ಯೋಚಿಸಿ, ಸಮಯಾನುಕೂಲವನ್ನು ಎದುರು ನೋಡಿಕೊಂಡಿದ್ದನು.

ಮುಂದೆ ಕೆಲವು ದಿನಗಳು ಕಳೆದುವು. ಅಷ್ಟರೊಳಗಾಗಿಯೇ ಸಿದ್ಧಸಂಕಲ್ಪನಾದ ಚ್ಯವನಮಹರ್ಷಿಯ ಇಚ್ಛಾಪೂರ್ಣವಾಗುವ ಒಂದು ಸುಯೋಗವೂ ಒದಗಿತು. ಒಂದಾನೊಂದುದಿನ ಅಂತರಿಕ್ಷಮಾರ್ಗದಲ್ಲಿ ಸಂಚಾರ ಹೋಗುತ್ತಿದ್ದ ದೇವವೈದ್ಯರಾದ ಅಶ್ವಿನೀದೇವತೆಗಳು, ಸುಕನ್ಯಾದೇವಿಯು ವೃದ್ಧನಾದ ಚ್ಯವನಮಹರ್ಷಿಗೆ ನದಿಯಲ್ಲಿ ಸ್ನಾನಮಾಡಿಸಿ, ಅಶಕ್ತಿಯಿಂದ ನಡೆಯಲಾರದೆ ತೊಂದರೆಪಡುತ್ತಿದ್ದ ಆತನನ್ನು ಮೃದುಭಾಷಣದಿಂದುಪಚರಿಸಿ ತನ್ನ ಭುಜದಮೇಲೆ ಕೂರಿಸಿಕೊಂಡು ಆಶ್ರಮಾಭಿಮುಖವಾಗಿ ಬರುತ್ತಿದ್ದುದನ್ನು ಕಂಡರು. ಅವರಿಗೂ ಆ ದೃಶ್ಯವು ಅದ್ಭುತವೆಂದು ತೋರಿತು. ಒಡನೆ ಕೆಳಕ್ಕಿಳಿದು ಆಶ್ರಮದ ಬಾಗಿಲಿಗೆ ಬಂದರು. ಆ ವೇಳೆಗೆ ಸುಕನ್ಯಾದೇವಿಯು ತನ್ನ ಪತಿಯನ್ನು ಆಶ್ರಮದೊಳಗೆ ಜಪಾಸನದಲ್ಲಿ ಕೂರಿಸಿ, ಆಹಾರಸಿದ್ಧತೆಯ ಕೆಲಸ ಕಾರ್ಯಗಳಲ್ಲಿ ತೊಡಗಿದ್ದಳು. ಇದ್ದುದಿದ್ದಂತೆಯೇ ಆಶ್ರಮದ್ವಾರದಲ್ಲಿ ನವಮೋಹನಾಕಾರರೂ, ಅಲೌಕಿಕತೇಜಸ್ಸಂಪನ್ನರೂ ಆದ ಆ ದಿವ್ಯಮೂರ್ತಿಗಳು ಪ್ರತ್ಯಕ್ಷರಾದರು. ಚ್ಯವನನು ಜಪಸಮಾಧಿಮಗ್ನನಾಗಿ ಕುಳಿತಿದ್ದುದರಿಂದ,-ಮನೆಯ ಬಾಗಿಲಿಗೆ ಬಂದ ಆ ಅತಿಥಿಗಳಿಗೆ ಸುಕನ್ಯೆಯೇ ಪಾದಪ್ರಕ್ಷಾಳನಕ್ಕೆ ಶುದ್ಧೋದಕವನ್ನು ಕೊಟ್ಟು, ಒಳಕ್ಕೆ ಬಂದು ಕುಳಿತು ವಿಶ್ರಮಿಸಿಕೊಳ್ಳುವಂತೆ ಮೃದು

ವಚನಗಳಿಂದ ಉಪಚರಿಸಿ, ಆಸನಗಳನ್ನು ತೋರಿಸಿದಳು. ಅಶ್ವಿನೀದೇವತೆಗಳು, ಆಕೆಯ ಸೌಜನ್ಯಕ್ಕಾಗಿ ಪರಮಸಂತುಷ್ಟರಾಗಿ ಆಶ್ರಮದೊಳಹೊಕ್ಕು ವಿಶ್ರಮಿಸಿಕೊಂಡರು. ಅಷ್ಟರಲ್ಲೇ ಜಪವನ್ನು ಮುಗಿಸಿ ಬಹಿರ್ಮುಖನಾದ ಚ್ಯವನನು ಅತಿಥಿಗಳಾಗಿ ತನ್ನ ಆಶ್ರಮಕ್ಕೆ ಬಂದ ಆ ದೇವತೆಗಳನ್ನು ಮೃದುವಚನಗಳಿಂದಲೂ ಕಂದ ಮೂಲ ಫಲಾದಿಗಳನ್ನು ಅರ್ಪಿಸಿಯೂ, ಉಪಚರಿಸಿದನು. ಆ ಮಹರ್ಷಿದಂಪತಿಗಳ ಆದರಣೆಯಿಂದ ತೃಪ್ತರಾದ ಆ ದೇವವೈದ್ಯರು-' ಮಹರ್ಷೇ, ಈದಿನ ನಿನ್ನೀ ಆಶ್ರಮದಲ್ಲಿ ಅತಿಶಯವಾಗಿ ಆದರಿಸಲ್ಪಟ್ಟು ಸಂತುಷ್ಟರಾಗಿದ್ದೇವೆ! ಇದಕ್ಕಾಗಿ ದಂಪತಿಗಳಾದ ನಿಮ್ಮನ್ನು ಯಾವುದಾದರೊಂದು ಮಾರ್ಗದಿಂದ ಸಂತೋಷಪಡಿಸಬೇಕೆಂದು ನಮಗೆ ಇಚ್ಛೆಯು ಉತ್ಪನ್ನವಾಗಿದೆ. ಯಾವಬಗೆಯಿಂದ ನಿಮ್ಮನ್ನು ಸಂತೋಷಪಡಿಸಬಹುದೆಂದು ನೀನು ಹೇಳಬೇಕು' ಎಂದರು. ದೇವವೈದ್ಯರಾಡಿದ ಆ ಮಾತನ್ನು ಕೇಳಿ, ಚ್ಯವನಮಹರ್ಷಿಯು, ಅಲ್ಲೇ ಒಳಮನೆಯ ಬಾಗಿಲಲ್ಲಿ ನಿಂತಿದ್ದ ತನ್ನ ಪತ್ನಿಯ ಮುಖವನ್ನು ನೋಡಿದನು. ಪಾಪ, ಆಸಾಧ್ವಿಯು ಏನು ಪ್ರತ್ಯುತ್ತರ ಕೊಟ್ಟು ತನ್ನ ಮನಸ್ಸಿನ ಭಾವವನ್ನು ವ್ಯಕ್ತಪಡಿಸಲಾಪಳು ? ತಲೆಯನ್ನು ಬಗ್ಗಿಸಿ ಸುಮ್ಮನಿದ್ದುಬಿಟ್ಟಳು. ಆಗ ಚ್ಯವನಮಹರ್ಷಿಯು,-' ದೇವೋತ್ತಮರೇ, ರಾಜರ್ಷಿ ಶರ್ಯಾತಿಯ ಮಗಳಾದ ಈಕೆಯು ಕಾಲಕರ್ಮ ಸಂಯೋಗದಿಂದ ನನಗೆ ಭಾರ್ಯೆಯಾಗಿ ಹನ್ನೆರಡು ವರ್ಷಗಳಿಂದಲೂ, ಅಗಾಧ ಪ್ರೀತಿಯಿಂದ ನನ್ನ ಸೇವೆಮಾಡಿದ್ದಾಳೆ. ಈವರೆಗೂ ಒಂದು ದಿನವಾದರೂ, ನನ್ನಿಂದ ಯಾವಬಗೆಯಿಂದಲೂ ಲೇಶಮಾತ್ರವೂ ಈಕೆಗೆ ಸುಖವೆಂಬುದು ಪ್ರಾಪ್ತವಾಗಲವಕಾಶವೊದಗಲಿಲ್ಲ. ಈಕೆಯಿಂದ ಇಷ್ಟುಬಗೆಯ ಸೇವೆಗೊಂಡ ನಾನು, ಪತಿಯಾದ ನನ್ನ ಕರ್ತವ್ಯವನ್ನೂ ನೆರವೇರಿಸಿ, ಧರ್ಮಪತ್ನಿಯಾದ ಆಕೆಯನ್ನು ತೃಪ್ತಿಪಡಿಸತಕ್ಕುದು ಕರ್ತವ್ಯವಾಗಿದೆ. ಆದುದರಿಂದ, ನೀವು ನನ್ನ ವಿಷಯದಲ್ಲಿ ಸುಪ್ರೀತರಾಗಿರುವುದು ನಿಶ್ಚಯವಾದರೆ. ನನಗೆ ನವಯೌವನವನ್ನೂ, ಈಕೆಯ ಮನಸ್ಸು ತೃಪ್ತಿಗೊಳ್ಳುವಂತಹ ದೇಹ ಸೌಂದರ್ಯವನ್ನೂ ಅನುಗ್ರಹಿಸಬೇಕು. ಇಷ್ಟೇ ನನ್ನ ಮನೋಭಿಲಾಷೆಯು ' ಎಂದನು. ಅಶ್ವಿನೀ ದೇವತೆಗಳು ಚ್ಯವನನ ಆ ಪ್ರಾರ್ಥನೆಯು ಸಾಧುವಾದುದೆಂದುಕೊಂಡು, ' ಹಾಗೇ ಆಗ

ಲಿ ' ಎಂದು-ಹೊರಟು ಆತನೊಂದಿಗೆ ಸಮೀಪದಲ್ಲೇ ಇದ್ದ ಒಂದು ಮಡುವಿನ ಬಳಿಗೆ ನಡೆದರು. ಆ ಮಡುವಿನಲ್ಲಿದ್ದ ಜಲವನ್ನು ಮಣಿ-ಮಂತ್ರೌಷಧ ಪ್ರಯೋಗಗಳಿಂದ ಸಿದ್ಧರಸವನ್ನಾಗಿ ಮಾರ್ಪಡಿಸಿ-'ಮಹರ್ಷೇ, ನಮ್ಮೊಂದಿಗೆ ಈ ಮಡುವಿನಲ್ಲಿ ಮುಳುಗು-ನಿನ್ನ ಇಷ್ಟಾರ್ಥವು ಸಿದ್ಧಿಸುವುದು ' ಎಂದು ನುಡಿದು, ಆತನೊಂದಿಗೆ ತಾವೂ ಮುಳುಗಿದರು. ಹಾಗೆ ಆ ಸಿದ್ಧರಸದ ಮಡುವಿನಲ್ಲಿ ಮುಳುಗಿ ಮೂವರೂ ಮೇಲಕ್ಕೆದ್ದರು. ಆಶ್ಚರ್ಯವಾಶ್ಚರ್ಯವು ! ಇದೇನದ್ಭುತ ? ನರೆತ ಕೂದಲಿನ ಜೋಲು ಬಿದ್ದ ಗಡ್ಡದ, ಸುಕ್ಕುಬಿದ್ದ ಚರ್ಮದ, ಎಲುಬುಗಳು ಹೊರಟುಕೊಂಡು ಅಸಹ್ಯವಾದ ದೇಹದ, ಚ್ಯವನನೆಲ್ಲಿ ? ಆ ಮಡುವಿನ ಮೇಲ್ಗಡೆಯಲ್ಲಿ, ಮೂವತ್ತು ವರ್ಷ ಪ್ರಾಯದ, ಮನ್ಮಥ ವಸಂತರಂತಹ ದೇಹಸೌಂದರ್ಯವುಳ್ಳ ನವಮೋಹನಾಕಾರದ, ಪುಷ್ಟ ದೇಹದ ಮೂರುಮಂದಿ ಪುರುಷಶ್ರೇಷ್ಠರು ಕಾಣಿಸಿಕೊಂಡರು ! ಒಂದೇ ರೂಪದ ಒಂದೇ ವಯಸ್ಸಿನ ಅವರನ್ನು ಕಂಡು, ಸುಕನ್ಯಾದೇವಿಯು ಪ್ರಾರಂಭಕ್ಕೆ ಸ್ವಲ್ಪ ಗಾಬರಿಯಾದಳು.-'ಅಕ್ಕಟಾ, ನನ್ನ ಪತಿಯು ಎಲ್ಲಿ ಅದೃಶ್ಯವಾದನು ? ಈದಿನ ನಡೆದ ಪ್ರಸಂಗವೇನಿದು. ನನಗಿನ್ನು ದಿಕ್ಕಾರು ? ' ಎಂದು ಹಂಬಲಿಸಿಕೊಂಡಳು. ಅಷ್ಟರಲ್ಲಿ, ಅತಿಥಿಗಳು ತಮ್ಮ ಮನೆಗೆ ಬಂದುದೂ, ತನ್ನ ಪತಿಯು ಅವರನ್ನು ಕೇಳಿಕೊಂಡುದೂ, ಮೂವರೂ ಒಂದಾಗಿ ಮಡುವಿನಲ್ಲಿ ಮುಳುಗಿದ ಸಂಗತಿಯೂ ಜ್ಞಾಪಕಕ್ಕೆ ಬಂದುವು. ಒಡನೆ ಕೈಜೋಡಿಸಿ-' ಎಲೈ ದೇವೋತ್ತಮರೇ, ಅಕಸ್ಮಾತ್ತಾಗಿ, ನನ್ನ ಪತಿಯ ಸ್ವಾಭಾವಿಕ ರೂಪವು ಮಾಯವಾಗಿದೆ. ಪತಿಪಾದ ಪರಾಯಣಳಾದ ನನಗೆ ಇದು ಸಹನಾತೀತವಾದ ಸ್ಥಿತಿಯು. ನಾನು ಏಕನಿಷ್ಠೆಯಿಂದ ನನ್ನ ಪತಿಯ ಪಾದಗಳನ್ನೇ ನಂಬಿ, ಮನಸ್ಸಿನಲ್ಲಿ ಅನ್ಯವನ್ನು ಅರಿಯದೆ ಸೇವೆಮಾಡಿಕೊಂಡಿದ್ದುದೇ ಸತ್ಯವಾಗಿದ್ದರೆ, ದೇವೋತ್ತಮರಾದ ನೀವು, ಈ ಮೂರುಮಂದಿ ವ್ಯಕ್ತಿಗಳಲ್ಲಿ ನನ್ನ ಪತಿಯಾರು ಎಂಬುದನ್ನು ತೋರಿಸಿಕೊಟ್ಟು ನನ್ನನ್ನು ಉದ್ಧರಿಸಿರಿ. ಮಹಾ ಪ್ರಮಾದಕರವಾದ ಈ ಸಂದರ್ಭದಲ್ಲಿ ನನಗೆ ಪಾಪಸಾಧನೆಯಾಗದಂತೆ ಸಹಾಯ ಮಾಡಿರಿ' ಎಂದು ಆ ದೇವತೆಗಳನ್ನು ಉದ್ದೇಶಿಸಿ ದೀರ್ಘದಂಡನಮಸ್ಕಾರ ಮಾಡಿದಳು.

ಆರ್ತಳಾದ ಆ ಪತಿವ್ರತೆಯು ನಿಷ್ಕಲ್ಮಷವಾದ ಅಂತರ್ಯವನ್ನು ತಿಳಿದ, ಮಹಾನುಭಾವರಾದ ಅಶ್ವಿನೀ ದೇವತೆಗಳು, ಆಕೆಯ ಪ್ರಾರ್ಥನೆಯನ್ನು ಕೇಳಿ ಸುಪ್ರೀತರಾಗಿ, ತಾವಿಬ್ಬರೂ ಬೇರೆಯಾಗಿ ನಿಂತು,—'ಎಲೌ ಸಾಧ್ವೀ ಶಿರೋಮಣಿಯೇ, ಈತನೇ ನಿನ್ನ ಭರ್ತನು. ಈತನು ಈಗ ಈ ಸಿದ್ಧರಸದ ಮಹಿಮೆಯಿಂದ ಸಂಪೂರ್ಣ ಆರೋಗ್ಯ ಭಾಗ್ಯವನ್ನೂ, ನವಯೌವನವನ್ನೂ, ಅದ್ವಿತೀಯ ಸೌಂದರ್ಯವನ್ನೂ ಹೊಂದಿ ಶೋಭಿಸುತ್ತಿದ್ದಾನೆ. ಅಗ್ನಿ ಸಾಕ್ಷಿಕವಾಗಿ ಪಾಣಿಗ್ರಹಣವಾಡಿದ ಈತನೊಂದಿಗೆ ಬೆರೆದು ನೀನು ಸಕಲ ಭೋಗಗಳನ್ನೂ ಅನುಭವಿಸಿ ಪುತ್ರವಂತಳಾಗು; ನಿನಗೆ ಕ್ಷೇಮವಾಗಲಿ' ಎಂದು ಆಶೀರ್ವದಿಸಿದರು. ಸುಕನ್ಯಾದೇವಿಯು ತನಗೆ ಪ್ರಾಪ್ತವಾದ ಅಲಭ್ಯ ಲಾಭಕ್ಕಾಗಿ, ಬಾಯಿಂದ ಹೇಳಲಾಗದಂತಹ ಅಗಾಧ ಸಂತೋಷವನ್ನು ಮನಸ್ಸಿನಲ್ಲಿ ಅನುಭವಿಸಿ-ಒಡನೆ ನಡೆದು, ಆ ತನ್ನ ಪತಿಪಾದಗಳಲ್ಲಿ ದೀರ್ಘದಂಡವತ್ ಪ್ರಣಾಮಮಾಡಿ, ಎರಡು ಪಾದಗಳನ್ನೂ ಬಾಹುಲತೆಗಳಿಂದ ಬಂಧಿಸಿ-ಆನಂದಾತಿಶಯದಿಂದ ಹರಿಯುತ್ತಿದ್ದ ಬಾಷ್ಪೋದಕದಿಂದ ಆತನ ಪಾದಗಳನ್ನು ಅಭಿಷೇಕಿಸಿ, ಧನ್ಯಳಾದೆನೆಂದುಕೊಂಡಳು. ಚ್ಯವನನೂ ಆ ಪ್ರೇಮಪಾಶಕ್ಕೆ ಬದ್ಧನಾಗಿ, ಆನಂದ ಬಾಷ್ಪಗಳು ಸುರಿಯುತ್ತಿರಲು, ಆಕೆಯ ಭುಜವನ್ನು ಹಿಡಿದೆತ್ತಿ ಉಚಿತ ವಚನಗಳಿಂದ ಸಾಂತ್ವೈಸಿದನು. ತರುವಾಯ ಆ ದಂಪತಿಗಳಿಬ್ಬರೂ ಅಲ್ಲೇ ನಿಂತು, ಆ ಸುಖಮಯ ದೃಶ್ಯವನ್ನು ನೋಡುತ್ತಿದ್ದ ಅಶ್ವಿನೀ ದೇವತೆಗಳಲ್ಲಿಗೆ ನಡೆದು, ಅವರ ಪಾದಾಭಿವಾದನಮಾಡಿ—'ತಮ್ಮ ದಯೆಯಿಂದ ನಮ್ಮ ವಂಶವು ಉದ್ಧೃತವಾಯಿತು' ಎಂದು ಹಲವು ಬಗೆಯಿಂದ ಹೊಗಳಿದರು. ಅಲ್ಲದೆ ಚ್ಯವನಮಹರ್ಷಿಯು—'ದೇವೋತ್ತಮರೆ, ತಾವು ನನಗೆ ಮಾಡಿದ ಈ ಸಹಾಯವು ಅಮಾನುಷವಾದುದು ಮತ್ತು ಅದ್ಭುತವಾದುದು. ಈ ಸಹಾಯಕ್ಕೆ ಪ್ರತಿಯಾಗಿ ತಮಗೆ ನಾನೊಂದು ಸಹಾಯಮಾಡಬೇಕೆಂದು ಅಪೇಕ್ಷಿಸಿದ್ದೇನೆ. ಅದನ್ನು ದಯವಿಟ್ಟು ಸ್ವೀಕರಿಸಬೇಕು. ದೇವವೈದ್ಯರಾದ ತಮಗೆ ಇಂದ್ರಾದಿ ಇತರ ದೇವತೆಗಳಿಗಿರುವಂತೆ ಯಾಗಗಳಲ್ಲಿ ಹವಿರ್ಭಾಗವು ಈವರೆಗೆ ದೊರೆಯುತ್ತಿಲ್ಲವಲ್ಲವೆ ? ನಾನದನ್ನು ತಮಗೆ ಸಾಧಿಸಿಕೊಟ್ಟು, ಯಥಾ

ನುಶಕ್ತಿ ಈ ತಮ್ಮ ಉಪಕಾರಕ್ಕೆ ಕೃತಜ್ಞತೆಯನ್ನು ತೋರಿಸುತ್ತೇನೆ! ಅದನ್ನು ದಯವಿಟ್ಟು ಅಂಗೀಕರಿಸಬೇಕು' ಎಂದು ಪ್ರಾರ್ಥಿಸಿ, ಪುನಃ ಪುನಃ ನಮಸ್ಕರಿಸಿದನು.

ಅಶ್ವಿನೀ ದೇವತೆಗಳು 'ತಥಾಸ್ತು' ಎಂದು ನುಡಿದು, ಆ ದಂಪತಿಗಳನ್ನು ಪುನಃ ಮನಸಾರೆ ಆಶೀರ್ವದಿಸಿ ಅದೃಶ್ಯರಾಗಿ ಹೊರಟುಹೋದ ತರುವಾಯ, ಸುಕನ್ಯಾ ಚ್ಯವನರು ತಮ್ಮ ಆಶ್ರಮವನ್ನು ಕುರಿತು ಹೊರಟು ಬಂದರು. ವೃದ್ಧನೂ ಕುರೂಪಿಯೂ, ವಿಕೃತಾಂಗನೂ ಆದ ಅಂದಿನ ಪತಿಯನ್ನೇ ಸಾಕ್ಷಾದ್ದೇವತಾ ಸ್ವರೂಪವೆಂದು ತಿಳಿದು ಸೇವಿಸಿ ಆರಾಧಿಸುತ್ತಿದ್ದ ಸುಕನ್ಯೆಯು, ಇನ್ನು ನವಮೋಹನಾಂಗನೂ, ಪ್ರಿಯವಯಸ್ಕನೂ, ಮನೋಹಾರಕನೂ, ಮನ್ಮಥ ಸದೃಶ ಸೌಂದರ್ಯಶಾಲಿಯೂ ಆದ ಇಂದಿನ ಪತಿಯನ್ನು ಮೆಚ್ಚಿಕೊಂಡು ಸೇವಿಸುವುದು ಏನತಿಶಯ! ಚ್ಯವನನು ಪ್ರೌಢೆಯಾದ ಆಕೆಯ ಮನಸ್ತೃಪ್ತ್ಯರ್ಥವಾಗಿ, ತನ್ನ ತಪಸ್ಸಾಮರ್ಥ್ಯದಿಂದ ಸಕಲವಿಧ ಭೋಗಸಾಮಗ್ರಿಗಳನ್ನೂ ಗಳಿಸಿಕೊಟ್ಟು, ಆಕೆಯೊಂದಿಗೆ ಲೋಕಸಾಮಾನ್ಯವಾದ ದಾಂಪತ್ಯ ಭೋಗಗಳನ್ನು ಅನುಭವಿಸಿದನು. ಇಂತು ಸುಕನ್ಯಾ ಚ್ಯವನರು ಕೆಲವುಕಾಲ ಸುಖಶರಧಿಯಲ್ಲಿ ಓಲಾಡುತ್ತಾ ಆ ವನದಲ್ಲಿ ವಾಸಿಸಿದ್ದರು.

ಇತ್ತ, ಚ್ಯವನಮಹರ್ಷಿ ದಂಪತಿಗಳು ಹೀಗೆ ಸುಖಸಾಮ್ರಾಜ್ಯವನ್ನು ಅನುಭವಿಸುತ್ತಲಿರುತ್ತಿರಲು, ಅತ್ತ ಶರ್ಯಾತಿರಾಜನು, - ಹಣ್ಣುಹಣ್ಣು ಮುದುಕನೂ, ವನವಾಸಿಯೂ ಆದ ಆ ಬ್ರಾಹ್ಮಣನಿಗೆ ಒಪ್ಪಿಸಿಬಂದ ತನ್ನ ಮಗಳು ಎಷ್ಟು ಕಷ್ಟ ಸಹನಮಾಡುತ್ತಿರುವಳೋ ಎಂದು ಸದಾ ವ್ಯಸನಪಡುತ್ತಾ, ಆಕೆಯನ್ನೂ, ಅಳಿಯನನ್ನೂ ಕಂಡು ಬಹು ದಿನಗಳಾದ್ದರಿಂದ ಒಂದುಬಾರಿ ಹೋಗಿ ನೋಡಿಕೊಂಡು ಬರಬೇಕೆಂದು ಇಚ್ಛೆಗೊಂಡನು. ಆದರೆ ರಾಜ್ಯವಿಚಾರದ ತೊಂದರೆಯಿಂದ ಬಹುಕಾಲ ಅವಕಾಶವೇ ದೊರೆಯಲಿಲ್ಲ. ಕೊನೆಗೆ ಆತನು, ಒಂದಾನೊಂದು ಯಾಗಮಾಡಬೇಕೆಂದು ನಿರ್ಧರಿಸಿ, ಆ ಯಾಗಕ್ಕೆ ತನ್ನ ಮಗಳನ್ನೂ, ಅಳಿಯನನ್ನೂ ಕರೆದುತರಬೇಕೆಂದು ಆಲೋಚಿಸಿ, ಮಿತಪರಿವಾರ ಸಮೇತನಾಗಿ ಚ್ಯವನಾಶ್ರಮಕ್ಕೆ ಹೊರಟನು.

ಹಿಂದೆ ಮಗಳೊಂದಿಗೆ ಮೊದಲನೆಯ ಆವೃತ್ತಿ ಆ ಪ್ರಾಂತ ಬಂದಿದ್ದಾಗ ನೋಡಿದ ನೋಟಕ್ಕೂ, ಈಗಿನ ನೋಟಕ್ಕೂ ಬಹು ವ್ಯತ್ಯಾಸ ಕಂಡುಬಂದಿತು. ಆಗ ಯಾವ ಸ್ಥಳವು ಶುದ್ಧ ಬೆಂಗಾಡಾಗಿ ತೋರುತ್ತಿದ್ದಿತೋ, ಆ ಸ್ಥಳವು ಈಗ ಭವ್ಯವಾದ ತಪೋವನದಂತೆ, ಎಲೆಮನೆಗಳಿಂದಲೂ, ಯಜ್ಞವೇದಿಕೆಗಳಿಂದಲೂ ಪ್ರಕಾಶಿಸುತ್ತಿದೆ. ಅಲ್ಲಲ್ಲೆ ನಾರುಮಡಿಗಳು ಒಣಗುಹಾಕಲ್ಪಟ್ಟಿವೆ. ಸಾಧು ಪ್ರಾಣಿಗಳಾದ ಜಿಂಕೆ-ಸಾರಗ ಮುಂತಾದುವು ಸಂಚರಿಸುತ್ತಿವೆ. ಆಶ್ರಮದಿಂದ ಹೋಮಧೂಮವು ಹೊರಡುತ್ತಿದೆ. ಶರ್ಯಾತಿಯು,-'ಇದೇನು, ನಾನೇನು ಮಾರ್ಗತಪ್ಪಿ ಇಲ್ಲಿಗೆ ಬಂದೆನೋ, ಅಥವಾ ಚ್ಯವನರು ತಮ್ಮ ಪೂರ್ವಸ್ಥಿತಿಯನ್ನು ಬದಲಾಯಿಸಿರುವರೋ ?' ಎಂದುಕೊಂಡು, ಎರಡು ಹೆಜ್ಜೆ ಮುಂದೆ ಬರುವಷ್ಟರಲ್ಲೇ, ಆಶ್ರಮ ದ್ವಾರಕ್ಕೆ ಸುಕನ್ಯೆಯು ಬಂದು, ದೂರದಲ್ಲಿ ಬರುತ್ತಿದ್ದ ತನ್ನ ಕಡೆಗೆ ನೋಡಿದಂತೆ ಕಾಣಿಸಿತು.—ಸ್ವಲ್ಪ ಹೊತ್ತಿನಲ್ಲೇ, ಆಕೆಯಬಳಿ ನವಮೋಹನಾಂಗನಾದ ಒಬ್ಬ ಪುರುಷನು ಬಂದು ನಿಂತನು. ಅದನ್ನು ಕಂಡ ಶರ್ಯಾತಿಯು ಮೈ ಜುಮ್ಮೆಂದಿತು. ಶರೀರವಾದ್ಯಂತವೂ ರೋಮಾಂಚನಾಯಿತು. ಆಗ ಲಾತನು, ತನ್ನ ಮಗಳು ಮನಸ್ಸಿಗೊಪ್ಪದ ಅಸಹ್ಯ ರೂಪಿಯಾದ ಆ ಮುದಿ ಗಂಡನನ್ನು ಹೇಗೋ ತೀರಿಸಿ, ಮೋಹನಾಂಗನಾದ ಪರಪುರುಷನನ್ನು ಕೂಡಿ, ತನ್ನ ವಂಶಕ್ಕೇ ಕಳಂಕವನ್ನು ತಂದಳೆಂದು ಭಾವಿಸಿ, ಆವಳ ಮುಖವನ್ನು ನೋಡಲೂ ಇಚ್ಛೆಯಿಲ್ಲದೆ, ಅಂತಹ ವ್ಯಭಿಚಾರಿಣಿಯಾದ ಮಗಳನ್ನು ಹೆತ್ತ ನನ್ನ ದುಷ್ಕರ್ಮಕ್ಕಾಗಿ ಮನಸ್ಸಿನಲ್ಲೇ ವ್ಯಥೆಪಡುತ್ತಿದ್ದನು. ಅಷ್ಟರಲ್ಲಿ, ಸುಕನ್ಯಾದೇವಿಯು ತನ್ನ ಪತಿಯೊಂದಿಗೆ, ನಡೆದುಬಂದು ತಂದೆಗೆ ನಮಸ್ಕರಿಸಿದಳು. ಶರ್ಯಾತಿರಾಜನ ಮನಸ್ಸು ಮೋಲ್ಕಂಡಂತೆ, ದುರಭಿಪ್ರಾಯದಿಂದ ಕಳಂಕಿತವಾಗಿದ್ದುದರಿಂದ ಆಕೆಯನ್ನು ಕಣ್ಣೆತ್ತಿಯೂ ನೋಡದೆ, ತಂದೆಯೆಂದು ಎಷ್ಟೋ ಅಭಿಮಾನದಿಂದ ಬಂದು ನಮಸ್ಕಾರ ಮಾಡಿದ ಆಕೆಗೆ ಶುಭವಾಕ್ಯಗಳಿಂದ ಆಶೀರ್ವಾದಮಾಡಿ,-ಯೋಗಕ್ಷೇಮವನ್ನೂ ವಿಚಾರಿಸದೆ-'ಛೀ ಭ್ರಷ್ಟಳೆ, ಏನುಕೆಲಸಮಾಡಿದೆ. ಅಗ್ನಿಸಾಕ್ಷಿಕವಾಗಿ ಪಾಣಿಗ್ರಹಣಮಾಡಿದ ಪತಿಯನ್ನು ತ್ಯಜಿಸಿ, ವಿಷಯಾತುರಳಾಗಿ ಇಂ

ತಹ ದುಷ್ಕಾರ್ಯ ಮಾಡಬಹುದೆ? ಸ್ತ್ರೀಯರಿಗೆ ಪತಿಗಿಂತಲೂ ಪೂಜ್ಯವ ಸ್ತುವಾರು? ಹೀಗಿರುವಲ್ಲಿ ನೀನು ಅಂತಹ ಪತಿಯನ್ನು ವೃದ್ಧನೆಂದೂ ಕುರೂಪಿಯೆಂದೂ ತ್ಯಜಿಸಿ, ಎಟ ಪುರುಷನಲ್ಲಿ ಬೆರೆದು, ನರಕಕ್ಕೊಳಗಾದುದು ಮಾತ್ರವಲ್ಲದೆ, ಪವಿತ್ರವಾದ ನಮ್ಮ ವಂಶಕ್ಕೂ ಶಾಶ್ವತವಾದ ಅಪಕೀರ್ತಿಯನ್ನು ಉಂಟುಮಾಡಿದೆಯಲ್ಲಾ! ನಿನ್ನನ್ನು ಹೆತ್ತು ನಾನು ಮಹಾ ಪಾಪಿಯಾದೆನು. ಹೆಣ್ಣುಮಕ್ಕಳು ತಮ್ಮ ಸಚ್ಚರಿತ್ರೆಯಿಂದ ಹೆತ್ತ ಮನೆಯನ್ನೂ ಹೊಕ್ಕ ಮನೆಯನ್ನೂ ಪವಿತ್ರಗೊಳಿಸಿ, ತಾಯಿ ತಂದೆಗಳಿಗೆ ಕೀರ್ತಿಪ್ರದರಾಗಬೇಕು. ಆದರೆ ನಿನ್ನಂತಹ ಕುಲಕಲಂಕಿನಿಯರಂತೆ ಉಭಯ ಕುಲಗಳನ್ನೂ ಅಧೋಗತಿಗೆ ನೂಕುವ ಪರಮ ಪಾಪಿಗಳುಂಟೆ?'' ಎಂದು ಧಿಕ್ಕರಿಸಿ ನುಡಿದು, ಹಿಂದಿರುಗಿ ಹೊರಡಲನುವಾದನು.

ತಂದೆಯಾಡಿದ ಆ ಮಾತು, ಸುಕನ್ಯೆಗೆ ಕೋಪದಾಯಕವಾಗಲಿಲ್ಲ. ತಮ್ಮ ಸ್ಥಿತಿಯನ್ನು ತಿಳಿಯದಿದ್ದುದರಿಂದ ಆತನು ಸ್ವಾಭಾವಿಕವಾಗಿ ಹಾಗೆ ದುರ್ವಾಕ್ಯಗಳನ್ನು ಆಡಿದನೆಂದುಕೊಂಡು, ಸುಕನ್ಯೆಯು-'ತಂದೆಯೇ, ಪವಿತ್ರವಾದ ನಿನ್ನ ಗರ್ಭದಲ್ಲಿ ಜನಿಸಿದ ನಾನು ಅಂತಹ ಕುಲಘಾತಕಳಾಗುವೆನೆಂದು ಭಾವಿಸಿದೆಯಾ! ಹಾಗೆ ತಿಳಿಯಬಾರದು. ಇವರೇ, ಭೃಗು ಪುತ್ರರಾದ ಚ್ಯವನಮಹರ್ಷಿಗಳು. ನೀನು ಯಾರಿಗೆ ನನ್ನನ್ನು ಅಗ್ನಿಸಾಕ್ಷಿಕವಾಗಿ ವಿವಾಹಮಾಡಿಕೊಟ್ಟೆಯೋ ಅವರೇ ಇವರು. ಇದರಲ್ಲಿ ಲೇಶಮಾತ್ರವೂ ಸಂಶಯವಿಲ್ಲ.' ಎಂದು ಅಶ್ವಿನೀ ದೇವತೆಗಳ ಪ್ರಸಾದದಿಂದ ಅವರ ಜರಾಭಾರವು ನಿವಾರಣೆಯಾಗಿ ಸುಮನೋಹರ ರೂಪವೂ, ನಿತ್ಯ ಯೌವನವೂ ಪ್ರಾಪ್ತವಾದ ಬಗೆಯನ್ನು ವಿವರಿಸಿದಳು. ಆ ಪರಮಾಶ್ಚರ್ಯಕರ ವಿಚಾರವನ್ನು ಕೇಳಿ ರಾಜನು ಪರಮಾನಂದಭರಿತನಾಗಿ, ಅವರೊಂದಿಗೆ ಹೊರಟು ಶೀಘ್ರದಲ್ಲೇ ರಾಜಧಾನಿಯನ್ನು ಸೇರಿದನು.

ತರುವಾಯ ಶರ್ಯಾತಿಯು ಪ್ರಾರಂಭಿಸಿದ ಯಜ್ಞಕ್ಕೆ ಚ್ಯವನಮಹರ್ಷಿಯೇ ಪುರೋಹಿತನಾಗಿ, ಅಗ್ನಿ ಮುಖದಲ್ಲಿ ಹವಿಸ್ಸಮರ್ಪಣೆಯಾಗುವ ಕಾಲ ಬಂದಾಗ್ಗೆ, ಇಂದ್ರಾದಿ ಅಷ್ಟ ದಿಕ್ಪಾಲಕರಿಗೆ ಸಮರ್ಪಿಸುವಂತೆಯೇ, ತನಗೆ ಪರಮೋಪಕಾರಿಗಳಾದ ಅಶ್ವಿನೀದೇವತೆಗಳಿಗೂ ಹವಿರ್ಭಾಗವನ್ನು

ಕೊಡಿಸಿದನು. ಆವರೆಗೆ ಹಿಂದೆ ಯಾವಾಗಲೂ, ಅಶ್ವಿನೀದೇವತೆಗಳಿಗೆ ಕೊಡದಿದ್ದ ಹವಿರ್ಭಾಗವನ್ನು ಆಗ ಕೊಟ್ಟದ್ದು, ಮಹಾಪರಾಧವೆಂದು ಬಗೆದು, ದೇವೇಂದ್ರನು ಅಂತಹ ಅಕೃತ್ಯಮಾಡಿದ ಚ್ಯವನನನ್ನು ಧ್ವಂಸಮಾಡಿಬಿಡುತ್ತೇನೆಂದು ವಜ್ರಹಸ್ತನಾಗಿ ಮೇಲ್ವರಿದು ಬಂದನು. ಆಗ ಚ್ಯವನ ಮಹರ್ಷಿಯು, ತನ್ನ ತಪೋಮಹಿಮೆಯಿಂದ, ವಜ್ರಹಸ್ತನಾದ ಇಂದ್ರನ ಎತ್ತಿದ ಕೈಯು ಹಾಗೇ ಸ್ತಂಭಿಸಿ ನಿಂತುಬಿಡಲೆಂದು ಆಜ್ಞಾಪಿಸಿಬಿಟ್ಟನು. ಮಹರ್ಷಿಯ ತಪಸ್ಸಾಮರ್ಥ್ಯವೆಂಥಾದ್ದೋ, ಭಯಂಕರವಾದ ವಜ್ರಾಯುಧ ಸಹಿತವಾದ ತ್ರಿಲೋಕ ಪಾಲಕನ ಎತ್ತಿದ ಹಸ್ತವು ಅತ್ತಿತ್ತ ಅಲುಗಾಡಲು ಶಕ್ತವಾಗದೆ-ಹಾಗೆಯೇ ನಿಂತು ಹೋಯಿತು.



# ಉ ಪ ಸಂ ಹಾ ರ.

ದೇವೋತ್ತಮನಾದ ಇಂದ್ರನಿಗೆ ಪ್ರಾಪ್ತವಾದ ಆ ಪರಾಭವಕ್ಕಾಗಿ, ಯಾಗಮಂಟಪದಲ್ಲಿ ನೆರೆದ ಸಮಸ್ತರೂ ಭೀತರಾಗಿ, ಚ್ಯವನಮಹರ್ಷಿಯನ್ನು ಬೇಡಿಕೊಂಡರು. ಮಹರ್ಷಿಯಾದರೋ, ಇತರ ದೇವತೆಗಳಂತೆಯೇ ಅಶ್ವಿನೀ ದೇವತೆಗಳೂ, ಲೋಕದಲ್ಲಿ ಪ್ರಾಣಿಗಳಿಗುಂಟಾಗುವ ರೋಗೋಪದ್ರವಗಳನ್ನು ನೀಗಿಸಿ ಲೋಕ ಕ್ಷೇಮವನ್ನು ಬಯಸುವವರಾದುದರಿಂದ ಅವರಿಗೂ ಇನ್ನು ಮುಂದೆ ನಡೆವ ಯಾಗಗಳಲ್ಲಿ ಹವಿರ್ಭಾಗವನ್ನು ಕೊಡುವಂತೆ ಇಂದ್ರನು ಸಮ್ಮತಿಸಬೇಕೆಂದೂ ಹಾಗಾದರಲ್ಲದೆ, ಆತನ ಹಸ್ತವು ಸ್ವಾಧೀನಕ್ಕೆ ಬಾರದೆಂದೂ ಹೇಳಿಬಿಟ್ಟನು. ದೇವೇಂದ್ರನು ಆ ಮಹರ್ಷಿಯ ತಪಸ್ಸಾಮರ್ಥ್ಯವನ್ನು ಮೆಚ್ಚಿಕೊಂಡು, ಆತನ ಇಷ್ಟೆಯಂತೆ ಹಸನ್ಮುಖದಿಂದ ಅಶ್ವಿನೀದೇವತೆಗಳೂ ಯಾಗಗಳ ಹವಿರ್ಭಾಗಕ್ಕೆ ಪಾತ್ರರಾಗಲಿ ಎಂದು ಸಮ್ಮತಿಯಿತ್ತನು. ತರುವಾಯ ಆತನ ಕೈಯು ಸ್ವಾಭಾವಿಕ ಸ್ಥಿತಿಗೆ ಬರುವಂತೆ ಚ್ಯವನಮಹರ್ಷಿಯು ಅನುಮತಿಸಿದನು. ಯಾಗವು ಯುಕ್ತರೀತಿಯಲ್ಲಿ ಕೊನೆಗಂಡು ಅವಭೃತಸ್ನಾನವಾಯಿತು. ಶರ್ಯಾತಿ

ರಾಜರ್ಷಿಯೂ, ಮಹಾ ಪ್ರತಿಭಾಶಾಲಿಯಾದ ತನ್ನ ಅಳಿಯನನ್ನೂ, ಮಹಾ ಪತಿವ್ರತಾ ಶಿರೋಮಣಿಯಾಗಿ, ತನ್ನ ಪಾತಿವ್ರತ್ಯ ಪ್ರಭಾವದಿಂದ ದೇವತೆಗಳನ್ನೂ ಮೆಚ್ಚಿಸಿದ ತನ್ನ ಮಗಳನ್ನೂ ಮಹಾ ಸಂಭ್ರಮದಿಂದ ಪುನಃ ತಪೋವನಕ್ಕೆ ಕಳುಹಿಸಿದನು.

ಯಾವ ಪ್ರಾಚೀನ ಭಾರತವು ಇಂತಹ ಪುತ್ರ ಪುತ್ರಿಯರನ್ನು ಪಡೆದು ಜಗತ್ತಿಗೇ ಮೇಲೆನ್ನಿಸಿ ಮಾರ್ಗದರ್ಶಕವಾಗಿದ್ದಿತೋ ಮಹಾ ಮಹಮರಾದ ಅಂತಹ ಪುಣ್ಯಶೀಲರ ಪವಿತ್ರ ಚರಿತ್ರೆಗಳು ಇಂದಿನ ಭಾರತೀಯರಿಗೆ ಮಾರ್ಗದರ್ಶಕವಾಗಿ ಅವರೂ ತಪಸ್ಸಾಮರ್ಥ್ಯದಿಂದ ಸಕಲ ಸಿದ್ಧಿಗಳನ್ನೂ ಸ್ವಾತಂತ್ರ್ಯ ಸೌಭಾಗ್ಯವನ್ನೂ ಗಳಿಸಲು ಸಹಾಯಕವಾಗಲಿ.

ತ ಥಾ ಸ್ತು.



